# ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಪಾತ್ರ

## (ಭದ್ರಾ ಅಚ್ಚುಕಟ್ಟು ಪ್ರದೇಶದ ಒಂದು ಅಧ್ಯಯನ)

ಅರ್ಥಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಪಿಎಚ್.ಡಿ. ಪದವಿಗಾಗಿ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು

**ಎಂ. ವೆಂಕಟೇಶ್**

ಹಿರಿಯ ಶ್ರೇಣಿ ಉಪನ್ಯಾಸಕರು
ಡಿ.ವಿ.ಎಸ್. ಸಂಜೆ ಕಾಲೇಜು
ಶಿವಮೊಗ್ಗ

ಮಾರ್ಗದರ್ಶಕರು

**ಡಾ. ಟಿ. ಆರ್. ಚಂದ್ರಶೇಖರ**

ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೦೭

# ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಪಾತ್ರ

## (ಭದ್ರಾ ಅಚ್ಚುಕಟ್ಟು ಪ್ರದೇಶದ ಒಂದು ಅಧ್ಯಯನ)

ಅರ್ಥಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


ಸಂಶೋಧಕರು

**ಎಂ. ವೆಂಕಟೇಶ್**

ಹಿರಿಯ ಶ್ರೇಣಿ ಉಪನ್ಯಾಸಕರು

ಡಿ.ವಿ.ಎಸ್. ಸಂಜೆ ಕಾಲೇಜು

ಶಿವಮೊಗ್ಗ

ಮಾರ್ಗದರ್ಶಕರು

**ಡಾ. ಟಿ.ಆರ್. ಚಂದ್ರಶೇಖರ**

ಪ್ರಾಧ್ಯಾಪಕರು

ಅಭಿವೃದ್ಧಿ ಅಧ್ಯಯನ ವಿಭಾಗ





ಅಭಿವೃದ್ಧಿ ಅಧ್ಯಯನ ವಿಭಾಗ

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೦೭

# ಪ್ರಮಾಣ ಪತ್ರ

ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಪಾತ್ರ (ಭದ್ರಾ ಅಚ್ಚುಕಟ್ಟು ಪ್ರದೇಶದ ಒಂದು ಅಧ್ಯಯನ) ಎಂಬ ವಿಷಯದ ಕುರಿತು ಡಾ. ಟಿ.ಆರ್. ಚಂದ್ರಶೇಖರ ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನ ಮಾಡಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಇದುವರೆಗೆ ಯಾವುದೇ ಪದವಿ ಅಥವಾ ಡಿಪ್ಲೋಮಾಗಾಗಿ ಪ್ರಸ್ತುತಪಡಿಸಿಲ್ಲ. ಅಲ್ಲದೇ ಇದು ಇಲ್ಲಿಯವರೆಗೆ ಎಲ್ಲಿಯೂ ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಗೊಂಡಿಲ್ಲ ಮತ್ತು ಇದು ನನ್ನ ಸ್ವತಂತ್ರ ಸಂಶೋಧನ ಅಧ್ಯಯನ ವಾಗಿದೆಯೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : .೦೮.೨೦೦೭

ಎಂ. ವೆಂಕಟೇಶ್
ಸಂಶೋಧಕರು
ಹಿರಿಯ ಶ್ರೇಣಿ ಉಪನ್ಯಾಸಕರು
ಡಿ.ವಿ.ಎಸ್. ಸಂಜೆ ಕಾಲೇಜು
ಶಿವಮೊಗ್ಗ

# ದೃಢೀಕರಣ ಪತ್ರ

ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಪಾತ್ರ (ಭದ್ರಾ ಅಚ್ಚುಕಟ್ಟು ಪ್ರದೇಶದ ಒಂದು ಅಧ್ಯಯನ) ಎಂಬ ವಿಷಯದ ಕುರಿತು ಶ್ರೀ ಎಂ. ವೆಂಕಟೇಶ ಅವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನ ಮಾಡಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ಇದುವರೆಗೆ ಯಾವುದೇ ಪದವಿ ಅಥವಾ ಡಿಪ್ಲೋಮಾಗಾಗಿ ಪ್ರಸ್ತುತಪಡಿಸಿಲ್ಲ. ಅಲ್ಲದೇ ಇದು ಇಲ್ಲಿಯವರೆಗೆ ಎಲ್ಲಿಯೂ ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಗೊಂಡಿಲ್ಲ ಮತ್ತು ಇದು ಅವರ ಸ್ವತಂತ್ರ ಸಂಶೋಧನ ಅಧ್ಯಯನ ವಾಗಿದೆಯೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : .೦೮.೨೦೦೭

ಡಾ. ಟಿ.ಆರ್. ಚಂದ್ರಶೇಖರ
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಅಧ್ಯಯನ ಕೈಗೊಳ್ಳಲು ಅವಕಾಶ ನೀಡಿದ ಹಿಂದಿನ ಕುಲಪತಿಗಳಾಗಿದ್ದ ಮಾನ್ಯ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ನಿಕಟಪೂರ್ವ ಕುಲಪತಿಗಳಾದ ಮಾನ್ಯ ಡಾ. ಬಿ.ಎ. ವಿವೇಕ ರೈ ಅವರಿಗೆ, ಈಗಿನ ಕುಲಪತಿಗಳಾದ ಮಾನ್ಯ ಡಾ. ಕೆ.ವಿ. ನಾರಾಯಣ ಅವರಿಗೆ ಹೃದಯಪೂರ್ವಕ ಕೃತಜ್ಞತೆಗಳು.

ಕುಲಸಚಿವರಾದ ಮಾನ್ಯ ಶ್ರೀ ವಿ. ಶಂಕರ್ ಅವರಿಗೆ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಡಿ. ಪಾಂಡುರಂಗಬಾಬು ಅವರಿಗೆ, ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರಿಗೆ, ಸಮಾಜವಿಜ್ಞಾನಗಳ ನಿಕಾಯದ ಡೀನ್ ಆದ ಡಾ. ದೇವರಕೊಂಡಾರೆಡ್ಡಿ ಅವರಿಗೆ, ಉಪಕುಲಸಚಿವರಾದ ಡಾ. ಪ್ರೇಮಕುಮಾರ ಅವರಿಗೆ ಹಾಗೂ ಅಭಿವೃದ್ಧಿ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಎಚ್.ಡಿ. ಪ್ರಶಾಂತ್ ಅವರಿಗೆ ನಾನು ಅಭಾರಿ.

ಜಾಗತಿಕ ಸಮಸ್ಯೆಯಾಗಿರುವ ಪಂಚಭೂತಗಳಲ್ಲಿ ಒಂದಾದ ಜಲಸಂಪತ್ತಿನ ನಿರ್ವಹಣೆಯ ಕುರಿತು ಅಧ್ಯಯನ ಮಾಡಲು ತಮ್ಮ ಅಮೂಲ್ಯ ಜ್ಞಾನ ಮತ್ತು ಸಮಯವನ್ನು ಧಾರೆ ಎರೆದು ಮಾರ್ಗದರ್ಶನ ಮಾಡಿದ ಡಾ. ಟಿ.ಆರ್. ಚಂದ್ರಶೇಖರ ಅವರಿಗೆ, ಅಧ್ಯಯನ ಮಾರ್ಗದಲ್ಲಿ ಕಂಡುಬಂದ ಅನುಮಾನ ಗೊಂದಲಗಳಿಗೆ ವಿದ್ವತ್ಪೂರ್ಣ ಪರಿಹಾರಗಳನ್ನು ಸೂಚಿಸಿದ ಹಿರಿಯರಾದ ಪೂಜ್ಯ ಡಾ. ಬಿ. ಶೇಷಾದ್ರಿ ಅವರಿಗೆ, ಸಂಶೋಧನೆಯ ಆರಂಭದಿಂದ ಪೂರ್ಣಗೊಳ್ಳುವವರಿಗೆ ಅಧ್ಯಯನದ ಎಲ್ಲ ಹಂತದ ಕಾರ್ಯಚಟುವಟಿಗಳಲ್ಲಿ ನನ್ನ ಒಡನಾಡಿಯಾಗಿದ್ದು ಸಹಕರಿಸಿದ ಗೆಳೆಯ ಡಾ. ಜೆ. ಕೃಷ್ಣ ಅವರಿಗೆ, ಅಧ್ಯಯನಕ್ಕೆ ಅಗತ್ಯವಾದ ಆಕರಗಳನ್ನು ಒದಗಿಸಿ ನನ್ನ ಆಲೋಚನಾ ವಿಧಾನಗಳನ್ನು ತಿದ್ದುವ ಮೂಲಕ ಪ್ರೋತ್ಸಾಹ ನೀಡಿದ ಡಾ. ಟಿ.ಎಸ್. ರಾಘವೇಂದ್ರ ಅವರಿಗೆ ಮತ್ತು ಪ್ರೊ. ಗೌಡಗೆರೆ ನಾರಾಯಣರಾವ್ ಅವರಿಗೆ ನಾನು ಚಿರಋಣಿ.

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಯು.ಜಿ.ಸಿ.ಎಫ್.ಐ.ಪಿ. ಯೋಜನೆಯಲ್ಲಿ ಆಂತರಿಕ ಸಂಶೋಧನಾ ವಿದ್ಯಾರ್ಥಿಯಾಗಿದ್ದಾಗ ನನ್ನನ್ನು ಕುಟುಂಬದ ಸದಸ್ಯನಂತೆ ಪೋಷಿಸಿದ ಹಾಗೂ ಅಭಿವೃದ್ಧಿಯ ವಿಭಿನ್ನ ಆಲೋಚನೆಗಳನ್ನು ಮತ್ತು ವಿಧಾನಗಳನ್ನು ಕಲಿಸಿಕೊಟ್ಟ ಡಾ. ಎಂ. ಚಂದ್ರ ಪೂಜಾರಿ ಅವರಿಗೆ, ನಿಕಟಪೂರ್ವ ಮುಖ್ಯಸ್ಥರಾದ ಶ್ರೀ ಎ. ಶ್ರೀಧರ ಅವರಿಗೆ ಹಾಗೂ ಡಾ. ಸಿದ್ದಗಂಗಮ್ಮ ಅವರಿಗೆ, ನನ್ನ ಕಷ್ಟದ ದಿನಗಳಲ್ಲಿ ಸಹೋದರರಂತೆ ತಮ್ಮ ತನುಮನಧನಗಳನ್ನು ನೀಡಿ ಬೆನ್ನುತಟ್ಟಿ ಉತ್ತೇಜನ ನೀಡಿದ ಶ್ರೀ ಜನಾರ್ದನ ಅವರಿಗೆ, ಅಧ್ಯಯನದ ಪ್ರಗತಿಗಾಗಿ ಒತ್ತಾಯಿಸುತ್ತಿದ್ದ ಪ್ರಸಾರಾಂಗ, ಮಾರಾಟ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಎಚ್.ಬಿ. ರವೀಂದ್ರ ಅವರಿಗೆ ನಾನು ಸದಾ ಉಪಕೃತ.

ವಿಭಾಗದಲ್ಲಿ ನನ್ನ ಸಹಪಾಠಿಯಾಗಿದ್ದು ಸಹೋದರ ಪ್ರೀತಿ ತೋರಿದ ಕು. ಸವಿತಾ ಅವರಿಗೆ, ವಿಭಾಗದ ಶ್ರೀ ಶಂಕರ್, ಶ್ರೀಮತಿ ಗಂಗಮ್ಮ ಗೌಳಿ, ಶ್ರೀ ಗಂಗಾಧರ ಅವರಿಗೆ ಹಾಗೂ ಬೇರೆ ಬೇರೆ ಸಂದರ್ಭಗಳಲ್ಲಿ ಸಹಕರಿಸಿದ ಕನ್ನಡ ವಿಶ್ವವಿದ್ಯಾಲಯದ ಎಲ್ಲ ಅಧ್ಯಾಪಕ ವರ್ಗ ಮತ್ತು ಸಿಬ್ಬಂದಿ ವರ್ಗಕ್ಕೆ ನನ್ನ ಪ್ರಣಾಮಗಳು.

ಸಂಶೋಧನೆಗೆ ಅನುಕೂಲ ಮಾಡಿಕೊಟ್ಟ, ನನ್ನ ಮಾತೃ ಸಂಸ್ಥೆಯಾದ ಡಿ.ವಿ.ಎಸ್. ಆಡಳಿತ ಮಂಡಳಿ ಶಿವಮೊಗ್ಗ ಇದರ ಎಲ್ಲಾ ಸದಸ್ಯರಿಗೆ, ಆಡಳಿತಾಧಿಕಾರಿಗಳಾದ ಡಾ. ನಾಗರಾಜ್ ಅವರಿಗೆ, ನಾನು ಕಾರ್ಯನಿರ್ವಹಿಸುವ ಡಿ.ವಿ.ಎಸ್. ಸಂಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಆರ್. ಮಹೇಶ್, ಅಧ್ಯಾಪಕರಾದ ಡಾ. ಆರ್. ಮೂರ್ತಿ ಮತ್ತು ಶ್ರೀಮತಿ ಎಸ್.ಕೆ. ಸಾವಿತ್ರಿ ಅವರಿಗೆ ಹಾಗೂ ಅಧ್ಯಾಪಕೇತರ ಸಿಬ್ಬಂದಿ ವರ್ಗದವರಿಗೆ,

ಯು.ಜಿ.ಸಿ.ಎಫ್.ಐ.ಪಿ. ಯೋಜನೆಯನ್ನು ಆಯ್ಕೆ ಮಾಡಿಕೊಳ್ಳಲು ಮಾಹಿತಿ ನೀಡಿದ ಕುವೆಂಪು ವಿಶ್ವವಿದ್ಯಾಲಯದ ಕಾಲೇಜು ಅಭಿವೃದ್ಧಿ ಮಂಡಳಿಯ ನಿರ್ದೇಶಕರಾಗಿದ್ದ ಈಗ ಕುಲಪತಿಗಳಾಗಿರುವ ಮಾನ್ಯ ಡಾ. ಬಿ.ಎಸ್. ಶೇರಿಗಾರ್ ಅವರಿಗೆ, ಶಿವಮೊಗ್ಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಲ್.ಎನ್. ಮಹೇಂದ್ರಕರ್ ಅವರಿಗೆ, ಅಧ್ಯಯನದ ತಾಂತ್ರಿಕ ಸಂಗತಿಗಳಿಗೆ ಸಲಹೆ-ಸೂಚನೆಗಳನ್ನು ನೀಡಿದ ಕುವೆಂಪು ವಿಶ್ವವಿದ್ಯಾನಿಲಯದ ಅನ್ವಯಿಕ ಭೂವಿಜ್ಞಾನ ವಿಭಾಗದ ಎಲ್ಲಾ ಅಧ್ಯಾಪಕರಿಗೆ, ಕುವೆಂಪು ವಿಶ್ವವಿದ್ಯಾನಿಲಯ ಅರ್ಥಶಾಸ್ತ್ರದ ಅಧ್ಯಾಪಕರ ಸಂಘದ ಅಧ್ಯಕ್ಷರಾದ ಪ್ರೊ. ಟಿ.ಎಚ್. ಕೃಷ್ಣಮೂರ್ತಿ ಅವರಿಗೆ, ನಿರ್ದೇಶಕರಾದ ಮಿತ್ರ ಎಚ್.ಎಂ. ಶಿವಕುಮಾರ್, ಖಜಾಂಚಿ ಶ್ರೀ ಪಂಚಾಕ್ಷರಪ್ಪ ಅವರಿಗೆ ಅನಂತ ಧನ್ಯವಾದಗಳು.

ಕ್ಷೇತ್ರಕಾರ್ಯದಲ್ಲಿ ಸಹಕಾರ ನೀಡಿದ ಭದ್ರಾ ಅಚ್ಚುಕಟ್ಟು ಪ್ರದೇಶದ ನೀರು ಬಳಕೆದಾರರ ಸಹಕಾರ ಸಂಘಗಳ ಎಲ್ಲ ಪದಾಧಿಕಾರಿಗಳಿಗೆ, ಭದ್ರಾ ಕಾಡಾದ ಅಧಿಕಾರಿಗಳಾದ ಶ್ರೀ ಎಚ್. ರಾಮಪ್ಪ, ಶ್ರೀ ಚಂದ್ರಯ್ಯ, ಶ್ರೀ ಲೋಕೇಶ ಹಾಗೂ ಶ್ರೀಮತಿ ಸರೋಜಮ್ಮ ಅವರಿಗೆ, ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗೆ ಕಠಿಣವಾಗಿ ಶ್ರಮಿಸಿದ ಶ್ರೀ ವೀರೇಶ್ ಜಾನೇಕಲ್, ಶ್ರೀ ಬಸವರಾಜ, ಹೊಸಹಳ್ಳಿ ಶ್ರೀ ಜಿ.ಎಸ್. ವೀರೇಶ್ ಮತ್ತು ರಾಜು ಅವರಿಗೆ ಅನಂತ ವಂದನೆಗಳು.

ಕರಡು ತಿದ್ದುಪಡಿಯಲ್ಲಿ ನೆರವಾದ ಶ್ರೀ ಅರುಣ ಜೋಳದ ಕೂಡ್ಲಿಗಿ, ಶ್ರೀ ಚಂದ್ರಪ್ಪ ಮತ್ತು ಶ್ರೀ ನಿಂಗಪ್ಪ ಅವರಿಗೆ,

ನನ್ನನ್ನು ಕಾಲೇಜಿನಿಂದ ಯು.ಜಿ.ಸಿ. ಸೌಲಭ್ಯ ಪಡೆದು ಬಿಡುಗಡೆಗೊಳಿಸಲು ಇದ್ದ ತಾಂತ್ರಿಕ ತೊಂದರೆಗಳನ್ನು ನಿವಾರಿಸಿದ ಜಂಟಿ ನಿರ್ದೇಶಕರ ಕಛೇರಿಯ ಸಹಾಯಕ ನಿರ್ದೇಶಕರಾದ ಶ್ರೀ ಎಚ್. ಮಂಜುನಾಥ್ ಅವರಿಗೆ, ಪ್ರೊ. ರಾಚಪ್ಪ, ಶ್ರೀ ಜಿ. ಪರಮೇಶ್ವರಪ್ಪ, ಶ್ರೀ ಕರುಣಾಕರ, ಶ್ರೀ ಕೆ.ಜಿ. ವೆಂಕಟೇಶ್, ಟಿ.ಆರ್. ಗೋಪಾಲ, ಶ್ರೀ ಎ.ಟಿ. ಪದ್ಮೇಗೌಡ ಅವರಿಗೆ,

ನನ್ನನ್ನು ಸಾಕಿಸಲುಹಿದ ನನ್ನ ಅಮ್ಮ, ಅಪ್ಪ ಹಾಗೂ ಬಂಧುಬಾಂಧವರಿಗೆ, ಸಂಶೋಧನಾ ಅವಧಿಯಲ್ಲಿ ನನ್ನ ಅನುಪಸ್ಥಿತಿಯನ್ನು ಸಹಿಸಿಕೊಂಡ ನನ್ನ ಮಡದಿ ಶ್ರೀಮತಿ ಅರುಣಾವತಿ, ಮಗ ಸಿದ್ಧಾರ್ಥನಿಗೆ, ನನ್ನ ಬಾಲ್ಯ ಸ್ನೇಹಿತರಾದ ಶ್ರೀ ಬಿ. ಈಶ್ವರಪ್ಪ, ಶ್ರೀ ಜಿ. ನಾರಾಯಣಪ್ಪ, ಶ್ರೀ ಕೃಷ್ಣಪ್ಪ ಹಾಗೂ ಶ್ರೀ ಎಂ. ನಾರಾಯಣಮೂರ್ತಿ ಅವರಿಗೆ ಮತ್ತು ನನ್ನ ಸಮಸ್ತ ವಿದ್ಯಾರ್ಥಿವೃಂದಕ್ಕೆ ಕೃತಜ್ಞತೆಗಳು.

ಅಕ್ಷರ ಜೋಡಣೆ ಮಾಡಿಕೊಟ್ಟ ಶ್ರೀಮತಿ ಎ. ನಾಗವೇಣಿ ಅವರಿಗೆ ವಂದನೆಗಳು.

**ಡಾ. ಎಂ. ವೆಂಕಟೇಶ್**

# ಪರಿವಿಡಿ

# ಕೋಷ್ಟಕ ಸೂಚಿ

ನಕ್ಷೆ - 5


COMMAND AREA MAP OF
TUNGA ANICUT IN SHIMOGA DISTRICT
ತುಂಗಾ ಜಲಾಶಯ ಯೋಜನೆಯಲ್ಲಿ
ಶಿವಮೊಗ್ಗ ಜಿಲ್ಲೆಯ
ಅಚ್ಚುಕಟ್ಟು ಪ್ರದೇಶ
SHIMOGA TALUK
BHADRAVATI TALUK
ತುಂಗಾ ಎಡದಂಡೆನಾಲೆ
TUNGA LBC
TUNGA RBC
ತುಂಗಾ ಬಲದಂಡೆನಾಲೆ
TUNGA ANICUT
ತುಂಗಾ ಜಲಾಶಯ
KILOMETERS
NRDMS CENTRE
SHIMOGA
INDEX
VILLAGE BOUNDARY
CANAL ALIGHNMENT
RIVER
CANAL DISTRIBUTERIES

# ಅಧ್ಯಾಯ ಒಂದು

# ವಿಷಯ ಪ್ರವೇಶ

೧.೧. ವಿಷಯದ ಸಮಸ್ಯೀಕರಣ

೧.೨. ಅಧ್ಯಯನದ ಉದ್ದೇಶಗಳು

೧.೩. ಅಧ್ಯಯನದ ಸ್ವರೂಪ, ವ್ಯಾಪ್ತಿ, ಪ್ರಾಮುಖ್ಯತೆ ಮತ್ತು ಮಿತಿಗಳು

೧.೪. ಅಧ್ಯಯನದ ವಿಧಾನ

೧.೫. ಅಧ್ಯಾಯಗಳ ವಿನ್ಯಾಸ

# ಅಧ್ಯಾಯ ೧

# ವಿಷಯ ಪ್ರವೇಶ

## ಪ್ರಸ್ತಾವನೆ

ಪ್ರಸ್ತುತ ಅಭಿವೃದ್ಧಿ ಕುರಿತ ಸೈದ್ಧಾಂತಿಕ ಚರ್ಚೆಯಲ್ಲಿ ಕೇಂದ್ರಸ್ಥಾನ ಆಕ್ರಮಿಸಿಕೊಂಡಿರುವ ಪರಿಭಾವನೆ ಎಂದರೆ ಅಭಿವೃದ್ಧಿಯಲ್ಲಿ 'ಜನರ ಸಹಭಾಗಿತ್ವ' ಅಥವಾ 'ಸಹಭಾಗಿತ್ವ ಅಭಿವೃದ್ಧಿ' ಎಂಬುದಾಗಿದೆ. "ಸಹಭಾಗಿತ್ವ ಅಭಿವೃದ್ಧಿ ಎಂಬುದು ತಳಮಟ್ಟದಲ್ಲಿ ಬಹುಮುಖಿ ಅಭಿವೃದ್ಧಿಯ ಗುರಿಗಳನ್ನು ತಲುಪಲು ಮತ್ತು ತಳಮಟ್ಟದ ಜನಸಮುದಾಯಗಳೇ ಅವರ ಅಗತ್ಯಗಳ ಬಗ್ಗೆ ಸ್ವಯಂ ನಿರ್ಧಾರಗಳನ್ನು ಕೈಗೊಳ್ಳುವ ಒಂದು ಕಾರ್ಯ ಪ್ರಕ್ರಿಯೆಯನ್ನು ಸೂಚಿಸುತ್ತದೆ" (ಮೋಹನ್ ಜಿ. ಮತ್ತು ಸ್ಟೋಕೆ ಕೆ.-೨೦೦೦). ಸಹಭಾಗಿತ್ವ ಎಂಬುದು ಪಾಲು ಪಡೆಯುವಿಕೆ, ಪ್ರಭಾವ ಬೀರುವಿಕೆ ಮತ್ತು ಅಧಿಕಾರದಲ್ಲಿ ಪಾಲುದಾರಿಕೆಗಳಿಗೆ ಸಂಬಂಧಿಸಿದೆ. ಜನರು ಅಭಿವೃದ್ಧಿ ಯೋಜನೆಯಲ್ಲಿ ಭಾಗವಹಿಸಿ, ಅದರ ವಿನ್ಯಾಸ, ಅನುಷ್ಠಾನ, ಮೌಲ್ಯಮಾಪನ ಮೊದಲಾದವುಗಳನ್ನು ಕೈಗೊಳ್ಳುವಾಗ ಎಲ್ಲ ನಿರ್ಧಾರಗಳು ಜನರಿಂದಲೇ ಆಗುವಂತಿದ್ದರೆ ಅದನ್ನು 'ಸಹಭಾಗಿತ್ವ' ಎಂದು ಪರಿಗಣಿಸಲಾಗುತ್ತದೆ. ಆರಂಭದಿಂದಲೂ 'ಅಭಿವೃದ್ಧಿ'ಯನ್ನು ತಜ್ಞರೆನಿಸಿಕೊಂಡವರು, ಸರ್ಕಾರ, ಆಡಳಿತಗಾರರು ನಿರ್ವಹಿಸಿಕೊಂಡು ಬಂದಿದ್ದಾರೆ. ಈ ಬಗೆಯ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನರು ಕೇವಲ ಅದರ 'ಫಲಾನುಭವಿ'ಗಳಾಗಿರುತ್ತಾರೆ. ಜನರಿಗೆ ಯಾವುದು ಸರಿ, ಯಾವುದು ಬೇಕು, ಅದನ್ನು ಹೇಗೆ ನೀಡಬೇಕು ಎಂಬುದನ್ನೆಲ್ಲಾ 'ತಜ್ಞರು' ನಿರ್ಧರಿಸುವಂತ ವ್ಯವಸ್ಥೆ ಜಾರಿಯಲ್ಲಿತ್ತು. ನಮ್ಮ ಸಂದರ್ಭದಲ್ಲಿ ಇದನ್ನು ಸಂಪೂರ್ಣವಾಗಿ ಸರ್ಕಾರವು ನಿರ್ವಹಿಸುತ್ತಾ ಬಂದಿದೆ. ಮಾರುಕಟ್ಟೆ-ಪ್ರಧಾನ ಆರ್ಥಿಕತೆಯಾಗಲಿ ಅಥವಾ ಸರ್ಕಾರ-ಪ್ರಧಾನ ಆರ್ಥಿಕತೆಯಾಗಲಿ, ಅಲ್ಲಿ ಜನರು ಕೇವಲ ಅನುಷಂಗಿಕ. ಮಾರುಕಟ್ಟೆ ಪ್ರಣೀತ ಅಭಿವೃದ್ಧಿ ತಂತ್ರಕ್ಕೆ ಸಂಬಂಧಿಸಿದಂತೆ 'ವೈಫಲ್ಯ'ಗಳಿರುವಂತೆಯೇ ಪ್ರಭುತ್ವ ಪ್ರಣೀತ ಅಭಿವೃದ್ಧಿ ತಂತ್ರಕ್ಕೂ 'ವೈಫಲ್ಯ'ಗಳಿವೆ. ಅವುಗಳನ್ನು ಕ್ರಮವಾಗಿ 'ಮಾರುಕಟ್ಟೆ ವೈಫಲ್ಯ' ಮತ್ತು 'ಪ್ರಭುತ್ವದ ವೈಫಲ್ಯ'ವೆಂದು ಕರೆಯಲಾಗಿದೆ. ಇವೆರಡೂ ವ್ಯವಸ್ಥೆಯಲ್ಲಿ ಜನರು ಕೇವಲ ಅಭಿವೃದ್ಧಿಯ 'ಸಾಧನ'ವೂ ಮತ್ತು ಅಭಿವೃದ್ಧಿಯನ್ನು ಪಡೆದುಕೊಳ್ಳುವ 'ಅವಲಂಬಿ'ಯೂ ಆಗಿರುತ್ತಾರೆ. ಎರಡೂ ತಂತ್ರಗಳಲ್ಲೂ 'ಬಂಡವಾಳ'ಕ್ಕೆ ನಿರ್ಣಾಯಿಕ ಸ್ಥಾನವಿದೆ. ಇವೆರಡೂ ತಂತ್ರಗಳು 'ಮೇಲಿನಿಂದ ಕೆಳಗೆ ಹರಿಯುವ' ಒಂದು ಚೌಕಟ್ಟನ್ನು ಹೊಂದಿವೆ.

೮೦-೯೦ರ ದಶಕದ ಹೊತ್ತಿಗೆ ಸಮುದಾಯಗಳು ಸಾಮಾಜಿಕ ರಚನೆಯಲ್ಲಿ ಪ್ರಧಾನ ಪಾತ್ರವಹಿಸತೊಡಗಿದವು. ಆಗ `ಸಮುದಾಯ`ವನ್ನು ಅಭಿವೃದ್ಧಿ ಕ್ರಿಯೆಗೆ ಒಳಪಡಿಸುವುದು ಮುಖ್ಯವೆಂದು ಅಭಿವೃದ್ಧಿ ಚಿಂತನೆಗಳು ಪರಿಗಣಿಸಿದವು.

ಜನರನ್ನು ಅಭಿವೃದ್ಧಿಯ ಕರ್ತೃಗಳನ್ನಾಗಿ ಪರಿಭಾವಿಸಿಕೊಳ್ಳುವ ಅಗತ್ಯದ ಬಗ್ಗೆ ಒತ್ತಾಯಗಳು ಬರತೊಡಗಿದವು. ಪಶ್ಚಿಮದ 'ವ್ಯಕ್ತಿವಾದ'ದ ಮಿತಿಗಳು ಮತ್ತು ಸಮಾಜವಾದವೂ ಮುಂದಿಟ್ಟ 'ಸಮಷ್ಟಿ' ಸಂಗತಿಗಳು ತೀವ್ರ ಟೀಕೆಗೆ ತುತ್ತಾದವು. ಹಾಗಾಗಿ ಅಭಿವೃದ್ಧಿಯ 'ಪಾಲುದಾರರು' ಎಂಬ ನುಡಿಗಟ್ಟು ಹೆಚ್ಚು ಚಾಲ್ತಿಗೆ ಬಂದಿತು. ಅಭಿವೃದ್ಧಿಯ ಪಾಲುದಾರರು ಯಾರು? ಅವರೆಲ್ಲರನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ತೊಡಗಿಸುವುದು ಹೇಗೆ? ಎನ್ನುವ ಚರ್ಚೆ ಮುಂಚೂಣಿಗೆ ಬಂದಿತು.

ಮಾರುಕಟ್ಟೆ ಮತ್ತು ಪ್ರಭುತ್ವ ಪ್ರಣೀತ ಅಭಿವೃದ್ಧಿ ಕಾರ್ಯತಂತ್ರಗಳು ಮೂಲತಃ ಅಖಂಡವಾದಿ ಸ್ವರೂಪದವಾಗಿದ್ದವು. ಸ್ಥಳೀಯ ಅಗತ್ಯಗಳು ಇಲ್ಲಿ ಮೂಲೆಗುಂಪಾಗುತ್ತಿದ್ದವು. "ಸ್ಥಳೀಯತೆಯನ್ನು ನಿರ್ದಿಷ್ಟವೆಂದು ಪರಿಗಣಿಸುವುದು ಅಗತ್ಯವಾಗಿ ಕಂಡುಬಂತು. ಸ್ಥಳೀಯರನ್ನು ಅಭಿವೃದ್ಧಿ ಕಾರ್ಯತಂತ್ರ ರೂಪಿಸುವ, ಕಾರ್ಯಕ್ರಮ ನಿರ್ಮಿಸುವ, ಅದನ್ನು ಅನುಷ್ಠಾನಗೊಳಿಸುವ ಎಲ್ಲ ಕಾರ್ಯಗಳಲ್ಲೂ ತೊಡಗಿಸಿಕೊಳ್ಳಬೇಕಾದುದು ಅನಿವಾರ್ಯವಾಗುತ್ತ ಬಂದಿತು. ಈ ಹಿನ್ನೆಲೆಯಲ್ಲಿ ರೂಪುಗೊಂಡ ಸಿದ್ಧಾಂತವೇ ಸಹಭಾಗಿತ್ವವಾದಿ ಅಭಿವೃದ್ಧಿ ತಂತ್ರ" (ಮಾಧವರೆಡ್ಡಿ ಕೆ.ವಿ.-೨೦೦೦). ಈ ಬಗೆಯಲ್ಲಿ ಅಭಿವೃದ್ಧಿಯನ್ನು ಕುರಿತ ಸಮಕಾಲೀನ ಸೈದ್ಧಾಂತಿಕ ಚರ್ಚೆಯಲ್ಲಿ ಸ್ಥಳೀಯ ಜನರು ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ, ನಿಯಂತ್ರಿಸುವ ಮತ್ತು ನಿರ್ವಹಿಸುವ ಸಾಮರ್ಥ್ಯ ಬೆಳೆಸಿಕೊಳ್ಳಬೇಕು ಎಂಬುದಕ್ಕೆ ಒತ್ತು ನೀಡಲಾಗುತ್ತಿದೆ. ಇದಕ್ಕೆ ಅನುಗುಣವಾಗಿ ಕೆಲ ರಾಜ್ಯಗಳಲ್ಲಿ ಸ್ಥಳೀಯರಿಗೆ ಆಡಳಿತ ನಿರ್ವಹಣೆಯಲ್ಲಿ ಅವಕಾಶ ನೀಡುವ ಪ್ರಯತ್ನಗಳು ನಡೆಯುತ್ತಿವೆ. ಇಂತಹ ಅನೇಕ ಪ್ರಯೋಗದ ಪ್ರಯತ್ನಗಳೂ ಆಗುತ್ತಿವೆ. ಇದಕ್ಕೆ ನೀರಾವರಿ ಕ್ಷೇತ್ರವೂ ಹೊರತಾಗಿಲ್ಲ. ವಿಶ್ವದ ಎಲ್ಲೆಡೆ ಇಂದು ನೀರಾವರಿ ನಿರ್ವಹಣೆಯಲ್ಲಿ ಸ್ಥಳೀಯ ಸಮುದಾಯಗಳ ಪಾಲ್ಗೊಳ್ಳುವಿಕೆಗೆ ಹೆಚ್ಚಿನ ಒತ್ತು ನೀಡಲಾಗುತ್ತಿದೆ.

ವಿಶ್ವದಲ್ಲಿ ನಡೆಯುತ್ತಿರುವ ಈ ಬದಲಾವಣೆ, ಸುಧಾರಣಾ ಪ್ರಕ್ರಿಯೆ ಭಾರತದಲ್ಲಿಯೂ ಸಂಭವಿಸುತ್ತಿದೆ. ನಮ್ಮ ದೇಶದಲ್ಲಿ ನೀರಾವರಿ ನಿರ್ವಹಣೆ ವಿಕೇಂದ್ರೀಕರಣಗೊಂಡು ಅಧಿಕಾರ ಮತ್ತು ಹೊಣೆಗಾರಿಕೆಗಳು ತಳಮಟ್ಟಕ್ಕೆ ವರ್ಗಾವಣೆಗೊಳ್ಳುತ್ತಿವೆ. ಕೆಲವು ರಾಜ್ಯಗಳಲ್ಲಿ ಈ ಪ್ರಕ್ರಿಯೆ ಹಲವಾರು ಹಂತಗಳನ್ನು ದಾಟಿ, ಯೋಜನೆಗಳನ್ನು ರೂಪಿಸುವ ಮಟ್ಟ ತಲುಪಿದೆ. ನೀರಾವರಿ ನಿರ್ವಹಣೆ ಎಂಬುದು ಅನೇಕ ಸಂಗತಿಗಳ ಒಂದು ಬಹುಮುಖ ವಿಷಯವಾಗಿದೆ. ತಾಂತ್ರಿಕ ಅಂಶಗಳೊಂದಿಗೆ ಮಾನವಿಕ ನೆಲೆಯೊಂದಿಗೆ ಜೋಡಿಸಲ್ಪಟ್ಟಿದೆ. ಆರಂಭದಲ್ಲಿ ಕೇವಲ ನಿರ್ಮಾಣ ಮತ್ತು ಬಳಕೆಗೆ ಪರಿಮಿತಗೊಂಡಿದ್ದ ನೀರಾವರಿ ಕ್ಷೇತ್ರ ಇಂದು ಇನ್ನಷ್ಟು ವಿಸ್ತೃತ ವ್ಯಾಪ್ತಿಯನ್ನು ಪಡೆದುಕೊಂಡಿದೆ. ನೀರಿನ ವಿತರಣೆಯು ಅಸಮರ್ಪಕವಾಗುತ್ತಿರುವಂತೆ ಸಮಸ್ಯೆಗಳು ಅಸಂಖ್ಯವಾಗುತ್ತಿವೆ. ಪರಿಸರದ ಬಿಕ್ಕಟ್ಟುಗಳು ಹೆಚ್ಚಾದಂತೆ

ಆಣೆಕಟ್ಟುಗಳ ನಿರ್ಮಾಣದಿಂದ ನಿರ್ವಸಿತರಾಗುವ ಜನರು ಪ್ರತಿರೋಧ ಪ್ರತಿಭಟನೆಗಳನ್ನು ಕೈಗೊಳ್ಳುತ್ತಿದ್ದಾರೆ. ಹೀಗೆ ಇನ್ನು ಮುಂದೆ ಇನ್ನಷ್ಟು ಬೃಹತ್ ಜಲಾಶಯಗಳ ನಿರ್ಮಾಣ ಸಾಧ್ಯವಾಗದ ಸ್ಥಿತಿ ನಿರ್ಮಾಣವಾಗುತ್ತಿದೆ. ಪರಿಣಾಮವಾಗಿ ಹೆಚ್ಚಿನ ಒಣ ಪ್ರದೇಶಗಳಿಗೆ ನೀರಾವರಿ ಸೌಕರ್ಯ ಕಲ್ಪಿಸಲು ಉಳಿದಿರುವ ಮಾರ್ಗವೆಂದರೆ, ಲಭ್ಯವಿರುವ ನೀರಾವರಿಯನ್ನು ಹೆಚ್ಚು ದಕ್ಷತೆಯಿಂದ ನಿರ್ವಹಣೆ ಮಾಡುವುದು. ಈ ಕಾರಣದಿಂದಲೆ ಇಂದು ನೀರಾವರಿ ನಿರ್ಮಾಣದ ಚಟುವಟಿಕೆಗಳಿಗಿಂತ ನೀರಾವರಿ ನಿರ್ವಹಣೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುತ್ತಿದೆ.

ಹೀಗಾಗಿ ನೀರಾವರಿ ನಿರ್ವಹಣೆ ಇಂದು ಇತರೆ ಸಂಗತಿಗಳಿಗಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಈ ಕಾರಣದಿಂದ ಫಲಾನುಭವಿಗಳ ಸಹಭಾಗಿತ್ವದಲ್ಲಿ ನೀರಾವರಿ ನಿರ್ವಹಣೆಗೆ ಅವಕಾಶ ಕಲ್ಪಿಸಲಾಗಿದೆ. ನೀರು ಬಳಕೆದಾರರ ಸಹಕಾರ ಸಂಘಗಳ ಮುಖೇನ ಅಪವ್ಯಯಕ್ಕೆ ಗುರಿಯಾಗಿರುವ ಅಮೂಲ್ಯವಾದ ಜಲವನ್ನು ಸದುಪಯೋಗ ಮಾಡಿಕೊಳ್ಳುವ ಪ್ರಯತ್ನಗಳು ನಡೆಯುತ್ತಿವೆ. ಬಳಕೆದಾರರಲ್ಲಿ ನಿರ್ವಹಣೆಯ ಕುಶಲತೆಯನ್ನು ಮೂಡಿಸಿದರೆ ನೀರಾವರಿ ವ್ಯವಸ್ಥೆ ಸುಸ್ಥಿರವಾಗಿರಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಇಂದು ಹೊಸ ಹೊಸ ಪ್ರಯೋಗಗಳು ನಡೆಯುತ್ತಿವೆ. ಇಂತಹ ಪ್ರಯೋಗದಲ್ಲಿ ಮುಖ್ಯವಾಗಿ ನೀ.ಬ.ಸ. ಸಂಘಗಳು ಎಲ್ಲ ಬಗೆಯ ನೀರಾವರಿ ಯೋಜನೆಗಳಲ್ಲಿ ಸ್ಥಾಪನೆಗೊಳ್ಳುತ್ತಿವೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಕಾಲುವೆ ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಹೀಗೆ ಕಂಡುಕೊಂಡ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಸೂಚಿಸಲು ಪ್ರಯತ್ನ ಮಾಡಲಾಗಿದೆ.

ಈ ಮೊದಲನೆಯ ಅಧ್ಯಾಯದಲ್ಲಿ ಒಟ್ಟು ೫ ಭಾಗಗಳಿದ್ದು, ಪ್ರಥಮ ಭಾಗದಲ್ಲಿ ಅಧ್ಯಯನ ವಿಷಯದ ಸಮಸ್ಯೀಕರಣವನ್ನು ಹಾಗೂ ಅಧ್ಯಯನದ ಉದ್ದೇಶಗಳನ್ನು ಎರಡನೆಯ ಭಾಗದಲ್ಲಿ ಚರ್ಚಿಸಲಾಗಿದೆ. ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಮಹತ್ವವನ್ನು ಮೂರನೆಯ ಭಾಗದಲ್ಲಿ ವಿವರಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಅಧ್ಯಯನದ ಮಿತಿಗಳನ್ನು ಮತ್ತು ಕೊನೆಭಾಗದಲ್ಲಿ ಅಧ್ಯಾಯಗಳ ಸಂಘಟನೆಯನ್ನು ನೀಡಲಾಗಿದೆ.

## ೧.೧. ವಿಷಯದ ಸಮಸ್ಯೀಕರಣ

ನೀರಾವರಿಯು ನಮ್ಮ ದೇಶದ ಆಹಾರ ಭದ್ರತೆಗೆ, ಆಹಾರೋತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಲು ಒಂದು ಪ್ರಮುಖ ಸಾಧನವಾಗಿದೆ. ಇದರ ಪರಿಣಾಮವಾಗಿ ಬೃಹತ್ ಆಣೆಕಟ್ಟುಗಳನ್ನು ನಿರ್ಮಾಣ ಮಾಡಿ ವಿಶಾಲ ಸಾಗುವಳಿ ಪ್ರದೇಶಕ್ಕೆ ನೀರನ್ನು ಪೂರೈಕೆ ಮಾಡುವ ಕಾರ್ಯ ಭರದಿಂದ ಸಾಗಿದೆ. ಸ್ವಾತಂತ್ರ್ಯದ ಆರಂಭದಲ್ಲಿ ನೀರಾವರಿಯ ಉದ್ದೇಶ ಹೆಚ್ಚು ಹೆಚ್ಚು ಜಲಾಶಯಗಳನ್ನು ನಿರ್ಮಿಸಿ ನೀರಾವರಿ ನಿರ್ಮಾಣ ಸಾಮರ್ಥ್ಯವನ್ನು ಅಧಿಕಗೊಳಿಸುವುದಾಗಿತ್ತು. ಕಾಲಕ್ರಮೇಣ ನೀರಾವರಿ ನಿರ್ಮಾಣ ಮತ್ತು

ಬಳಕೆಯ ನಡುವಿನ ಅಂತರ ಅಧಿಕವಾಗಿದ್ದು ಒಂದು ಸಮಸ್ಯೆಯಾಗಿ ಪರಿಣಮಿಸಿತು. ಈ ಅಂತರವನ್ನು ಕಡಿಮೆ ಮಾಡುವ ಉದ್ದೇಶದಿಂದ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳನ್ನು (ಕಾಡಾ) ರಚನೆ ಮಾಡಲಾಯಿತು. ಕಾಡಾಗಳ ಕಾರ್ಯ ನಿರ್ವಹಣೆಯೂ ನಿರೀಕ್ಷಿಸಿದ ಸಾಧನೆಯನ್ನು ಮಾಡಲಿಲ್ಲ. ಇದರಿಂದ ಪ್ರಸ್ತುತ ಫಲಾನುಭವಿಗಳ ನೇತೃತ್ವದಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಮೂಲಕ ನೀರಾವರಿ ನಿರ್ವಹಣೆ ಮಾಡುವ ಕಾರ್ಯ ಪ್ರಕ್ರಿಯೆ ಕರ್ನಾಟಕದಲ್ಲಿ ಜೂನ್ ೨೦೦೦ದಿಂದ ಪ್ರಾರಂಭವಾಗಿದೆ.

ನೀರಾವರಿ ನಿರ್ವಹಣೆ ಪ್ರಕ್ರಿಯೆಯಲ್ಲಿ ಮೂರು ಆಯಾಮಗಳನ್ನು ಕಾಣಬಹುದಾಗಿದೆ. ಸರಕಾರದ ಧುರೀಣತ್ವದಲ್ಲಿ ನಿರ್ವಹಣೆ ಮೊದಲ ಆಯಾಮವಾದರೆ, ಮಾರುಕಟ್ಟೆ ಮೂಲಕ ನಿರ್ವಹಣೆಯು ಎರಡನೆ ಆಯಾಮವಾಗಿದೆ, ಕೊನೆಯ ಆಯಾಮವಾಗಿ ಬಳಕೆದಾರರ ಸಹಭಾಗಿತ್ವದಲ್ಲಿ ನೀರಾವರಿ ನಿರ್ವಹಣೆ ಆಚರಣೆಯಲ್ಲಿರುವುದನ್ನು ಈಗ ಕಾಣಬಹುದಾಗಿದೆ.

ಆರಂಭದಲ್ಲಿ ಇಡೀ ನೀರಾವರಿ ಕ್ಷೇತ್ರ ಸರಕಾರದ ಕೇಂದ್ರೀಕೃತ ಆಡಳಿತಕ್ಕೆ ಒಳಪಟ್ಟಿತ್ತು. ನೀರಾವರಿ ಇಲಾಖೆಯ ಮೂಲಕ ನೀರಾವರಿಯ ಎಲ್ಲ ಚಟುವಟಿಕೆಗಳು ನಡೆಯುತ್ತಿದ್ದವು. ಹಿಂದಿನ ಸಮುದಾಯದ ನೇತೃತ್ವದಲ್ಲಿ ನೀರಾವರಿ ನಿರ್ವಹಣೆ ಕೆಲವೇ ಕೆಲವರಿಗೆ ಮಾತ್ರ ಅನುಕೂಲವಾಗಿ ಅಂದರೆ, ಉಳ್ಳವರಿಗೆ ಹೆಚ್ಚಿನ ಅನುಕೂಲವಾಗಿ ದುರ್ಬಲರಿಗೆ ತೊಂದರೆಯಾಗುತ್ತದೆ ಎಂಬ ಉದ್ದೇಶದಿಂದ ಸರಕಾರವೇ ನೀರಾವರಿ ನಿರ್ಮಾಣ ಮತ್ತು ನಿರ್ವಹಣೆಯ ಹೊಣೆಗಾರಿಕೆಯನ್ನು ವಹಿಸಿಕೊಂಡಿತು. ಸಮಾಜದ ಎಲ್ಲ ವರ್ಗಗಳಿಗೆ ಸಮಾನವಾಗಿ ಮತ್ತು ನ್ಯಾಯಬದ್ಧವಾಗಿ ನೀರಿನ ಹಂಚಿಕೆ ಮಾಡುವ ಮೂಲಕ ಸಾಮಾಜಿಕ ನ್ಯಾಯ ಸ್ಥಾಪನೆ ಉದ್ದೇಶ ಪ್ರಭುತ್ವದ್ದಾಗಿತ್ತು. ಆದರೆ ಸರಕಾರದ ಆಶಯ ಅನುಷ್ಠಾನದಲ್ಲಿ ಯಶಸ್ವಿಯಾಗಲಿಲ್ಲ. ನೀರಾವರಿ ಇಲಾಖೆಯ ನಿಯಂತ್ರಣದಲ್ಲಿ ನೀರಾವರಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳನ್ನು ನಿರ್ವಹಿಸಲು ಸಾಧ್ಯವಾಗಲಿಲ್ಲ. ಮುಖ್ಯವಾಗಿ ನೀರಾವರಿ ನಿರ್ಮಾಣ ಮತ್ತು ಬಳಕೆಯಲ್ಲಿನ ಅಂತರ ಹೆಚ್ಚಾದಂತೆ ಹಲವಾರು ಸಮಸ್ಯೆಗಳು ಉದ್ಭವವಾಗತೊಡಗಿದವು. ಅನೇಕ ಅಧ್ಯಯನಗಳ ಆಧಾರದ ಮೇಲೆ, ವಿವಿಧ ಆಯೋಗಗಳ ಸಲಹೆಗಳಂತೆ ನೀರಾವರಿಯು ಬಹುಮುಖ ನೆಲೆಗಳನ್ನು ಹೊಂದಿದ್ದು ಕೇವಲ ನೀರಾವರಿ ಇಲಾಖೆಯಿಂದ ಎಲ್ಲ ಕಾರ್ಯಗಳ ನಿರ್ವಹಣೆ ಸಾಧ್ಯವಿಲ್ಲ. ಇದಕ್ಕಾಗಿ ಕೃಷಿಗೆ ಸಂಬಂಧಿಸಿದ ವಿವಿಧ ಇಲಾಖೆಗಳ ಸಹಯೋಗದೊಂದಿಗೆ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳನ್ನು ರಚನೆ ಮಾಡಿ ಆ ಮೂಲಕ ನೀರಾವರಿ ನಿರ್ವಹಣೆ ಹೊಣೆಗಾರಿಕೆಯನ್ನು ಅವುಗಳಿಗೆ ವಹಿಸಲಾಯಿತು.

ನೀರಾವರಿ ಇಲಾಖೆಯೊಂದಿಗೆ ಕೃಷಿ, ಸಹಕಾರ, ಮೀನುಗಾರಿಕೆ, ತೋಟಗಾರಿಕೆ ಮೊದಲಾದ ಇಲಾಖೆಗಳನ್ನು ಸಂಯೋಜನೆಗೊಳಿಸಿ ಕಾಡಾಗಳನ್ನು ಸ್ಥಾಪಿಸಿ ನೀರಾವರಿ ನಿರ್ವಹಣೆಗೆ ಹೊಸ ಆಯಾಮವನ್ನು ಕಲ್ಪಿಸಲಾಯಿತು. ಆದರೆ ಕಾಡಾಗಳ ಕಾರ್ಯ ನಿರ್ವಹಣೆಯು ತೃಪ್ತಿದಾಯಕವಾಗಿಲ್ಲದಿರುವ ಕುರಿತು ಅನೇಕ ಅಧ್ಯಯನಗಳು, ಸಮಿತಿಗಳು ತಮ್ಮ ವರದಿಗಳನ್ನು ಸರಕಾರಕ್ಕೆ ಸಲ್ಲಿಸಿವೆ. ಪರಸ್ಪರ ಇಲಾಖೆಗಳಲ್ಲಿನ ಅಸಹಕಾರ, ವಿಳಂಬನೀತಿ, ಬಳಕೆದಾರರ ಗೈರುಹಾಜರಿ, ಹಣಕಾಸಿನ ಬಿಕ್ಕಟ್ಟು ಇವೇ ಮೊದಲಾದ

ದೋಷಗಳಿಂದಾಗಿ ಕಾಡಾಗಳು ನಿರೀಕ್ಷಿಸಿದ ಫಲ ನೀಡಲಿಲ್ಲ. ಅಂದರೆ ಸರಕಾರ ತನ್ನ ಮೇಲಿನಿಂದ ಹೇರಲ್ಪಡುವ (ಟಾಪ್‌ಡೌನ್) ಮಾದರಿಯನ್ನು ಅನುಸರಿಸುತ್ತಿರುವುದೇ ನೀರಾವರಿ ನಿರ್ವಹಣೆಯ ಹಲವಾರು ಸಮಸ್ಯೆಗಳಿಗೆ ಕಾರಣವಾಗಿದೆ. ಇಂದು ಪ್ರಭುತ್ವದ ನೆಲೆಯಲ್ಲಿ ನೀರಾವರಿ ನಿರ್ವಹಣೆಗೆ ತೊಡಕಾದ ಸಮಸ್ಯೆಗಳೇನು, ವಾಸ್ತವವಾಗಿ ಕಾಡಾಗಳು ಎದುರಿಸುತ್ತಿರುವ ಬಿಕ್ಕಟ್ಟುಗಳೇನು ಎಂಬುದನ್ನು ಮನವರಿಕೆ ಮಾಡಿಕೊಳ್ಳುವುದು ಈ ಅಧ್ಯಯನದ ಪ್ರಮುಖ ಸಮಸ್ಯೆ ಎಂದು ಗುರುತಿಸಿಕೊಳ್ಳಲಾಗಿದೆ.

ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದ ಸನ್ನಿವೇಶದಲ್ಲಿ ಜಲಸಂಪನ್ಮೂಲದ ನಿರ್ವಹಣೆಯೂ ಮಾರುಕಟ್ಟೆ ನಿಯಂತ್ರಣಕ್ಕೆ ಸಿಲುಕಿರುವುದು ಹಲವಾರು ದೇಶಗಳಲ್ಲಿ ಕಾಣಬಹುದಾಗಿದೆ. ಖಾಸಗೀಕರಣದಿಂದ ನೀರಾವರಿ ನಿರ್ವಹಣೆ ಉತ್ತಮಗೊಳ್ಳುವುದರೊಂದಿಗೆ ಅದನ್ನು ಒಂದು ಲಾಭದಾಯಕ ಉದ್ದಿಮೆಯನ್ನಾಗಿ ಪರಿವರ್ತಿಸಬಹುದೆಂಬ ಕೂಗು ಕೇಳಿಬರುತ್ತದೆ. ಈ ನಿಟ್ಟಿನಲ್ಲಿ ಹಲವಾರು ದೇಶಗಳಲ್ಲಿ ಪ್ರಯೋಗಗಳು ಮುಂದುವರೆದಿದೆ. ಭಾರತದಲ್ಲಿ ಕುಡಿಯುವ ನೀರು ಈಗಾಗಲೇ ಮಾರುಕಟ್ಟೆಯ ಸುರ್ಪದಿಗೆ ಬಂದಿದ್ದು ಇದರ ಸಾಧಕಬಾಧಕಗಳು ಈಗೀಗ ಕಾಣತೊಡಗಿವೆ. ಕೃಷಿಗೆ ಸಂಬಂಧಿಸಿದಂತೆ ನೀರಾವರಿಯು ಇನ್ನು ಮಾರುಕಟ್ಟೆಯ ವಶಕ್ಕೆ ಬಂದಿಲ್ಲ. ಏಕೆಂದರೆ ನೀರಾವರಿ ಎಂಬುದು ಎಲ್ಲ ಜನವರ್ಗಗಳಿಗೆ / ಸಮುದಾಯಗಳಿಗೆ ಸಂಬಂಧಿಸಿದೆ. ಲಾಭದ ದೃಷ್ಟಿಕೋನದಿಂದ ಸಾಮಾನ್ಯ ಸ್ವತ್ತೆನಿಸಿದ ನೀರನ್ನು ಮಾರಾಟದ ಸರಕನ್ನಾಗಿಸಿದರೆ, ಉಳ್ಳವರು ಬಲಾಢ್ಯರು ಮಾತ್ರ ಹೆಚ್ಚು ಅನುಕೂಲ ಪಡೆದುಕೊಂಡು, ಬಡವರು ಮತ್ತು ದುರ್ಬಲರು ತೊಂದರೆಗೆ ಈಡಾಗುತ್ತಾರೆ. ಇದರಿಂದ ಸಾಮಾಜಿಕ ನ್ಯಾಯಕ್ಕೆ ಧಕ್ಕೆಯಾಗುತ್ತದೆ. ಆದುದರಿಂದ ಕೃಷಿ ವ್ಯಾಪ್ತಿಯ ನೀರನ್ನು ಖಾಸಗೀಕರಣಗೊಳಿಸಲು ಸರಕಾರ ಹಿಂದೆ ಮುಂದೆ ನೋಡುತ್ತಿದೆ. ಆದರೂ ಅಂತರರಾಷ್ಟ್ರೀಯ ಮಟ್ಟದಲ್ಲಿನ ಆರ್ಥಿಕ ಸಂಸ್ಥೆಗಳ ಮತ್ತು ಬಹುರಾಷ್ಟ್ರೀಯ ಸಂಸ್ಥೆಗಳ ಒತ್ತಡವಂತು ದಿನೇ ದಿನೇ ಹೆಚ್ಚಾಗುತ್ತಿದೆ. ಪ್ರಸ್ತುತ ಕಾಲುವೆ ನೀರಾವರಿ ನಿರ್ವಹಣೆ ಖಾಸಗೀಕರಣಕ್ಕೆ ಒಳಪಟ್ಟಿಲ್ಲದ ಕಾರಣ ಇದನ್ನು ಪ್ರಸಕ್ತ ಅಧ್ಯಯನದಲ್ಲಿ ಒಂದು ಸಮಸ್ಯೆಯನ್ನಾಗಿ ಪರಿಗಣಿಸಿಲ್ಲ.

ಈ ಎರಡು ಆಯಾಮಗಳೊಂದಿಗೆ ಫಲಾನುಭವಿಗಳ ಸಹಭಾಗಿತ್ವದಲ್ಲಿ ಜಲಸಂಪನ್ಮೂಲದ ನಿರ್ವಹಣೆ ಎಂಬ ಮೂರನೇ ಆಯಾಮವು ಸೇರಿಕೊಂಡಿದೆ. ಪ್ರಭುತ್ವ ನಿರ್ವಹಣೆಯಲ್ಲಿನ ತೊಡಕುಗಳು ಮತ್ತು ಕೃಷಿಯಲ್ಲಿನ ಜಲನಿರ್ವಹಣೆಯನ್ನು ಸಾಮಾಜಿಕ ನ್ಯಾಯಕ್ಕೆ ಧಕ್ಕೆ ತಗಲುತ್ತದೆ ಎನ್ನುವ ಹಿನ್ನೆಲೆಯಲ್ಲಿ ಖಾಸಗೀಕರಣವೂ ತನ್ನ ಮಹತ್ವವನ್ನು ಕಳೆದುಕೊಂಡಿತು. ಈ ಎರಡೂ ವಲಯಗಳ ವೈಫಲ್ಯ ಹಾಗೂ ದೋಷಗಳಿಂದಾಗಿ ಬಳಕೆದಾರರ ಸಹಭಾಗಿತ್ವದಲ್ಲಿ ಜಲನಿರ್ವಹಣೆ ಎಂಬ ಪರಿಕಲ್ಪನೆಗೆ ಹೆಚ್ಚಿನ ಮಹತ್ವ ದೊರೆಯಿತು. ಈ ಸಹಭಾಗಿತ್ವದ ಪರಿಕಲ್ಪನೆಯ ಆಧಾರದ ಮೇಲೆ ಪ್ರಪಂಚದ ಮುಂದುವರಿದ ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿ ಬಳಕೆದಾರರಿಗೆ ನೀರಾವರಿ ನಿರ್ವಹಣೆಯ ಹೊಣೆಗಾರಿಕೆಯನ್ನು ಹಸ್ತಾಂತರಿಸಲಾಯಿತು. ಅನೇಕ ಅಧ್ಯಯನಗಳ ಪ್ರಕಾರ ಕೆಲ ಪ್ರದೇಶಗಳಲ್ಲಿ ಈ ತತ್ವ ಪರಿಣಾಮಕಾರಿಯಾಗಿರುವುದು, ಮತ್ತೆ ಕೆಲವು ದೇಶಗಳಲ್ಲಿ ಮಿಶ್ರ ಪ್ರತಿಕ್ರಿಯೆ ಕಂಡುಬಂದಿರುವುದು ತಿಳಿದುಬರುತ್ತದೆ.

ಇತರ ದೇಶಗಳಂತೆಯೇ ೧೯೮೦ರ ದಶಕದಲ್ಲಿ ಭಾರತದಲ್ಲೂ ಈ ತತ್ವದ ಆಧಾರದ ಮೇಲೆ ಬೃಹತ್ ಮತ್ತು ಮಧ್ಯಮ ನೀರಾವರಿ ಯೋಜನೆಗಳಲ್ಲಿ ನೀರು ಬಳಕೆದಾರ ಸಂಘಗಳನ್ನು ಸ್ಥಾಪಿಸಿ ನಿರ್ವಹಣೆಯ ಜವಾಬ್ದಾರಿಯನ್ನು ವಹಿಸಲಾಯಿತು. ೧೯೮೭ರ ರಾಷ್ಟ್ರೀಯ ಜಲನೀತಿಯಲ್ಲಿ ನೀರಾವರಿ ನಿರ್ವಹಣೆಯಲ್ಲಿ ಫಲಾನುಭವಿಗಳ ಸಹಭಾಗಿತ್ವಕ್ಕೆ ಹೆಚ್ಚಿನ ಒತ್ತು ನೀಡಲಾಯಿತು. ಹೀಗೆ ಅಸ್ತಿತ್ವಕ್ಕೆ ಬಂದ ನೀ.ಬ.ಸ. ಸಂಘಗಳ ಕಾರ್ಯವೈಖರಿ ಹೇಗಿದೆ? ಈ ಹಿಂದೆ ಇದ್ದ ಕಾಡಾಕ್ಕಿಂತಲೂ ಇದು ಎಷ್ಟರಮಟ್ಟಿಗೆ ಉತ್ತಮವಾದುದು? ಈ ಸಂಘಗಳ ಸಾಧನೆ ಹಾದಿಯಲ್ಲಿ ಕಂಡುಬರುತ್ತಿರುವ ತೊಡಕುಗಳೇನು? ಇವೇ ಮೊದಲಾದ ಸಂಗತಿಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಪ್ರಮುಖ ಸಮಸ್ಯೆಯಾಗಿದೆ.

'ನೀರಾವರಿ ನಿರ್ವಹಣೆ' ಎಂಬ ಸಂಗತಿಯು ನಿರ್ವಾತದಲ್ಲಿ ನಡೆಯುವ ಕ್ರಿಯೆಯಲ್ಲ. ಇದು ಒಂದು ಸಾಮಾಜಿಕ ಚೌಕಟ್ಟಿನಲ್ಲಿ ನಡೆಯುವಂತಹದು. ನೀರಾವರಿ ನಿರ್ವಹಣೆಯಲ್ಲಿ ಸಂಘದ ಪದಾಧಿಕಾರಿಗಳ ಮತ್ತು ಸದಸ್ಯರ ಜಾತಿ, ವರ್ಗ, ಲಿಂಗ ಮತ್ತು ಸ್ಥಾನಮಾನಗಳು ತಮ್ಮದೇ ಆದ ಪರಿಣಾಮಗಳನ್ನು ಬೀರುತ್ತಿರಬಹುದು. ಈಗಾಗಲೇ ನಡೆದಿರುವ ಕೆಲವು ಅಧ್ಯಯನಗಳು ನೀ.ಬ.ಸ. ಸಂಘಗಳ ತಾಂತ್ರಿಕ ಅಂಶಗಳಿಗೆ ಹೆಚ್ಚಿನ ಒತ್ತು ನೀಡಿದ್ದು, ಸಂಘಗಳ ಸಾಮಾಜಿಕ ವಾತಾವರಣ, ಪರಿಸರ ಏಣಿ-ಶ್ರೇಣಿ ಇತ್ಯಾದಿ ಸಂಗತಿಗಳನ್ನು ಪರಿಗಣಿಸದೇ ಇರುವುದು ಕಾಣುತ್ತದೆ. ಆದುದರಿಂದ ನಮ್ಮ ಸಾಮಾಜಿಕ ರಚನೆಯ ಸಂಗತಿಗಳಾದ ಜಾತಿ, ವರ್ಗ, ಭೂಮಾಲೀಕತ್ವ, ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಅಂಶಗಳು ನೀ.ಬ.ಸ. ಸಂಘಗಳ ಮೇಲೆ ಬೀರುವ ಪ್ರಭಾವಗಳೇನು? ಇಂತಹ ಪ್ರಭಾವಗಳಿಂದ ಸಂಘಗಳ ಕಾರ್ಯ ಚಟುವಟಿಕೆಗಳಿಗೆ ಯಾವ ರೀತಿಯ ಅಡ್ಡಿಆತಂಕಗಳು ಎದುರಾಗಿವೆ ಎನ್ನುವುದನ್ನು ಗುರುತಿಸುವುದು ಅಧ್ಯಯನದ ಮುಖ್ಯ ಸಮಸ್ಯೆಯಾಗಿದೆ.

ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರು ನೀರಿನೊಂದಿಗೆ ಅನನ್ಯ ಸಂಬಂಧವನ್ನು ಹೊಂದಿದ್ದಾರೆ. ಆದರೆ ಫಲಾನುಭವಿ, ಬಳಕೆದಾರ ಎನ್ನುವಾಗ ಅದು ಹೆಚ್ಚಾಗಿ ಪುರುಷ ಪ್ರಾತಿನಿಧ್ಯವನ್ನೇ ಧ್ವನಿಸುತ್ತದೆ. ನೀ.ಬ.ಸ. ಸಂಘಗಳಲ್ಲಿ ಮೀಸಲಾತಿ ಆಧಾರದ ಮೇಲೆ ಮಹಿಳೆಯರಿಗೂ ಸ್ಥಾನ ಕಲ್ಪಿಸಲಾಗಿದೆ. ಈ ಮೀಸಲಾತಿ ವಿಕೇಂದ್ರೀಕೃತ ವ್ಯವಸ್ಥೆಯಲ್ಲಿ (ಸಂಸ್ಥೆಗಳಲ್ಲಿ) ಕೇವಲ ನಾಮಮಾತ್ರವಾಗಿರುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ವಾಸ್ತವವಾಗಿ ಪಿತ್ರಾರ್ಜಿತ ಆಸ್ತಿಯ ಹಕ್ಕುಗಳು ಇನ್ನು ಪುರುಷ ಪ್ರಧಾನವಾಗಿಯೇ ಇರುವುದರಿಂದ (ಆಸ್ತಿಯ ಹಕ್ಕು ಪ್ರಸ್ತುತ ಹೆಣ್ಣು ಮಕ್ಕಳಿಗೂ ನೀಡಿದ್ದರೂ) ಸಂಘದ ವ್ಯಾಪ್ತಿಯಲ್ಲಿ ಆಸ್ತಿಯ ಒಡೆತನ ಇರುವ ಮಹಿಳಾ ಸದಸ್ಯರು ಲಭ್ಯವಿಲ್ಲದಿದ್ದಾಗ ಈ ನಾಮಮಾತ್ರ ಮೀಸಲಾತಿಯೂ ಸಾಧ್ಯವಾಗಲಾರದು. ಈ ಹಿನ್ನೆಲೆಯಲ್ಲಿ ನೀ.ಬ.ಸ. ಸಂಘಗಳಲ್ಲಿ ಮೀಸಲಾತಿ ಹೇಗೆ ಜಾರಿಯಲ್ಲಿದೆ? ಅವರ ಪಾಲ್ಗೊಳ್ಳುವಿಕೆಗೆ ಇರುವ ಅಡಚಣೆಗಳೇನು? ಮಹಿಳಾ ಪ್ರಾತಿನಿಧ್ಯದಿಂದ ಸಂಘಗಳು ಸಬಲೀಕರಣಗೊಂಡಿವೆ? ಇತ್ಯಾದಿ ಸಂಗತಿಗಳನ್ನು ತಿಳಿದುಕೊಳ್ಳುವುದು ಅಧ್ಯಯನ ಸಮಸ್ಯೆಯನ್ನಾಗಿ ಗುರುತಿಸಿಕೊಳ್ಳಲಾಗಿದೆ.

ಈಗಾಗಲೇ ಸ್ಥಾಪನೆಗೊಂಡು ಕಾರ್ಯನಿರ್ವಹಿಸುತ್ತಿರುವ ನೀ.ಬ.ಸ. ಸಂಘಗಳು ತಮ್ಮ ಬೈಲಾ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಬೇಕಾಗಿದೆ. ತನಗೆ ವಹಿಸಲಾದ ಕರ್ತವ್ಯಗಳನ್ನು ನಿರ್ವಹಿಸಿ, ನೀರಾವರಿಯಲ್ಲಿ ಕಂಡುಬರುವ ಸಮಸ್ಯೆಗಳಿಗೆ ತನ್ನದೇ ಆದ ಪರಿಹಾರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ನೀರಿನ ಅಪ ಬಳಕೆಯನ್ನು ತಡೆಗಟ್ಟಿ, ಮೇಲ್ತುದಿ ರೈತರಿಗೆ ದೊರೆಯುವಂತೆ ಸಾಕಷ್ಟು ನೀರನ್ನು ಕೆಳತುದಿ ರೈತರಿಗೂ ನ್ಯಾಯಬದ್ಧವಾಗಿ ಒದಗಿಸಬೇಕಾಗುತ್ತದೆ. ಪರಸ್ಪರ ಉಂಟಾಗುವ ವಿವಾದಗಳನ್ನು ಬಗೆಹರಿಸಿ, ಸಂಘ ತನ್ನ ಹಣಕಾಸಿನ ಸ್ಥಿತಿಯನ್ನು ವಿವಿಧ ಆದಾಯ ಮೂಲಗಳಿಂದ ಉತ್ತಮಪಡಿಸಿಕೊಳ್ಳಬೇಕಾಗುತ್ತದೆ. ಇದರೊಂದಿಗೆ ಆಡಳಿತ ಮಂಡಳಿ ಸಭೆ ಮತ್ತು ಸರ್ವ ಸದಸ್ಯರ ಸಭೆಗಳನ್ನು ನಿಯಮಾನುಸಾರವಾಗಿ ನಡೆಸಿ, ಆದಾಯ ವೆಚ್ಚಗಳನ್ನು ಆಡಿಟ್ ಮಾಡಿಸಿ ಸಂಘಕ್ಕೆ ಸರಕಾರದಿಂದ ದೊರೆಯುವ ಎಲ್ಲ ಸವಲತ್ತುಗಳನ್ನು ಪಡೆದು ಸಂಘದ ಏಳಿಗೆಗೆ ಶ್ರಮಿಸಬೇಕಾಗುತ್ತದೆ. ಈ ಮೇಲಿನ ಎಲ್ಲ ಸಂಗತಿಗಳಲ್ಲಿ ಸಂಘಗಳು ಯಾವ ರೀತಿಯ ಸಾಧನೆಗಳನ್ನು ಮಾಡಿವೆ? ಈ ನಿಟ್ಟಿನಲ್ಲಿ ಸಂಘಗಳಿಗೆ ಎದುರಾಗಿರುವ ಸಮಸ್ಯೆಗಳೇನು? ಎಂಬಿತ್ಯಾದಿ ಎಲ್ಲ ಅಂಶಗಳನ್ನು ಮೌಲ್ಯಮಾಪನ ಮಾಡುವುದು, ಒರೆಗೆ ಹಚ್ಚಿ ನೋಡುವುದು ಈ ಅಧ್ಯಯನದ ಸಮಸ್ಯೆಯೆಂದು ಪರಿಗಣಿಸಿ ಈ ಮೇಲಿನ ಎಲ್ಲ ಸಮಸ್ಯೆಗಳಿಗೆ ತಕ್ಕಂತೆ ಉದ್ದೇಶಗಳನ್ನು ರೂಪಿಸಿಕೊಳ್ಳಲಾಗಿದೆ.

ಈ ಮೇಲ್ಕಂಡ ಯಾವ ಯಾವ ಸಂಗತಿಗಳು ಸಹಭಾಗಿತ್ವಕ್ಕೆ / ಪಾಲ್ಗೊಳ್ಳುವಿಕೆಗೆ ಪೂರಕವಾಗಿವೆ, ಇಲ್ಲವೆ ತೊಡಕಾಗಿವೆ ಎಂಬುದನ್ನು ಲಭ್ಯವಿರುವ ಸಾಮಾಜಿಕ ಸಂಶೋಧನಾ ವಿಧಾನಗಳ ಮೂಲಕ ಕಂಡುಕೊಂಡು ಅಗತ್ಯವಾದ ಪರಿಹಾರ ಕ್ರಮಗಳನ್ನು ರೂಪಿಸಬೇಕಾಗುತ್ತದೆ. ಇಂತಹ ಸಂಕೀರ್ಣ ವಿಷಯಗಳನ್ನೊಳಗೊಂಡ ನೀರಾವರಿ ನಿರ್ವಹಣೆಯು ಬಹು ಆಯಾಮಗಳಿಂದ ಕೂಡಿದೆ. ಇದು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಪರಿಸರ, ಲಿಂಗ ಸಂಬಂಧಗಳು ಮೊದಲಾದ ಅನೇಕ ಸಂಗತಿಗಳನ್ನು ಒಳಗೊಳ್ಳುವುದರಿಂದ ಇದೊಂದು ಅಂತರ್‌ಶಿಸ್ತೀಯ ಅಥವಾ ಬಹುಶಿಸ್ತೀಯ ಅಧ್ಯಯನವಾಗಿದೆ.

### ೧.೨. ಅಧ್ಯಯನದ ಉದ್ದೇಶಗಳು

ಭದ್ರಾ ಅಚ್ಚುಕಟ್ಟು ಪ್ರದೇಶದ ನೀರು ಬಳಕೆದಾರರ ಸಹಕಾರ ಸಂಘಗಳ ಮೂಲಕ ಕೈಗೊಳ್ಳಲಾಗುತ್ತಿರುವ ನೀರಾವರಿ ನಿರ್ವಹಣೆಯಲ್ಲಿನ ಸಾಧಕ ಬಾಧಕಗಳನ್ನು ಅಧ್ಯಯನ ಮಾಡುವುದು ಈ ಸಂಶೋಧನೆಯ ಒಟ್ಟಾರೆ ಧ್ಯೇಯವಾಗಿದೆ. ಅಧ್ಯಯನದ ಸಮಸ್ಯೆಗಳ ಹಿನ್ನೆಲೆಯಲ್ಲಿ ಉದ್ದೇಶಗಳನ್ನು ರೂಪಿಸಿಕೊಳ್ಳಲಾಗಿದೆ. ಅಧ್ಯಯನ ಸಮಸ್ಯೆಗಳೇ ಉದ್ದೇಶಗಳನ್ನು ನಿರ್ಧಾರ ಮಾಡುತ್ತವೆ. ಇಲ್ಲಿ ಪ್ರತಿಯೊಂದು ಉದ್ದೇಶವನ್ನು ಸಾದ್ಯಾಂತವಾಗಿ ವಿವರಿಸಲಾಗಿದೆ. ಈಗಾಗಲೇ ಗುರುತಿಸಿಕೊಳ್ಳಲಾಗಿರುವ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುವ ಉದ್ದೇಶವನ್ನು ಹೊಂದಲಾಗಿದೆ. ಪರಿಹಾರಗಳನ್ನು ಪ್ರದೇಶ ವಿಶಿಷ್ಟ ನೆಲೆಗೆ ಪರಿಮಿತಗೊಳಿಸಲಾಗಿದೆ. ಆದರೂ ಹಲವು ಬದಲಾವಣೆಗಳೊಂದಿಗೆ ಅವುಗಳನ್ನು ಸಾಮಾನ್ಯ ನೆಲೆಯಲ್ಲಿ ಹೊಂದಿಸಿಕೊಳ್ಳಲು ಸಾಧ್ಯವಿದೆ. ಸಮಸ್ಯೆಗಳನ್ನು ಖಂಡವಾದಿ ನೆಲೆಯಲ್ಲಿ ಪರಿಭಾವಿಸಿಕೊಂಡಿದ್ದರೂ ಅಖಂಡವಾದಿ ನೆಲೆಗೆ ಅವುಗಳನ್ನು ಪರಿವರ್ತಿಸಿಕೊಳ್ಳಲು ಸಾಧ್ಯವಿದೆ.

ಕರ್ನಾಟಕ ರಾಜ್ಯದಲ್ಲಿ ೨೦೦೦ರ ವರೆಗೆ ಬಾರಿ ಮತ್ತು ಮಧ್ಯಮ ನೀರಾವರಿಯ ನಿರ್ವಹಣೆಯು ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳ (ಕಾಡಾ) ವಶದಲ್ಲಿತ್ತು. ಈ ಕಾಡ ವ್ಯವಸ್ಥೆಯು ಹಲವಾರು ಇಲಾಖೆಗಳೊಂದಿಗೆ ಸಂಯೋಜನೆಗೊಂಡಿರುವುದರಿಂದ, ನೀರಾವರಿಯ ಒಟ್ಟಾರೆ ವ್ಯವಸ್ಥಾಪನೆ ಸಾಧ್ಯವಾಗಿಲ್ಲ. ಏಕೆಂದರೆ ಕಾಡದ ಚೌಕಟ್ಟಿನಲ್ಲಿರುವ ನೀರಾವರಿ, ಕೃಷಿ, ಸಹಕಾರ ಮತ್ತು ತಾಂತ್ರಿಕ ಇಲಾಖೆಗಳ ನಡುವೆ ಸಮನ್ವಯತೆ ಸಾಧಿಸುವುದು ಅಷ್ಟು ಸುಲಭದ ಕಾರ್ಯವಲ್ಲ. ಈ ಸಮನ್ವಯತೆಯೊಂದಿಗೆ ಕಾಡದ ಆಡಳಿತವು ದ್ವಿಮುಖವಾಗಿರುವುದು ಒಂದು ಕಾರಣವಾಗಿದೆ. ಭಾರತೀಯ ಆಡಳಿತ ಸೇವಾ ದರ್ಜೆಯ ಅಧಿಕಾರಿಯು ಇದರ ಆಡಳಿತಾಧಿಕಾರಿಯಾಗಿದ್ದು, ಇದರೊಂದಿಗೆ ಆಡಳಿತ ಪಕ್ಷಕ್ಕೆ ಸೇರಿದ ಒಬ್ಬ ರಾಜಕೀಯ ವ್ಯಕ್ತಿ ಅಧ್ಯಕ್ಷನಾಗಿ ಸರ್ಕಾರದಿಂದ ನೇಮಕಗೊಳ್ಳುತ್ತಾನೆ. ಆಡಳಿತಾಧಿಕಾರಿ ಮತ್ತು ಅಧ್ಯಕ್ಷರ ನಡುವೆ ಸಹಯೋಗ ಏರ್ಪಡುವುದು ಅಪರೂಪವಾಗಿರುತ್ತದೆ. ಅದೇ ರೀತಿಯಾಗಿ ಅಧ್ಯಕ್ಷರು ಮತ್ತು ಆಡಳಿತಾಧಿಕಾರಿಗಳನ್ನೊಳಗೊಂಡಂತೆ ಸರ್ಕಾರದಿಂದ ನಾಮಕರಣಗೊಳ್ಳುವ ಸದಸ್ಯರೊಂದಿಗೆ ಒಂದು ನೀರಾವರಿ ಸಲಹಾ ಸಮಿತಿಯು ರಚನೆಯಾಗುತ್ತದೆ.

ಹೀಗೆ ರಚನೆಗೊಂಡ ನೀರಾವರಿ ಸಲಹಾ ಸಮಿತಿಯಲ್ಲಿ ರೈತರ ಅಗತ್ಯಗಳಿಗಿಂತ ಪಟ್ಟಭದ್ರ ಹಿತಾಸಕ್ತಿಗಳು ಪ್ರಭಾವ ಬೀರುವ ಸಾಧ್ಯತೆಗಳಿರುತ್ತವೆ. ಸಲಹಾ ಸಮಿತಿಯ ಅನೇಕ ಸದಸ್ಯರಿಗೆ ನೀರಿನ ಬಳಕೆ, ನಿರ್ವಹಣೆ, ತಾಂತ್ರಿಕ ವಿಷಯಗಳ ಬಗ್ಗೆ ಅರಿವು ಇರುವ ಸಾಧ್ಯತೆಯು ಕಡಿಮೆಯಿರುತ್ತದೆ. ಮಳೆಯು ಕಡಿಮೆಯಾಗಿ ಕ್ಷಾಮದ ಲಕ್ಷಣಗಳು ಕಂಡುಬಂದಾಗ ಜಲಾಶಯದ ನೀರಿಗಾಗಿ ರೈತರು ಮತ್ತು ಸುತ್ತಮುತ್ತಲಿನ ನಗರ, ಗ್ರಾಮಗಳಿಗೆ ಕುಡಿಯುವ ನೀರಿಗಾಗಿ ಬೇಡಿಕೆ ಬಂದು ಪರಸ್ಪರ ಪೈಪೋಟಿ, ಸಂಘರ್ಷಗಳಿಗೆ ಅವಕಾಶವಾಗುವ ಸಂಭವವಿರುತ್ತದೆ. ಇದಲ್ಲದೆ ಅನೇಕ ರೈತರು ಅನಧಿಕೃತವಾಗಿ ತಮ್ಮ ಜಮೀನುಗಳಿಗೆ ನೀರು ಹರಿಸಿಕೊಳ್ಳುತ್ತಿರುತ್ತಾರೆ. ಕಾಲುವೆಗಳಿಗೆ ಪಂಪುಗಳನ್ನು ಅಳವಡಿಸಿ ಅತಿ ದೂರದ ಜಮೀನುಗಳಿಗೆ ಅಕ್ರಮವಾಗಿ ನೀರನ್ನು ಪಡೆಯುವವರು ಇರುತ್ತಾರೆ. ಸಲಹಾ ಸಮಿತಿಯು ವಾರ್ಷಿಕವಾಗಿ ಬೆಳೆಯ ಪದ್ಧತಿ, ನೀರನ್ನು ಕಾಲುವೆಗಳಿಗೆ ಹರಿಸುವ ವೇಳಾಪಟ್ಟಿ, ವಾರಾಬಂದಿ, ಕುಡಿಯುವ ನೀರಿನ ವ್ಯವಸ್ಥೆ, ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರಗಳಿಂದ ಬರುವ ವಿವಿಧ ಅನುದಾನ ಮತ್ತು ಸಹಾಯಧನಗಳ ಬಳಕೆ, ಕಾಲುವೆ ನೀರಾವರಿಯೊಂದಿಗೆ ಕೆರೆಕಟ್ಟೆಗಳ ಮತ್ತು ಅಂತರ್ಜಲದ ಸಂಯೋಜಿತ ಬಳಕೆ ಹೀಗೆ ಹಲವಾರು ವೈವಿಧ್ಯಮಯ ಕಾರ್ಯಗಳನ್ನು ಅನುಷ್ಠಾನಗೊಳಿಸುವ ಹೊಣೆಗಾರಿಕೆಯನ್ನು ಹೊತ್ತಿರುತ್ತದೆ. ಈ ಎಲ್ಲಾ ಕಾರ್ಯಗಳನ್ನು ಕಾಡಾ ಹೇಗೆ ನಿರ್ವಹಿಸುತ್ತದೆ ಎಂಬುದನ್ನು ಅಧ್ಯಯನ ಮಾಡುವ ಅಗತ್ಯವಿದೆ. ***ಆದುದರಿಂದ ಈ ಅಧ್ಯಯನವು ನೀರಾವರಿ ನಿರ್ವಹಣೆಯಲ್ಲಿ ಈಗ ಇರುವ ಕಾಡಾ ವ್ಯವಸ್ಥೆಯನ್ನು ವಿಮರ್ಶೆಗೆ ಒಳಪಡಿಸುವ ಉದ್ದೇಶವನ್ನು ಹೊಂದಿದೆ.***

ಭಾರತದಲ್ಲಿ ಮಳೆಯ ಅನಿಶ್ಚಿತತೆ ಮತ್ತು ಆಹಾರದ ಕೊರತೆಯನ್ನು ನೀಗಿಸಲು ಸ್ವಾತಂತ್ರ್ಯದ ನಂತರ ಬೃಹತ್ ಅಣೆಕಟ್ಟುಗಳನ್ನು ನಿರ್ಮಿಸುವುದರ ಮೂಲಕ ಶಾಶ್ವತ ನೀರಾವರಿ ವ್ಯವಸ್ಥೆಗಳನ್ನು

ಕಲ್ಪಿಸಲಾಗಿದೆ. ಈ ನೀರಾವರಿ ವ್ಯವಸ್ಥೆಯು ದಿನದ ೨೪ ಗಂಟೆಗಳೂ ನೀರನ್ನು ರೈತರಿಗೆ ಒದಗಿಸುವ ಉದ್ದೇಶವನ್ನು ಹೊಂದಿದೆ. ಆದರೆ ರೈತರು ಹಗಲು ಹೆಚ್ಚೆಂದರೆ ೧೨ ಗಂಟೆಗಳು ಮಾತ್ರ ಈ ನೀರಿನ ನಿರ್ವಹಣೆ ಮಾಡಿ ಉಳಿದ ೧೨ ಗಂಟೆಗಳು ನೀರು ಪೋಲಾಗದಂತೆ ನಿರ್ವಹಿಸಲು ಯಾವ ವ್ಯವಸ್ಥೆಯನ್ನು ಮಾಡಿಕೊಂಡಿಲ್ಲ. ತಾಂತ್ರಿಕ ಮತ್ತು ಜಲಾಶಯದ ಪ್ರದೇಶದ ಸಂಗತಿಗಳನ್ನು ಪರಿಗಣಿಸಿ ಆಣೆಕಟ್ಟನ್ನು ನಿರ್ಮಿಸಲಾಗಿರುತ್ತದೆ. ಜಲಾಶಯದ ಕೆಳಭಾಗದ ಭೂಮಿಯು ಗುರುತ್ವಾಕರ್ಷಣ ಬಲದಿಂದ ನೀರು ಹರಿಯಬಲ್ಲ ಪ್ರದೇಶ ವ್ಯಾಪ್ತಿಗೆ ನೀರನ್ನು ಕಾಲುವೆಗಳ ಮೂಲಕ ಹರಿಸಿ ರೈತರ ಜಮೀನುಗಳಿಗೆ ಹಾಯಿಸಲಾಗುತ್ತದೆ. ಹೀಗೆ ಕಾಲುವೆಗಳ ಮುಖಾಂತರ ನೀರನ್ನು ಹರಿಸುವಾಗ ಕೆಲವು ಭಾಗದ ರೈತರ ಜಮೀನು ಕಾಲುವೆಯ ಪ್ರಾರಂಭದಲ್ಲೇ ಇದ್ದು ಅದನ್ನು ಮೇಲ್ತುದಿಯ ಭಾಗವೆಂದು ಆ ರೈತರನ್ನು ಮೇಲ್ತುದಿ ಸಾಗುವಳಿದಾರರೆಂದು ಕರೆಯಲಾಗುತ್ತದೆ. ಆನಂತರದ ಭಾಗವನ್ನು ಮಧ್ಯಮ ಭಾಗವೆಂದು ಅವರನ್ನು ಮಧ್ಯದ ಸಾಗುವಳಿದಾರರೆಂದು ಪರಿಗಣಿಸಲಾಗುತ್ತದೆ. ಕಾಲುವೆಯ ಕೊನೆಯ ಭಾಗದ ರೈತರನ್ನು ಕೆಳತುದಿಯ ಸಾಗುವಳಿದಾರರೆಂದು ಗುರುತಿಸಲಾಗಿದೆ. ಕಾಲುವೆಯ ಈ ಮೂರು ಭಾಗದ ರೈತರಲ್ಲಿ ಮೇಲ್ತುದಿ ರೈತರು ಅಧಿಕ ನೀರನ್ನು ಪಡೆದರೆ, ಮಧ್ಯಮ ಭಾಗದ ರೈತರು ಸಾಧಾರಣ ನೀರನ್ನು ಪಡೆಯುತ್ತಾರೆ. ಆದರೆ ಕೊನೆಭಾಗದಲ್ಲಿರುವ ಕೆಳತುದಿಯ ರೈತರು ನೀರಿನ ಅಭಾವದಿಂದ ಕಷ್ಟಕ್ಕೆ ಸಿಲುಕಬೇಕಾಗುತ್ತದೆ.

ಇದೇ ರೀತಿಯಾಗಿ ಅಚ್ಚುಕಟ್ಟು ಪ್ರದೇಶದಲ್ಲಿನ ಮತ್ತೊಂದು ಸಮಸ್ಯೆ ಎಂದರೆ ಅನಧಿಕೃತ ಸಾಗುವಳಿ ಅಧಿಕೃತ ಸಾಗುವಳಿ ಎಂದರೆ ಸರ್ಕಾರದಿಂದ ಅಧಿಸೂಚಿತ ಆಗಿರುವ ಅಂದರೆ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಗೆ ಸೇರಿರುವ ಭೂಮಿಯಾಗಿರುತ್ತದೆ. ಅನಧಿಕೃತ ಸಾಗುವಳಿ ಎಂದರೆ ನೀರಾವರಿ ಯೋಜನೆಯನ್ನು ರೂಪಿಸುವಾಗ ಸರ್ಕಾರದಿಂದ ಅಧಿಸೂಚಿತ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಗೆ ಸೇರ್ಪಡೆಗೊಳ್ಳದ ಜಮೀನಾಗಿರುತ್ತದೆ. ಅಂದರೆ ಅಚ್ಚುಕಟ್ಟು ಪ್ರದೇಶದಲ್ಲೇ ಆ ಜಮೀನು ಇದ್ದು ಯೋಜನೆ ರೂಪಿಸುವಾಗ ಅದು ಎತ್ತರ ಗುಡ್ಡ, ದಿನ್ನೆಯಂತಿದ್ದು ಗುರುತ್ವಾಕರ್ಷಣೆ ಬಲದಿಂದ ನೀರು ಏರದ ಜಮೀನಾಗಿರುತ್ತದೆ. ದಿನಕಳೆದಂತೆ ಅಂತಹ ಎತ್ತರವಾದ ಜಮೀನನ್ನು ಸಮತಟ್ಟುಗೊಳಿಸಿ ಕಾಲುವೆ ನೀರನ್ನು ಹರಿಸಿಕೊಂಡು ಸಾಗುವಳಿ ಮಾಡುವುದು. ಇಂದು ಅಧಿಕೃತ ಸಾಗುವಳಿಗಿಂತ ಅನಧಿಕೃತ ಸಾಗುವಳಿಯೇ ಹೆಚ್ಚಾಗಿರುವುದು ಅನೇಕ ಅಚ್ಚುಕಟ್ಟು ಪ್ರದೇಶಗಳಲ್ಲಿ ಕಾಣುತ್ತೇವೆ.

ನೀರಿನ ಅಕ್ರಮ ಎತ್ತುವಳಿ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳ ಇನ್ನೊಂದು ಸಮಸ್ಯೆಯಾಗಿದೆ. ಅಕ್ರಮ ನೀರು ಎತ್ತುವಳಿ ಎಂದರೆ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯಲ್ಲಿ ಅಲ್ಪಪ್ರಮಾಣದ ಜಮೀನಿರಬಹುದು ಅಥವಾ ಇಲ್ಲದೆ ಇದ್ದರೂ ಕಾಲುವೆಗೆ ನೇರವಾಗಿ ಪಂಪ್‌ಸೆಟ್ ಅಳವಡಿಸಿ ದೂರದ ಜಮೀನುಗಳಿಗೆ ನೀರನ್ನು ಸಾಗಿಸಿ ನೀರಾವರಿ ಬೆಳೆಗಳನ್ನು ಬೆಳೆಯುವುದು. ಮತ್ತೆ ಕೆಲವು ರೈತರು ಅಧಿಕೃತವಾಗಿರುವ ತಮ್ಮ ಜಮೀನಿನಲ್ಲಿಯೇ ಒಂದು ತೆರೆದ ಬಾವಿ ತೋಡಿ ಆ ಬಾವಿಗೆ ಕಾಲುವೆಯಿಂದ ನೀರನ್ನು ಹರಿಸಿಕೊಂಡು ನಂತರ ಪಂಪ್‌ಸೆಟ್ ಮೂಲಕ ದೂರ ಜಮೀನುಗಳಿಗೆ ನೀರನ್ನು ಅಕ್ರಮವಾಗಿ

ಪೂರೈಸಿಕೊಳ್ಳುತ್ತಾರೆ. ಇದರಿಂದ ಕಾಲುವೆಯ ಮಧ್ಯಭಾಗದವರಿಗೆ ಕೆಲಮಟ್ಟಿನ ಸಮಸ್ಯೆಯಾದರೆ ಆ ಕೊನೆಯ ಭಾಗದ ಕೆಳತುದಿ ರೈತರಿಗೆ ಹನಿ ನೀರು ದೊರೆಯದಂತಾಗುತ್ತದೆ.

ಇದರ ಜೊತೆಗೆ ರೈತನು ಹೊಂದಿರುವ ಭೂಹಿಡುವಳಿಯ ಆಧಾರದ ಮೇಲೆ ಅಧಿಕ ಭೂಹಿಡುವಳಿ ಹೊಂದಿರುವ ರೈತರು ಕಡಿಮೆ ಭೂಹಿಡುವಳಿ ಹೊಂದಿರುವವನು ಕಷ್ಟಕ್ಕೆ ಗುರಿಪಡಿಸುವ ಸಾಧ್ಯತೆಗಳಿರುತ್ತವೆ. ಕಾಡಾ ನಿಗದಿಪಡಿಸಿದಂತೆ ಬೆಳೆಯ ಮಾದರಿಯನ್ನು ಪಾಲನೆ ಮಾಡುವಲ್ಲಿನ ಕೊರತೆ ಕೆಲ ರೈತರು ಎಡವಿದಾಗ ಉಲ್ಲಂಘನೆ ಮಾಡುವ ಸಮಸ್ಯೆ. ವಾರಾಬಂದಿ ಪಾಲನೆಯಲ್ಲಿ ಉಲ್ಲಂಘನೆ, ವೇಳಾಪಟ್ಟಿಯನ್ನು ಗಣನೆಗೆ ತೆಗೆದುಕೊಳ್ಳದೇ ಅವಧಿಗೆ ಮೊದಲು ಅಥವಾ ನಂತರ ಬೆಳೆಗಳನ್ನು ಬೆಳೆದು ಜಲಾಶಯದ ನೀರಿಗಾಗಿ ಚಳುವಳಿ, ಜಾಥ, ಆಂದೋಲನಗಳನ್ನು ಮಾಡುವುದು. ಕುಡಿಯುವ ನೀರಿಗೆ ಕಾಯ್ದಿರಿಸಲಾದ ನೀರಿನಲ್ಲಿಯೂ ಬೆಳೆಗಳಿಗೆ ನೀರನ್ನು ಬಿಡಬೇಕೆಂದು ಪಟ್ಟು ಹಿಡಿಯುವುದು. ಹೀಗೆ ಅನೇಕ ಸಮಸ್ಯೆಗಳು ರೈತರ ಒಳಗೆ ಕಂಡುಬಂದರೆ ಮತ್ತೆ ಕೆಲವು ರೈತರು ಮತ್ತು ಕಾಡ, ರೈತರು ಮತ್ತು ನಗರದ ನಾಗರೀಕರು, ರೈತರು ಮತ್ತು ಸರ್ಕಾರ, ರೈತರು ಮತ್ತು ವಿವಿಧ ಇಲಾಖೆಯ ಅಧಿಕಾರಿ ವರ್ಗದವರು, ರೈತರು ಮತ್ತು ಕೃಷಿ ಕಾರ್ಮಿಕರು ಒಂದು ಪ್ರದೇಶದ ರೈತರು ಮತ್ತು ಮತ್ತೊಂದು ಪ್ರದೇಶದ ರೈತರ ನಡುವೆ ತಿಕ್ಕಾಟಗಳಿಗೆ ಕಾರಣವಾಗುವ ಸಾಧ್ಯತೆಗಳನ್ನು ಕಾಣುತ್ತೇವೆ. ***ಆದುದರಿಂದ ನೀರಾವರಿ ನಿರ್ವಹಣೆಯಲ್ಲಿ ಸಾಗುವಳಿದಾರರು ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು ಈ ಅಧ್ಯಯನದ ಎರಡನೆ ಉದ್ದೇಶವಾಗಿದೆ.***

ಕರ್ನಾಟಕ ರಾಜ್ಯಸರ್ಕಾರವು ೨೦೦೦ ರಲ್ಲಿ ನೀರಾವರಿ ಕಾಯ್ದೆಗೆ ತಿದ್ದುಪಡಿ ತಂದು ಕಾಡಗಳ ವ್ಯಾಪ್ತಿಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳನ್ನು ಸ್ಥಾಪಿಸಲು ಮುಂದಾಗಿದೆ. ಅದರಂತೆ ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲೂ ೨೯೮ ನೀ.ಬ.ಸ.ಸಂಘಗಳನ್ನು ಸ್ಥಾಪಿಸುವ ಗುರಿ ಹೊಂದಲಾಗಿದ್ದು ಇದರಲ್ಲಿ ಈಗಾಗಲೇ ೨೯೦ ಸಂಘಗಳನ್ನು ನೋಂದಾಯಿಸಲಾಗಿದೆ. ೧೦೮ ನೀ.ಬ.ಸ.ಸಂಘಗಳು ನೀರಾವರಿ ಇಲಾಖೆಯೊಂದಿಗೆ ಒಡಂಬಡಿಕೆಯ ಒಪ್ಪಂದವನ್ನು ಮಾಡಿಕೊಂಡಿವೆ. ಈ ಒಪ್ಪಂದ ಆಗಿರುವ ಸಂಘಗಳು ಕಾಲುವೆಯ ತೂಬಿನಿಂದ ಕೆಳಗೆ ನೀರು ಹರಿಯುವ ಕಾಲುವೆಗಳ ಉಸ್ತುವಾರಿ, ಹೂಳು ತೆಗೆಯುವಿಕೆ, ಬಸಿಕಾಲುವೆಗಳ ನಿರ್ವಹಣೆ, ಸದಸ್ಯರಿಂದ ನೀರು ತೆರಿಗೆ ವಸೂಲಿ ಮಾಡುವುದು ಇವೆ ಮೊದಲಾದ ಕಾರ್ಯಗಳನ್ನು ಸಹಕಾರ ತತ್ವದ ಅಡಿಯಲ್ಲಿ ನಿರ್ವಹಿಸುತ್ತಿವೆ.

ಹೀಗೆ ಸಂಘಗಳು ಯಾವುದೋ ಶೂನ್ಯದಲ್ಲಿ ಇರದೆ ಒಂದು ಸಾಮಾಜಿಕ ಚೌಕಟ್ಟಿನ ಒಳಗಡೆ ಕಾರ್ಯನಿರ್ವಹಿಸಬೇಕಾಗಿದೆ. ಸಾಮಾಜಿಕ ರಚನೆಯ ಸ್ವರೂಪದ ಆಧಾರದ ಮೇಲೆ ಪ್ರತಿಯೊಂದು ಚಟುವಟಿಕೆ ನಡೆಯುತ್ತಿರುತ್ತದೆ. ಅಂದರೆ ನಮ್ಮ ಸಮಾಜದ ರಚನಾ ವಿನ್ಯಾಸ ಎಂತಹದ್ದು ಎನ್ನುವುದರ ಹಿನ್ನೆಲೆಯಲ್ಲಿ ನೀ.ಬ.ಸ.ಸಂಘಗಳ ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸಿದಾಗ ಅಲ್ಲಿರುವ ವಾಸ್ತವ ಸತ್ಯಗಳು ಗೋಚರವಾಗುತ್ತವೆ. ನಮ್ಮ ಸಮಾಜ ಅಸಮಾನತೆ, ಏಣಿಶ್ರೇಣಿಗಳಿಂದ ಕೂಡಿದ್ದು ಜಾತಿ, ವರ್ಗ, ಧರ್ಮ, ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳು ಪ್ರತಿಯೊಂದು ಚಟುವಟಿಕೆ

ಗಳಲ್ಲೂ ಅಂತರ್ಗತವಾಗಿ ತಮ್ಮ ಪ್ರಭಾವ ಪರಿಣಾಮಗಳನ್ನು ಬೀರುತ್ತಿರುತ್ತವೆ. ಈ ಮೇಲ್ಕಂಡ ಸಂಗತಿಗಳು ನೀರು ಬಳಕೆದಾರರ ಸಹಕಾರ ಸಂಘಗಳ ಮೇಲೆ ಹೇಗೆ ಪ್ರಭಾವ ಪರಿಣಾಮಗಳನ್ನು ಬೀರುತ್ತವೆ ಎಂಬುದನ್ನು ತಿಳಿದುಕೊಂಡಾಗ ಸಹಭಾಗಿತ್ವ ತತ್ವ ಹೇಗೆ ಆಚರಣೆಗೆ ಬರುತ್ತದೆಂದು ಗೊತ್ತಾಗುತ್ತದೆ. ನೀ.ಬ.ಸ.ಸಂಘಗಳಲ್ಲಿ ಈ ಎಲ್ಲಾ ವೈವಿಧ್ಯತೆ ಜನ ಸಮುದಾಯವು ಇರುವುದರಿಂದ ಅವುಗಳನ್ನು ಬಿಟ್ಟು ಕೇವಲ ಕಾಯ್ದೆಗಳ, ನೀತಿ ನಿಯಮಗಳ ತೆರಿಗೆ ಪಾವತಿ ಸಾಮರ್ಥ್ಯ, ಬೆಳೆಗಳ ಮಾದರಿ ಇತ್ಯಾದಿಗಳ ಮೂಲಕ ಸಂಘಗಳನ್ನು ಮೌಲ್ಯಮಾಪನ ಮಾಡುವುದು ವಸ್ತುಸ್ಥಿತಿಗಳನ್ನು ಮರೆಮಾಚಿದಂತಾಗುತ್ತದೆ. ಈ ಮೇಲ್ಕಂಡ ಸಂಗತಿಗಳನ್ನೆ ಆಧರಿಸಿ ಈಗಾಗಲೇ ಅನೇಕ ಅಧ್ಯಯನಗಳು ನಡೆದಿವೆ. ಆದರೆ ಸಾಮಾಜಿಕ ರಚನೆಯ ಹಿನ್ನೆಲೆಯಲ್ಲಿ ನೀ.ಬ.ಸ. ಸಂಘಗಳನ್ನು ಅಧ್ಯಯನಕ್ಕೆ ಒಳಪಡಿಸಿರುವುದು ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆಯಿವೆ. ***ಆದುದರಿಂದ ಈ ಅಧ್ಯಯನದಲ್ಲಿ ನೀ.ಬ.ಸ. ಸಂಘಗಳ ಸ್ವರೂಪ ಮತ್ತು ಕಾರ್ಯ ಚಟುವಟಿಕೆಗಳನ್ನು ನಮ್ಮ ಸಾಮಾಜಿಕ ರಚನೆಯ ಹಿನ್ನೆಲೆಯಲ್ಲಿ ಪರಿಶೀಲಿಸುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ.***

ನೀ.ಬ.ಸ. ಸಂಘಗಳ ಕಾರ್ಯ ನಿರ್ವಹಣೆಯನ್ನು ಮೌಲ್ಯಮಾಪನ ಮಾಡುವ ಹಲವಾರು ಅಧ್ಯಯನಗಳು ಜಾಗತಿಕ ಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಮತ್ತು ರಾಜ್ಯಮಟ್ಟಗಳಲ್ಲಿ ನಡೆದಿವೆ ಮತ್ತು ನಡೆಯುತ್ತಲೂ ಇವೆ. ಆದರೆ ಯಾವುದೇ ಪ್ರದೇಶದ, ಸಂಘದ ಕಾರ್ಯ ಚಟುವಟಿಕೆಯನ್ನು ದೇಶದ ಎಲ್ಲಾ ಪ್ರದೇಶಗಳಿಗೆ ಸಾರ್ವತ್ರೀಕರಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಕೆಲವು ಸಂಗತಿಗಳು ಪ್ರದೇಶ ವಿಶಿಷ್ಟ ಮತ್ತು ಕಾಲವಿಶಿಷ್ಟಗಳಿಂದ ಕೂಡಿರುತ್ತವೆ. ***ಆದುದರಿಂದ ಪ್ರಸ್ತುತ ಅಧ್ಯಯನವು ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿರುವ ೨೫ ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆಯನ್ನು ಮೌಲ್ಯಮಾಪನ ಮಾಡುವ ಉದ್ದೇಶವನ್ನು ಹೊಂದಿದೆ.*** ಸರ್ಕಾರ ನೀರಾವರಿ ಕಾಯ್ದೆಗೆ ತಿದ್ದುಪಡಿ ತಂದು ಜಾರಿಗೊಳಿಸಿರುವ ಸಹಭಾಗಿತ್ವದ ತತ್ವವನ್ನು ನೀ.ಬ.ಸ. ಸಂಘಗಳು ಹೇಗೆ ಪರಿಭಾವಿಸಿಕೊಂಡಿವೆ. ಸರ್ವ ಸದಸ್ಯರ ಸಭೆ ಹೇಗೆ ನಡೆಯುತ್ತದೆ. ಆಡಳಿತ ಮಂಡಳಿಯ ಕಾರ್ಯ ವೈಖರಿ ಹೇಗಿದೆ? ಚುನಾವಣೆ ಪ್ರಜಾಸತ್ತಾತ್ಮಕವಾಗಿದೆ? ನೀರು ಕರ ಪಾವತಿ ಹೇಗಿದೆ? ಇವೇ ಮೊದಲಾದ ಅಂಶಗಳನ್ನು ಲೆಕ್ಕಪತ್ರ ನಿರ್ವಹಣೆ, ವಾರ್ಷಿಕವಾಗಿ ಯೋಜನೆಗಳ ತಯಾರು, ಸಲಹಾ ಸಮಿತಿಗಳ ರಚನೆ ಮುಂತಾದವುಗಳನ್ನು ಈ ಅಧ್ಯಯನದಲ್ಲಿ ಪರೀಕ್ಷಿಸಲಾಗುತ್ತದೆ.

## ೧.೩. ಅಧ್ಯಯನದ ಸ್ವರೂಪ, ವ್ಯಾಪ್ತಿ, ಪ್ರಾಮುಖ್ಯತೆ ಮತ್ತು ಮಿತಿಗಳು

ಈ ಅಧ್ಯಯನವು ಸೈದ್ಧಾಂತಿಕ ಮತ್ತು ನಿದರ್ಶನಾತ್ಮಕ ಅಧ್ಯಯನವಾಗಿದೆ. ನೀರಾವರಿ ನಿರ್ವಹಣೆಯಲ್ಲಿ ಸಹಭಾಗಿತ್ವ ಕುರಿತಾದ ಹಲವಾರು ಸಂಗತಿಗಳನ್ನು ಈ ಮಹಾಪ್ರಬಂಧವು ಚರ್ಚಿಸುತ್ತದೆ. ಪ್ರಸ್ತುತ ಅಧ್ಯಯನವು ಕರ್ನಾಟಕ ರಾಜ್ಯದ ೬ ಕಾಡಾಗಳಲ್ಲಿ ಒಂದಾಗಿರುವ ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಸೇರಿದೆ. ಈ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ತುಂಗಾ, ಭದ್ರಾ, ಹಾಗೂ ಗೋಂದಿ ಜಲಾಶಯಗಳು ಬರುತ್ತವೆ.

ಪ್ರಸ್ತುತ ಅಧ್ಯಯನಕ್ಕೆ ತುಂಗಾ ಜಲಾಶಯ ವ್ಯಾಪ್ತಿಯ ಅಚ್ಚುಕಟ್ಟು ಪ್ರದೇಶದ ಎಡದಂಡೆ ನಾಲೆಯ ಪ್ರಾಂತ್ಯದಲ್ಲಿ ಒಡಂಬಡಿಕೆ ಒಪ್ಪಂದ ಆಗಿರುವ ೨೩ ನೀ.ಬ.ಸ. ಸಂಘಗಳು ಬಲದಂಡೆ ನಾಲೆ ೨೨. ಸಂಘಗಳು ಮತ್ತು ಭದ್ರಾ ಎಡನಾಲೆ ವ್ಯಾಪ್ತಿಯಲ್ಲಿ ಒಡಂಬಡಿಕೆ ಒಪ್ಪಂದ ಆಗಿರುವ ೧೯ ನೀ.ಬ. ಸಂಘಗಳನ್ನು ಮತ್ತು ಭದ್ರಾ ಬಲದಂಡೆ ನಾಲೆಯ ೧೧ ಒಡಂಬಡಿಕೆ ಒಪ್ಪಂದ ಆಗಿರುವ ನೀ.ಬ.ಸ. ಸಂಘಗಳು ಆಯ್ಕೆ ಮಾಡಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ಮೂಲಕ ಭದ್ರಾ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯ ಆಯ್ದ ನೀರು ಬಳಕೆದಾರರ ಸಹಕಾರ ಸಂಘಗಳ ಸಮಸ್ಯೆಗಳನ್ನು ಸಾಂಸ್ಥಿಕ ಮಟ್ಟದಲ್ಲಿ ಹಾಗೂ ನೀರು ಬಳಕೆದಾರರ ಸಹಕಾರ ಸಂಘಗಳ ಮಟ್ಟದಲ್ಲಿ ಗುರುತಿಸಿ ಅವುಗಳಿಗೆ ಪರಿಹಾರಗಳನ್ನು ಸೂಚಿಸುವುದು, ಅಧ್ಯಯನದ ಫಲಿತಗಳಿಗೆ ಅನುಗುಣವಾಗಿ ಮುಂದೆ ಕೈಗೊಳ್ಳಬೇಕಾಗಿರುವ ನೀತಿ ಧೋರಣೆಗಳನ್ನು ತಿಳಿಸುವುದು. ಈ ನೀತಿ ಧೋರಣೆಗಳು ಕೇವಲ ಅಧ್ಯಯನ ಕ್ಷೇತ್ರ ಮಾತ್ರವಲ್ಲದೆ ವಿವಿಧ ಮಾರ್ಪಾಟುಗಳೊಂದಿಗೆ ಅವುಗಳನ್ನು ಇತರ ಪ್ರದೇಶಗಳಿಗೂ ಬಳಕೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ರಾಜ್ಯಮಟ್ಟದಲ್ಲಿ ನೀ.ಬ.ಸ. ಸಂಘಗಳ ಕುರಿತು ನೀತಿ ಧೋರಣೆ ರೂಪಿಸುವಲ್ಲಿ ಈ ಅಧ್ಯಯನದಲ್ಲಿನ ಮಾರ್ಗೋಪಾಯಗಳನ್ನು ಬಳಕೆ ಮಾಡಿಕೊಳ್ಳಲು ಅನುಕೂಲವಾಗುತ್ತದೆ. ಮುಂದೆ ಈ ವಿಷಯ ಕುರಿತು ಅಧ್ಯಯನ ಮಾಡುವ ಸಂಶೋಧಕರಿಗೆ ಮಾರ್ಗಸೂಚಿಯಾಗುತ್ತದೆ.

ಪ್ರಸ್ತುತ ಅಧ್ಯಯನವು ಎಂಫಿರಿಕಲ್ ಅಧ್ಯಯನವಾಗಿರುವುದರಿಂದ ಸಂಗತಿಗಳು ಕ್ಷೇತ್ರದಲ್ಲಿನ ಮತ್ತು ಸೈದ್ಧಾಂತಿಕ ಮಾಹಿತಿಯನ್ನೇ ಅವಲಂಬಿಸಿರುತ್ತವೆ. ಅಧ್ಯಯನ ಕ್ಷೇತ್ರದಲ್ಲಿ ಲಭ್ಯವಾಗುವ ಮಾಹಿತಿಯ ನಿಖರತೆ ಆಧಾರದ ಮೇಲೆ ಸಂಶೋಧನಾ ವಿಷಯದ ಫಲಿತಗಳು ವಿಶ್ಲೇಷಣೆಯಾಗುತ್ತವೆ. ಆದರೆ ಮಾಹಿತಿ ನೀಡುವವರು ವಿಷಯಗಳನ್ನು ಮರೆಮಾಚಿದರೆ ನಿಖರತೆ ಸಾಧ್ಯವಾಗದೇ ಇರಬಹುದು. ಇದು ಅಧ್ಯಯನದ ಒಂದು ಮಿತಿಯಾಗುತ್ತದೆ. ವಸ್ತುಸ್ಥಿತಿಯನ್ನು ಕಂಡುಕೊಳ್ಳುವಾಗ ಕ್ಷೇತ್ರದ ಮಾಹಿತಿಯನ್ನೇ ಅವಲಂಬಿಸ ಬೇಕಾಗುತ್ತದೆ.

ಸಮುದಾಯ ಸಹಭಾಗಿತ್ವವನ್ನು ಅವಲೋಕನೆ ಮಾಡುವಾಗ ಒಂದು ವರ್ಗ, ಜಾತಿ, ಜನತೆ, ಮತ್ತೊಂದು ವರ್ಗ, ಜಾತಿಗಳ ಜನರೊಂದಿಗೆ ಒಮ್ಮತ, ಸಮ್ಮತ ಅಭಿಪ್ರಾಯಕ್ಕೆ ಬರಲಾರರು. ಆಗ ಮುಖ್ಯ ವಿಷಯಗಳು ಗೌಣವಾಗಿ ಪ್ರಮುಖವಲ್ಲದ ಸಂಗತಿಗಳೇ ಮೇಲ್ಮೆ ಸಾಧಿಸುವ ಸಾಧ್ಯತೆಯಿರುತ್ತದೆ. ಇದು ವಿಷಯ ವರ್ಗೀಕರಣಕ್ಕೆ ತೊಡಕಾಗುವ ಸಂಭವವಿರುತ್ತದೆ. ತಿರುಚಿತ ವಾಸ್ತವಾಂಶಗಳು ವ್ಯತಿರಿಕ್ತ ನಿರ್ಧಾರಕ್ಕೆ ಅವಕಾಶ ಕಲ್ಪಿಸುವುದು ಈ ಅಧ್ಯಯನದ ಒಂದು ಮಿತಿಯಾಗಿದೆ.

## ೧.೪. ಅಧ್ಯಯನದ ವಿಧಾನ

ಈ ಸಂಶೋಧನಾ ಮಹಾಪ್ರಬಂಧವು ನೈಸರ್ಗಿಕ ಸಂಪನ್ಮೂಲ ಬಳಕೆಯಲ್ಲಿ ಸಮುದಾಯದ ಸಹಭಾಗಿತ್ವವನ್ನು ಕುರಿತ ಅಧ್ಯಯನವಾಗಿದೆ. ಇಲ್ಲಿ ಜನಸಮುದಾಯದ ವೈವಿಧ್ಯಮಯ ವರ್ತನೆಗಳನ್ನು ಕಂಡುಕೊಂಡು ಆನಂತರ ಅವರ ಭಾಗವಹಿಸುವಿಕೆಯನ್ನು ಮೌಲ್ಯಮಾಪನ ಮಾಡಬೇಕಾಗುತ್ತದೆ. ಆದುದರಿಂದ ಇಲ್ಲಿ ಅವಲೋಕನ ವಿಧಾನ ಹೆಚ್ಚಿನ ಉಪಯೋಗಕ್ಕೆ ಬರುತ್ತದೆ. ಫಲಾನುಭವಿಗಳು ಮಾಹಿತಿ ಒದಗಿಸುವಾಗ ಅವರ ಮನೋಭಾವಗಳನ್ನು ಅವಲೋಕನದ ಮೂಲಕ ತಿಳಿದುಕೊಂಡು ವಸ್ತುನಿಷ್ಠ ನಿರ್ಣಯಕ್ಕೆ ಬರಬೇಕಾಗುತ್ತದೆ.

ಅಧ್ಯಯನ ವಿಧಾನವನ್ನು ವಿಷಯದ ಸಮಸ್ಯೆಗಳ ಮತ್ತು ಉದ್ದೇಶಗಳ ಹಿನ್ನೆಲೆಯಲ್ಲಿ ಅಳವಡಿಸಿ ಕೊಳ್ಳಲಾಗಿದೆ. ಇದು ಮೂಲತಃ ನಿದರ್ಶನಾತ್ಮಕ ಅಧ್ಯಯನವಾಗಿದ್ದರೂ ವಿಷಯಕ್ಕೆ ಸಂಬಂಧಿಸಿದಂತೆ ತಾತ್ವಿಕ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಎಂಫಿರಿಕಲ್ ಅಧ್ಯಯನಕ್ಕೆ ಪೂರಕವಾಗಿ ಸೈದ್ಧಾಂತಿಕ ಚೌಕಟ್ಟನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಈ ಸಂಶೋಧನೆಯು ನಿದರ್ಶನಾತ್ಮಕ ಅಧ್ಯಯನವಾಗಿರುವುದರಿಂದ ಎರಡು ಮೂಲಗಳಿಂದ ಮಾಹಿತಿ ಪಡೆಯಬೇಕಾಗುತ್ತದೆ. ಮೊದಲನೆಯದಾಗಿ, ವಸ್ತು ವಿಶ್ಲೇಷಣೆಗೆ ಆನುಷಂಗಿಕ ಮೂಲಗಳಾದ ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಿಗಳನ್ನು ಬಳಕೆ ಮಾಡಿಕೊಳ್ಳಲಾಗಿದೆ. ನೀರಾವರಿ ನಿರ್ವಹಣೆಯಲ್ಲಿ ಬಳಕೆದಾರರ ಸಹಭಾಗಿತ್ವದ ಬಗ್ಗೆ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ನಿಯತಕಾಲಿಕೆಗಳಲ್ಲಿ ಬಂದಿರುವ ವಿದ್ವತ್‌ಪೂರ್ಣ ಲೇಖನಗಳಿಂದ ಮೂಲ ಪರಿಭಾವನೆಗಳ ಬಗ್ಗೆ ಅಗತ್ಯ ಮಾಹಿತಿ ಪಡೆಯಲಾಗಿದೆ. ವಿವಿಧ ವಿಶ್ವವಿದ್ಯಾಲಯಗಳಲ್ಲಿ ಸಲ್ಲಿಕೆಯಾಗಿರುವ ಮಹಾಪ್ರಬಂಧಗಳಲ್ಲಿನ ಅಂತಿಮ ಫಲಿತಗಳನ್ನು ಸೈದ್ಧಾಂತಿಕ ವಿಶ್ಲೇಷಣೆಗೆ ಉಪಯೋಗಿಸಿಕೊಳ್ಳಲಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಆದೇಶಗಳು, ವಿವಿಧ ಸಮಿತಿಗಳ ವರದಿಗಳು, ಕರ್ನಾಟಕದ ಜಲಸಂಪನ್ಮೂಲ ಇಲಾಖೆಯ 'ಜಲಸಂಪನ್ಮೂಲ' ಎಂಬ ಪಾಕ್ಷಿಕ ಪತ್ರಿಕೆಯಲ್ಲಿ ವಿಚಾರಪೂರ್ಣ ಲೇಖನಗಳನ್ನು ಅಧ್ಯಯನ ಅವಶ್ಯಕತೆಗೆ ಅನುಗುಣವಾಗಿ ಬಳಕೆ ಮಾಡಿಕೊಳ್ಳಲಾಗಿದೆ. ನೀರಾವರಿ ಕ್ಷೇತ್ರ ಮತ್ತು ಅರ್ಥಶಾಸ್ತ್ರದಲ್ಲಿ ಪರಿಣಿತ ಹೊಂದಿದ ವಿವಿಧ ತಜ್ಞರೊಂದಿಗೆ ನಡೆಸಿದ ಅನೌಪಚಾರಿಕ ಚರ್ಚೆ, ಸಂವಾದ, ವಿಚಾರ ಸಂಕಿರಣಗಳಲ್ಲಿ ಮಂಡಿತವಾದ ಉಪನ್ಯಾಸಗಳನ್ನು ಕೇಳಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಧಾರವಾಡದಲ್ಲಿ ನೀರು ಬಳಕೆದಾರರ ಸಹಕಾರಿ ಸಂಘಗಳಿಗೆ ತರಬೇತಿ ನೀಡುವುದು ಮತ್ತು ನೆಲ, ಜಲದ ಉತ್ತಮ ನಿರ್ವಹಣೆಗಾಗಿ ಅನೇಕ ಪ್ರಾಯೋಗಿಕ ಕಾರ್ಯಕ್ರಮಗಳನ್ನು ಆಯೋಜಿಸುತ್ತಿರುವ ಜಲ ಮತ್ತು ನೆಲ ನಿರ್ವಹಣಾ ಸಂಸ್ಥೆ (ವಾಲ್ಮಿ)ಯ ನಿರ್ದೇಶಕರೊಂದಿಗೆ ಸಂವಾದ ನಡೆಸಿ ಸಹಭಾಗಿತ್ವ ಪರಿಕಲ್ಪನೆಯ ಹಿನ್ನೆಲೆ ಮತ್ತು ಮುನ್ನೋಟಗಳ ಬಗ್ಗೆ ಮಾಹಿತಿ ಪಡೆಯಲಾಗಿದೆ.

ಅಧ್ಯಯನ ಕ್ಷೇತ್ರದ ೭೩ ಗ್ರಾಮಗಳ ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ಸಹಭಾಗಿತ್ವ ಗ್ರಾಮೀಣ ಸಮೀಕ್ಷೆ ಮೂಲಕ ಪಡೆಯಲಾಗಿದೆ. ಈ ಎಲ್ಲಾ ಸಂಗತಿಗಳನ್ನು ಗ್ರಾಮದ ಜನತೆಯಿಂದ ಪಡೆದು ಒಟ್ಟಾರೆ ಪರಿಸ್ಥಿತಿಯನ್ನು ಅಂದಾಜು ಮಾಡಿ ಶೇಕಡಾವಾರು ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ. ಗ್ರಾಮಗಳಲ್ಲಿನ ಜಾತಿವಾರು ಜನಸಂಖ್ಯೆ, ಭೂಹಿಡುವಳಿ ಪ್ರಮಾಣ, ಶಿಕ್ಷಣ ಮಟ್ಟ, ರಾಜಕೀಯ ಸ್ಥಾನಮಾನ, ಸಾಮಾಜಿಕ ಸ್ಥಿತಿಗತಿಗಳನ್ನು ಜಾತಿವಾರು ಅಂದಾಜು ಮಾಡಲಾಗಿದೆ. ಜಾತಿಗಳನ್ನು ೧೦ ಗುಂಪುಗಳನ್ನಾಗಿ ವರ್ಗೀಕರಿಸಿಕೊಳ್ಳಲಾಗಿದೆ. ಭೂಹಿಡುವಳಿಗಳನ್ನು ಸಣ್ಣ, ಮಧ್ಯಮ ಮತ್ತು ದೊಡ್ಡ ಹಿಡುವಳಿಗಳೆಂದು ವಿಂಗಡಿಸಿಕೊಳ್ಳಲಾಗಿದೆ. ಆರ್ಥಿಕವಾಗಿ ಬಡತನ ರೇಖೆಗಿಂತ ಕೆಳಗಿನ ಮತ್ತು ಬಡತನ ರೇಖೆಗಿಂತ ಮೇಲಿನ ಗುಂಪಿನೊಂದಿಗೆ ಶ್ರೀಮಂತ ವರ್ಗವನ್ನು ವರ್ಗೀಕರಿಸಿಕೊಳ್ಳಲಾಗಿದೆ. ಸಾಮಾಜಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ಗ್ರಾಮಗಳ ವಿವಿಧ ಸಂಘ ಸಂಸ್ಥೆಗಳಲ್ಲಿ ಹೊಂದಿರುವ ಹಾಲಿ ಮತ್ತು ಮಾಜಿ ಸ್ಥಾನಗಳ ಆಧಾರದ ಮೇಲೆ ನಿರ್ಧಾರ ಮಾಡಲಾಗಿದೆ. ಶೈಕ್ಷಣಿಕ ಮಟ್ಟವನ್ನು ಸಹಭಾಗಿತ್ವ ಗ್ರಾಮೀಣ ಸಮೀಕ್ಷೆ ಮೂಲಕ ಪಡೆದ ಮಾಹಿತಿಯ ಆಧಾರದ ಮೇಲೆ ನಿಗದಿಪಡಿಸಲಾಗಿದೆ. ಈ ಎಲ್ಲಾ ಸಂಗತಿಗಳನ್ನು ಶೇಕಡವಾರು ಮಾಡಿ ಕೋಷ್ಟಕಗಳನ್ನು ತಯಾರಿಸಿ ವಿಶ್ಲೇಷಣೆ ಮಾಡಲಾಗಿದೆ.

ಎರಡನೆಯದಾಗಿ ಕ್ಷೇತ್ರಕಾರ್ಯದ ಮೂಲಕ ಪ್ರಾಥಮಿಕ ಮಾಹಿತಿಗಳನ್ನು ಕಲೆ ಹಾಕಿ 'ವಿಷಯಾಧ್ಯಯನ' ವಿಧಾನದ ಮೂಲಕ ಕ್ಷೇತ್ರದ ನೈಜ ಚಿತ್ರಣವನ್ನು ಪಡೆಯಲಾಗಿದೆ. ಸಂರಚಿತ ಪ್ರಶ್ನಾವಳಿಗಳನ್ನು ಸಿದ್ಧಪಡಿಸಿಕೊಂಡು ನೀ.ಬ.ಸ. ಸಂಘಗಳ ವಿವಿಧ ಪದಾಧಿಕಾರಿಗಳಿಂದ ಅವಶ್ಯ ಮಾಹಿತಿ ಪಡೆಯಲಾಗಿದೆ. ಕ್ಷೇತ್ರವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಮತ್ತು ಪ್ರಶ್ನಾವಳಿ ಹಾಗೂ ಸಂದರ್ಶನ ಅನುಬಂಧಗಳಲ್ಲಿ ಕೇಳಬೇಕಾದ ಸಂಗತಿಗಳ ಬಗ್ಗೆ ತಿಳಿದುಕೊಳ್ಳಲು ಮಾದರಿ ಪ್ರಶ್ನಾವಳಿ ಮತ್ತು ಸಂದರ್ಶನ ಅನುಬಂಧಗಳನ್ನು ಪೈಲಟ್ ಸ್ಟಡಿಯ ಮೂಲಕ ಮೌಲೀಕರಿಸಿಕೊಳ್ಳಲಾಯಿತು. ಸಂದರ್ಶನ ಅನುಬಂಧದಲ್ಲಿ ನೀರಾವರಿ ನಿರ್ವಹಣೆ ನೀ.ಬ.ಸ. ಸಂಘ ಸ್ಥಾಪನೆಯ ಪೂರ್ವದಲ್ಲಿ ಹೇಗಿತ್ತು ಮತ್ತು ಸ್ಥಾಪನೆಯ ನಂತರ ಹೇಗಾಗಿದೆ ಎಂಬ ಬಗ್ಗೆ, ವಿವಿಧ ಜನಸಮೂಹ ಸಹಭಾಗಿತ್ವದಲ್ಲಿ ಹೇಗೆ ಪ್ರತಿಕ್ರಿಯಿಸುತ್ತದೆ. ರೈತರೇ ಸ್ವಯಂ ಪ್ರೇರಣೆಯಿಂದ ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆಯೇ ಇತ್ಯಾದಿ ಅಂಶಗಳನ್ನು ಕೇಳಲಾಗಿದೆ. ಅಧ್ಯಯನ ಕ್ಷೇತ್ರದ ಗ್ರಾಮಗಳ ಸಾಮಾಜಿಕ ಸಂಗತಿಗಳನ್ನು ತಿಳಿದುಕೊಳ್ಳಲು ಸಹಭಾಗಿತ್ವ ಗ್ರಾಮೀಣ ಸಮೀಕ್ಷೆಯನ್ನು ನಡೆಸಲಾಗಿದೆ.

ಪ್ರಶ್ನಾವಳಿಗಳು 'ಸಂರಚಿತ'ವಾಗಿದ್ದು, ಹಲವಾರು ಸೂಚಿಗಳ ಆಧಾರದ ಮೇಲೆ ರೂಪಿಸಲಾಗಿದೆ. ಪ್ರಥಮವಾಗಿ ಸಂಘದ ಸಮಗ್ರ ಅಂಕಿ-ಅಂಶಗಳ ವಿವರಣೆ, ನಂತರ ಸಂಘದ ಪದಾಧಿಕಾರಿಗಳ ಮಾಹಿತಿ, ಸಂಘದ ಕಾರ್ಯ ನಿರ್ವಹಣಾ ಮಾಹಿತಿ, ಸಹಭಾಗಿತ್ವದ ಮಾಹಿತಿ, ನೀರಿನ ಹಂಚಿಕೆಯಲ್ಲಿನ ಸಮಸ್ಯೆಗಳು, ನೀರುದರ ವಸೂಲಾತಿಯಲ್ಲಿನ ಸಮಸ್ಯೆಗಳು, ಪದಾಧಿಕಾರಿಗಳು ಹೊಂದಿರುವ ಸಮಾಜೋ ಆರ್ಥಿಕ ಸ್ಥಾನಮಾನಗಳ ಮಾಹಿತಿ, ವಿವಾದಗಳ ಇತ್ಯರ್ಥ. ಲೆಕ್ಕಪತ್ರಗಳ ನಿರ್ವಹಣಾ ಕುಶಲತೆ, ಪದಾಧಿಕಾರಿಗಳ ಆಯ್ಕೆಯ ವಿಧಾನ, ಸರ್ವ ಸದಸ್ಯರ ಸಭೆ ಮತ್ತು ಆಡಳಿತ ಮಂಡಳಿಗಳ ನಡಾವಳಿಗಳ ಬಗ್ಗೆ ವರ್ಗೀಕೃತ ಪ್ರಶ್ನಾವಳಿಗಳನ್ನು ತಯಾರಿಸಿ ಮಾಹಿತಿ ಪಡೆಯಲಾಗಿದೆ.

## ೧.೫. ಅಧ್ಯಾಯಗಳ ವಿನ್ಯಾಸ

ಪ್ರಸ್ತುತ ಮಹಾಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳಿದ್ದು, ಪ್ರಥಮ ಅಧ್ಯಾಯದಲ್ಲಿ ಅಧ್ಯಯನ ವಿಷಯದ ಪ್ರಸ್ತಾವನೆ, ವಿಷಯದ ಸಮಸ್ಯೀಕರಣ, ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಪ್ರಾಮುಖ್ಯತೆ ಮತ್ತು ಅಧ್ಯಯನದ ಮಿತಿಗಳನ್ನು ವಿವರಿಸಿ, ಅಧ್ಯಯನದ ವಿಧಾನವನ್ನು ಚರ್ಚಿಸಲಾಗಿದೆ.

ಸಹಭಾಗಿತ್ವ ಅಭಿವೃದ್ಧಿಯ ಸೈದ್ಧಾಂತಿಕ ಚೌಕಟ್ಟನ್ನು ಎರಡನೆಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಇಲ್ಲಿಯತನಕ ಸಹಭಾಗಿತ್ವ ನೀರಾವರಿ ನಿರ್ವಹಣೆಗೆ ಸಂಬಂಧಿಸಿದ ವಿವಿಧ ರೀತಿಯ ಅಧ್ಯಯನ ಗಳನ್ನು ಮೂರನೆಯ ಅಧ್ಯಾಯದಲ್ಲಿ ಸಮೀಕ್ಷೆ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅಧ್ಯಯನದ ಕ್ಷೇತ್ರವನ್ನು ಕುರಿತು ಕೋಷ್ಟಕಗಳೊಂದಿಗೆ ವಿವರವಾದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾರ್ಯನಿರ್ವಹಣೆಯನ್ನು ಐದನೆಯ ಅಧ್ಯಾಯದಲ್ಲಿ ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ.

ಅಧ್ಯಯನದ ಕ್ಷೇತ್ರದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂದರ್ಭದಲ್ಲಿ ಅಧ್ಯಯನಕ್ಕೆ ಆಯ್ದ ನೀರು ಬಳಕೆದಾರರ ಸಹಕಾರ ಸಂಘಗಳು ಸಹಭಾಗಿತ್ವ ತತ್ವವನ್ನು ಆಧರಿಸಿ ನೀರಾವರಿ ನಿರ್ವಹಣೆಯನ್ನು ಎಷ್ಟರಮಟ್ಟಿಗೆ ಸಫಲಗೊಳಿಸಿವೆ ಎಂಬುದನ್ನು ಆರನೆಯ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಅಧ್ಯಯನ ಕ್ಷೇತ್ರದ ಆಯ್ದ ನೀರು ಬಳಕೆದಾರರ ಸಂಘಗಳ ಕಾರ್ಯನಿರ್ವಹಣೆಯನ್ನು ಕೂಲಂಕುಶವಾಗಿ ವಿಶ್ಲೇಷಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಅಧ್ಯಯನ ಸಾರಾಂಶ ಮತ್ತು ಮುಖ್ಯತಥ್ಯಗಳನ್ನು, ಎರಡನೆಯ ಭಾಗದಲ್ಲಿ ಪ್ರಮುಖ ಶಿಫಾರಸ್ಸುಗಳು ಹಾಗೂ ಈ ವಿಷಯಕ್ಕೆ ಸಂಬಂಧಿಸಿದಂತೆ ಭವಿಷ್ಯದಲ್ಲಿ ಕೈಗೊಳ್ಳಬಹುದಾದ ಅಧ್ಯಯನದ ಹೊಸ ಸಾಧ್ಯತೆಗಳನ್ನು ವಿವರಿಸಲಾಗಿದೆ.

❒❒

## ಅಧ್ಯಾಯ ಎರಡು

# ಸಹಭಾಗಿತ್ವ ಪರಿಕಲ್ಪನೆಯ ಸೈದ್ಧಾಂತಿಕ ನೆಲೆ

# ಅಧ್ಯಾಯ ೨

# ಸಹಭಾಗಿತ್ವ ಪರಿಕಲ್ಪನೆಯ ಸೈದ್ಧಾಂತಿಕ ನೆಲೆ

## ಪ್ರಸ್ತಾವನೆ

ಆರಂಭದಲ್ಲಿ 'ಆರ್ಥಿಕ ಅಭಿವೃದ್ಧಿ' ಎನ್ನುವುದು ಬಂಡವಾಳದ ಹೂಡಿಕೆಯ ಮೂಲಕ ವರಮಾನ ವನ್ನು ಅಧಿಕಗೊಳಿಸುವ ಪ್ರಕ್ರಿಯೆಗೆ ಮಾತ್ರ ಸೀಮಿತವಾಗಿತ್ತು. ಈ ಕಾರಣದಿಂದ "ಆರ್ಥಿಕ ಬೆಳವಣಿಗೆ" ಎಂಬ ಪದ ಅಭಿವೃದ್ಧಿ ಚಿಂತನೆಯಲ್ಲಿ ಹೆಚ್ಚಾಗಿ ಬಳಕೆಯಲ್ಲಿತ್ತು. ರಾಷ್ಟ್ರಗಳ ಮುಖ್ಯ ಉದ್ದೇಶ ಸಂಪತ್ತು ಗಳಿಸುವುದಾಗಿತ್ತು. ಕ್ರಮೇಣ ಅದು ಕೈಗಾರಿಕೀಕರಣದ ಮೂಲಕ ಆಧುನಿಕತೆಯತ್ತ ಹೆಚ್ಚಿನ ಒಲವು ತೋರಿತು. ಅಭಿವೃದ್ಧಿಯು ನಿಸರ್ಗದತ್ತ ಸಂಪನ್ಮೂಲಗಳನ್ನು ಅಧಿಕವಾಗಿ ಶೋಷಣೆ ಮಾಡಿ ಆ ಮೂಲಕ ಉತ್ಪಾದನೆ ಮತ್ತು ವರಮಾನವನ್ನು ಅಧಿಕಗೊಳಿಸುವ ಪ್ರಕ್ರಿಯೆಯಾಗಿ ಬದಲಾಯಿತು. ಹೀಗಾಗಿ ಅಭಿವೃದ್ಧಿಯು ಜಾಗತೀಕರಣದ ಹಿನ್ನೆಲೆಯಲ್ಲಿ ತನ್ನ ನೆಲೆಯನ್ನು ಕಂಡುಕೊಂಡಿತು. ಇಂತಹ ಕಾರಣದಿಂದ ಬದಲಾದ ಅಭಿವೃದ್ಧಿ ಪಥ ಪರಸ್ಪರ ವಿರುದ್ಧ ಸನ್ನಿವೇಶಗಳನ್ನು ಸೃಷ್ಟಿಸಿ ಜಾಗತೀಕರಣಕ್ಕೆ ವ್ಯತಿರಿಕ್ತವಾಗಿ ದೇಶೀತೆಯ ಮೂಲಕ ತನ್ನ ಅಸ್ತಿತ್ವವನ್ನು ಸ್ಥಾಪಿಸುವ ಆಲೋಚನಾ ಪ್ರಕ್ರಿಯೆಗಳು ಮುಂದುವರಿಯುತ್ತಿವೆ. ಹೀಗೆ ಅಭಿವೃದ್ಧಿಯು ವಿಭಿನ್ನ ಪಲ್ಲಟಗಳಿಗೆ ಸಿಲುಕಿ ಒಂದು ವಾದಕ್ಕೆ ಮತ್ತೊಂದು ಪ್ರತಿವಾದ ಹುಟ್ಟಿಕೊಂಡು ಸ್ಥಿತ್ಯಂತರದೊಂದಿಗೆ ಮುನ್ನಡೆ ಪಡೆದಿದೆ. ಇಂದು ಸಮುದಾಯದ ಸಹಭಾಗಿತ್ವ ಮತ್ತು ಆಧ್ಯಾತ್ಮಿಕತೆಯೂ ಅಭಿವೃದ್ಧಿಯ ನೆಲೆಗಳಾಗುವ ಹಂತವನ್ನು ತಲುಪಿದೆ.

ಅಭಿವೃದ್ಧಿ, ಸಹಭಾಗಿತ್ವ, ತಳಮಟ್ಟದ ಯೋಜನೆಗಳು ಇಂದು ಹೆಚ್ಚು ಚರ್ಚಿತವಾಗುತ್ತಿರುವ ಸಂಗತಿಗಳಾಗಿವೆ. 'ಅಭಿವೃದ್ಧಿ'ಯ ಪರಿಕಲ್ಪನೆಯು ಇತ್ತೀಚಿನವರೆಗೂ ಕೇವಲ ವರಮಾನ ಕೇಂದ್ರೀತ ಅಂಶಗಳಿಗೆ ಮಾತ್ರ ಸೀಮಿತವಾಗಿತ್ತು. ಆದರೆ ೭೦ರ ದಶಕದ ನಂತರದಲ್ಲಿ ಅಭಿವೃದ್ಧಿಯ ಪರಿಕಲ್ಪನೆಯಲ್ಲಿ ಕೆಲವು ಮೂಲಭೂತ ಬದಲಾವಣೆಗಳು ಕಂಡುಬಂದವು. ಅಭಿವೃದ್ಧಿಯೆಂಬುದು ಕೇವಲ ವರಮಾನವಲ್ಲ. ಅಭಿವೃದ್ಧಿ ಎಂಬುದು ಜನಕೇಂದ್ರೀತವಾಗಿರಬೇಕು, ಅಭಿವೃದ್ಧಿ ಮಾದರಿಗಳು, ಯೋಜನೆಗಳು ಜನರಿಂದಲೇ ರೂಪುಗೊಳ್ಳಬೇಕು ಎಂಬ ವಾದಗಳಿಗೆ ಪುಷ್ಠಿ ದೊರೆಯಲಾರಂಭಿಸಿದವು. ಇದರ ಮುಂದುವರಿದ ಭಾಗವಾಗಿಯೇ 'ಅಭಿವೃದ್ಧಿಯಲ್ಲಿ ಜನರು ಪಾಲ್ಗೊಳ್ಳುವ', 'ಸಹಭಾಗಿತ್ವ' ಪರಿಕಲ್ಪನೆಗಳು ಅಸ್ತಿತ್ವದಲ್ಲಿ ಬಂದವು.

ಉತ್ಪಾದಕ ಚಟುವಟಿಕೆಗಳನ್ನು ಹೆಚ್ಚಿಸಬಹುದೆಂಬುದನ್ನು ಮನಗಾಣಲಾಯಿತು. ಅಂದರೆ ಸಮಾಜದ ಎಲ್ಲ ವರ್ಗಗಳ ಅಭಿವೃದ್ಧಿ ಈ ಮಾದರಿಯ ಮೂಲಕ ಸಾಧ್ಯವಿದೆ ಎನ್ನುವುದು ಇಲ್ಲಿ ಮುಖ್ಯವಾದುದಾಗಿದೆ.

ಈ ಮೇಲಿನ ಎಲ್ಲ ಅಭಿವೃದ್ಧಿ ಮಾದರಿಗಳು ಅಂತಿಮವಾಗಿ ಸ್ವಯಂಚಾಲಿತ ತಂತ್ರಕ್ಕೆ ಕಟ್ಟುಬಿದ್ದವು. ಅಂದರೆ ಆರ್ಥಿಕತೆಯು ತನ್ನಷ್ಟಕ್ಕೆ ತಾನೇ ಸಮತೋಲನ ಸ್ಥಿತಿಯನ್ನು ತಂದುಕೊಳ್ಳುವ ಸಾಮರ್ಥ್ಯವನ್ನು ಪಡೆದಿರುತ್ತವೆ. ಇತರ ಎಲ್ಲ ಸ್ಥಿತಿಗಳು ಯಥಾಸ್ಥಿತಿಯಲ್ಲಿದ್ದಾಗ ಆರ್ಥಿಕತೆ ತನಗೆ ತಾನೆ ಸಮತೋಲನಕ್ಕೆ ಬರುತ್ತದೆ ಎನ್ನುವ ತಟಸ್ಥ ವಾದಕ್ಕೆ ಶರಣಾಗಿತ್ತು.

ಮಹಾಆರ್ಥಿಕ ಮುಗ್ಗಟ್ಟಿನ ಸಂದರ್ಭ ಈ ಸ್ವಯಂಚಾಲಿತ ಆರ್ಥಿಕ ಚಟುವಟಿಕೆಗಳು ಪರಿಸ್ಥಿತಿಯನ್ನು ನಿಭಾಯಿಸುವಲ್ಲಿ ವಿಫಲವಾದುದರಿಂದ ಕೇನ್ಸ್‌ರವರ ಸರಕಾರದ ಮಧ್ಯಪ್ರವೇಶ ಮಾತ್ರ ಮುಗ್ಗಟ್ಟನ್ನು ಪರಿಹರಿಸಬಲ್ಲದೆಂಬ ಸೂತ್ರ ಫಲ ನೀಡಿತ್ತು. ಆದುದರಿಂದ ಅಂದಿನಿಂದ ಪ್ರಭುತ್ವಗಳು ಆರ್ಥಿಕ ಚಟುವಟಿಕೆಗಳಲ್ಲಿ ಪ್ರಧಾನ ಪಾತ್ರವಹಿಸತೊಡಗಿವೆ. ಈ ಹೀಗೆ ಒಂದು ಕಡೆ ಮಾರಕಟ್ಟೆ ಮತ್ತೊಂದು ಕಡೆ ಪ್ರಭುತ್ವ ಆರ್ಥಿಕ ಚಟುವಟಿಕೆಗಳನ್ನು ನಿಯಂತ್ರಿಸಿ ನಿರ್ವಹಿಸತೊಡಗಿದವು. ಬಂಡವಾಳ ಶಾಹಿ ಅರ್ಥವ್ಯವಸ್ಥೆಗಳಲ್ಲಿ ಮಾರುಕಟ್ಟೆಯಲ್ಲಿನ ಬೇಡಿಕೆ ಪೂರೈಕೆಗಳ ವರ್ತನೆಗಳು ಪ್ರಾದೇಶಿಕ ಅಸಮಾನತೆ ಯನ್ನು ತೀವ್ರಗೊಳಿಸುತ್ತವೆ ಎನ್ನುವ ವಾದವನ್ನು ನೋಬಲ್ ಅರ್ಥಶಾಸ್ತ್ರ ಗುನ್ನಾರ್ ಮಿರ್ಡಾಲ್ ತನ್ನ ಕೃತಿ ಏಷಿಯನ್ ಡ್ರಾಮದಲ್ಲಿ ಪ್ರತಿಪಾದಿಸಿದನು. ಮಿರ್ಡಾಲ್ ಪ್ರಕಾರ "ಬದುಕಿನ ಎಲ್ಲ ಸಮಸ್ಯೆಗಳು ಸಂಕೀರ್ಣವಾದವು. ಸಾಂಪ್ರದಾಯಿಕವಾಗಿ ಬೆಳೆದುಕೊಂಡು ಬಂದಿರುವ ಜ್ಞಾನಶಿಸ್ತುಗಳ ಚೌಕಟ್ಟಿಗೆ ಬಡತನ, ಹಸಿವು, ನಿರುದ್ಯೋಗ ಮುಂತಾದ ಸಮಸ್ಯೆಗಳನ್ನು ಬಂಧಿಸಿ ಇದು ಆರ್ಥಿಕ ಸಮಸ್ಯೆ. ಇದು ಸಾಮಾಜಿಕ ಸಮಸ್ಯೆ, ರಾಜಕೀಯ, ಮಾನಸಿಕ ಎಂದು ನಿರ್ವಚಿಸುವುದು ಸರಿಯಲ್ಲ" ಎಂದು ತಮ್ಮ ವಾದವನ್ನು ಮಂಡಿಸಿದರು (ಗುನ್ನಾರ್ ಮಿರ್ಡಾಲ್ - ೧೯೬೮).

ಅಂದರೆ ಅಭಿವೃದ್ಧಿಯ ಮೇಲೆ ಆರ್ಥಿಕೇತರ ಸಂಗತಿಗಳು ಪ್ರಭಾವ ಬೀರುತ್ತವೆ. ಅಭಿವೃದ್ಧಿಶೀಲ ದೇಶಗಳಲ್ಲಿ ಆರ್ಥಿಕೇತರ ಸಂಗತಿಗಳೇ ಜನರ ಬದುಕಿನಲ್ಲಿ ಪ್ರಮುಖ ಸ್ಥಾನ ಹೊಂದಿರುತ್ತವೆ. ಜನರ ದುಡಿಮೆ, ಜೀವನದ ಧೋರಣೆ, ಅಧಿಕಾರ, ನೌಕರಶಾಹಿ ಕುಲಸಂಬಂಧಿ ಸಂಗತಿಗಳು, ಸಾಮಾಜಿಕ ವ್ಯವಸ್ಥೆ, ನ್ಯಾಯ ವ್ಯವಸ್ಥೆ, ಭೂಮಾಲೀಕತ್ವ, ಮೌಲ್ಯ ವ್ಯವಸ್ಥೆ ಅಭಿವೃದ್ಧಿಯನ್ನು ನಿರ್ಧರಿಸುವ ಮಾನದಂಡ ಗಳಾಗಿರುತ್ತವೆ ಎನ್ನುವುದನ್ನು ಮಿರ್ಡಾಲ್ ತನ್ನ ಪ್ರಮೇಯದಲ್ಲಿ ಪ್ರತಿಬಿಂಬಿಸಿದರು.

ಮೈಕೆಲ್ ಟೊಡೊರೋ ಅಭಿಪ್ರಾಯದಲ್ಲಿ "ಅಭಿವೃದ್ಧಿಯನ್ನು ಸಾಮಾಜಿಕ ರಚನೆಗಳಲ್ಲಿ, ಜನರ ವರ್ತನೆಗಳಲ್ಲಿ ಮತ್ತು ಸಂಘ ಸಂಸ್ಥೆಗಳ ಬೃಹತ್ ಬದಲಾವಣೆಗಳು ಮತ್ತು ಆರ್ಥಿಕ ಬೆಳವಣಿಗೆಯ ವೇಗೋತ್ಕರ್ಷ, ಅಸಮಾನತೆಯ ಕಡಿತ ಮತ್ತು ಬಡತನದ ನಿವಾರಣೆಗಳನ್ನು ಒಳಗೊಂಡಿರುವ ಬಹು ಆಯಾಮಗಳ ಪ್ರಕ್ರಿಯೆ ಎಂದು ಭಾವಿಸಬೇಕು" (ಮೈಕೆಲ್ ಪಿ. ಟೊಡೊರೋ-೧೯೮೫). ಹೀಗೆ ಅಭಿವೃದ್ಧಿ

ಎನ್ನುವ ಪರಿಕಲ್ಪನೆ ಕಾಲಕ್ರಮೇಣ ಆರ್ಥಿಕ ಪರಿಧಿಯಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳತ್ತ ಹೊರಳಿತು.

ಹಿಂದಿನ ಅಭಿಜಾತ ಬೆಳವಣಿಗೆ ಅಥವಾ ಅಭಿವೃದ್ಧಿ ಎಂಬುದು ಬಂಡವಾಳ ಸಂಚಯನ; ಬದಲಾವಣೆ ಪ್ರಗತಿ ಎನ್ನುವುದರಲ್ಲಿಯೇ ದಶಕಗಳನ್ನೇ ಕಳೆಯಿತು. ಅಭಿವೃದ್ಧಿ ಎನ್ನುವುದು ಮಾರುಕಟ್ಟೆಯ ತಂತ್ರಗಳನ್ನು ಬಳಸಿಕೊಂಡು ಸಮಾಜದಲ್ಲಿ ಹಲವಾರು ಜನರನ್ನು ದೂರವಿಟ್ಟಿತು ಮತ್ತು ಹೀಗೆ ಹೊರದೂಡಲ್ಪಟ್ಟವರಿಗೆ ಯಾವುದೇ ಪರ್ಯಾಯವನ್ನು ಕಲ್ಪಿಸಲಿಲ್ಲ. "ತಜ್ಞರೆನಿಸಿಕೊಂಡವರಿಗೆ ಅಭಿವೃದ್ಧಿ ಯೋಜನೆಗಳಲ್ಲಿ ಭಾಗವಹಿಸುವವರ ಬದುಕು, ಸಂಸ್ಕೃತಿ, ಜೀವನ ವಿಧಿ-ವಿಧಾನಗಳ ಪರಿಚಯವೇ ಇಲ್ಲದ್ದರಿಂದ ಯೋಜನೆಗಳು ವಿಫಲವಾದವು" (ಚೇಂಬರ್ಸ್ .ಆರ್-೧೯೮೩). ಅಂದರೆ ಅಭಿವೃದ್ಧಿ ಮಾಡುವವರು ಮತ್ತು ಅಭಿವೃದ್ಧಿಗೆ ಒಳಗಾಗುವವರ ನಡುವೆ ಅಂತಹ ಅನುಸಂಧಾನಾತ್ಮಕ, ಸಾವಯವ ಸಂಬಂಧವಿಲ್ಲದ ಕುರಿತು ಅನೇಕ ಅಧ್ಯಯನಗಳು ತಿಳಿಸುತ್ತವೆ. ಇದರೊಂದಿಗೆ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅನುಷ್ಠಾನಗೊಳ್ಳುತ್ತಿರುವ ಅಭಿವೃದ್ಧಿ ಯೋಜನೆಗಳು ಈಗಾಗಲೇ ಅಭಿವೃದ್ಧಿಗೊಂಡ ರಾಷ್ಟ್ರಗಳಲ್ಲಿನ ಅಭಿವೃದ್ಧಿ ಮಾದರಿಗಳೇ ಆಗಿದ್ದು ಸಮಸ್ಯೆಗೆ ಕಾರಣವಾಯಿತು.

"ಹೊರದೇಶಗಳಿಂದ ಬಂದ ಯೋಜನೆಗಳನ್ನು ಸ್ಥಳೀಯ ಅಗತ್ಯಗಳಿಗೆ ಮತ್ತು ಪರಿಸರಕ್ಕೆ ಹೊಂದಿಕೊಳ್ಳುವಂತೆ ಪರಿವರ್ತಿಸಿ ಜಾರಿಗೊಳಿಸದ ಕಾರಣ ಬಹುತೇಕ ಯೋಜನೆಗಳು ವೈಫಲ್ಯ ಕಂಡವು" (ವಂದನಾಶಿವ-೧೯೮೮). ಪಾಶ್ಚಿಮಾತ್ಯ ದೇಶಗಳಿಗೆ ಅನ್ವಯವಾಗುವ ಅಭಿವೃದ್ಧಿ ಮಾದರಿಗಳನ್ನು ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಯಥಾವತ್ತಾಗಿ ಅಳವಡಿಸಿಕೊಂಡ ಕಾರಣ ಅವುಗಳು ನಮ್ಮ ಸಾಮಾಜಿಕ, ಸಾಂಸ್ಕೃತಿಕ ಪರಿಸ್ಥಿತಿಗಳಿಗೆ ಹೊಂದಿಕೊಳ್ಳದೇ ವಿಫಲವಾಗಿವೆ.

೧೯೯೫ರಲ್ಲಿ ಕೋಪನ್‌ಹೇಗ್‌ನಲ್ಲಿ ಸಾಮಾಜಿಕ ಅಭಿವೃದ್ಧಿ ಮೇಲೆ ನಡೆದ ವಿಶ್ವಸಮ್ಮೇಳನದಲ್ಲಿ ಬೆಳವಣಿಗೆ ಮತ್ತು ಸಮಾನತೆಯ ಸಂಬಂಧದ ಬಗ್ಗೆ ಚರ್ಚೆ ನಡೆಯಿತು. "ಆರ್ಥಿಕ ಬೆಳವಣಿಗೆ ಮತ್ತು ಸಾಮಾಜಿಕ ಅಭಿವೃದ್ಧಿ ಒಂದನ್ನೊಂದು ಪ್ರತಿರೋಧಿಸುತ್ತವೆ. ಒಂದು ಸಮಾಜದ ರಚನಾ ವಿನ್ಯಾಸವನ್ನು ಆಧಾರವಾಗಿಟ್ಟುಕೊಳ್ಳದ ಆರ್ಥಿಕ ಮತ್ತು ಹಣಕಾಸಿನ ನೀತಿಗಳು ಪರಿಣಾಮಕಾರಿ ಸಾಮಾಜಿಕ ಪ್ರಗತಿಗೆ ಸಹಕಾರಿಯಾಗಲಾರವು ಎನ್ನುವ ತೀರ್ಮಾನಕ್ಕೆ ಬರಲಾಯಿತು" (ಡೆವಲಪ್‌ಮೆಂಟ್ ಅಂಡ್ ಕೋ-ಆಪರೇಶನ್-೧೯೯೫:೧೨). ಆದರೆ ಬೆಳವಣಿಗೆಯನ್ನು ಸಂಪೂರ್ಣವಾಗಿ ತಿರಸ್ಕರಿಸಲು ಸಾಧ್ಯವಿಲ್ಲ. ಏಕೆಂದರೆ ಬೆಳವಣಿಗೆಯಿಲ್ಲದೆ ಸಮಾನತೆಗಾಗಿ ಒತ್ತಾಯಿಸಲು ಸಾಧ್ಯವಿಲ್ಲ. "ಅಭಿವೃದ್ಧಿ ಎಂಬುದು ಸಮಾನತೆಯಿಂದ ಕೂಡಿದ್ದು, ಸುಸ್ಥಿರತೆ ಮತ್ತು ಸಹಭಾಗಿತ್ವವನ್ನು ಪ್ರತಿನಿಧಿಸುವಂತಿರಬೇಕು. ಈ ಕಾರಣದಿಂದಲೇ ಇಂದು ಬೆಳವಣಿಗೆಗಿಂತ ಸಮಾನತೆ ಹೆಚ್ಚು ಮಹತ್ವ ಪಡೆದುಕೊಳ್ಳುತ್ತಿದೆ" (ಪೀಟರ್‌ಸೇ ಜೆ.-೨೦೦೧).

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಾನತೆ ಸಾಧಿಸಲು ಸಹಭಾಗಿತ್ವ ಮಾದರಿ ಹೆಚ್ಚು ಸೂಕ್ತವೆನ್ನುವ ವಾದಗಳಿಗೆ ಇಂದು ಹೆಚ್ಚಿನ ಪುಷ್ಟಿ ದೊರಕಿದೆ. ಸಾಮಾಜಿಕ ಅಭಿವೃದ್ಧಿ ಸಿದ್ಧಾಂತಗಳು, ಸಾಮಾಜಿಕ ಅಭಿವೃದ್ಧಿ ಸೂಚಿಗಳು ಇಂದು ಯಥೇಚ್ಛವಾಗಿ ಕಂಡುಬರುತ್ತಿವೆ. ಇಂದಿನ ಸಾಮಾಜಿಕ ಚಿಂತಕರ ಪ್ರಕಾರ "ಆರ್ಥಿಕ ಬೆಳವಣಿಗೆಯು ಜೀವನದ ಗುಣಮಟ್ಟವನ್ನು ಹೆಚ್ಚಿಸದೇ ಇರುವ ಸಾಧ್ಯತೆಗಳಿರುತ್ತವೆ. ಆದರೆ ಜೀವನದಲ್ಲಿನ ಗುಣಮಟ್ಟದ ಏರಿಕೆಯು ಆರ್ಥಿಕ ಬೆಳವಣಿಗೆಗೆ ಕಾರಣವಾಗುತ್ತದೆ" (ಪಲ್ಲಿ ಎಂ.ಆರ್.-೧೯೯೪:೬೨).

ಇಂದು ಅಭಿವೃದ್ಧಿ ಚಿಂತನೆಯಲ್ಲಿ ಪ್ರಭುತ್ವ ಮತ್ತು ಮಾರುಕಟ್ಟೆಗಳೊಂದಿಗೆ ಜಾಗತೀಕರಣವೂ ಸಂಯೋಜಿಸಲ್ಪಟ್ಟಿದೆ. ಜಾಗತೀಕರಣದ ಮೂಲಕ ಅಭಿವೃದ್ಧಿ ಎಂಬುದು ಇತ್ತೀಚಿನ ಚಿಂತನೆಗಳಲ್ಲಿ ಒಂದಾಗಿದೆ. ಜಾಗತೀಕರಣ ಎನ್ನುವುದು ಐತಿಹಾಸಿಕ ಪ್ರಕ್ರಿಯೆಯಾಗಿದ್ದು, ಇತ್ತೀಚಿಗೆ ಅದರ ರೂಪ ಮತ್ತು ಸಾಧನಗಳು ಬದಲಾಗಿವೆ. ಈ ಚಿಂತನೆಗಳ ಪ್ರಕಾರ ಅತಿ ಹೆಚ್ಚು ಸರಕಾರದ ಮೇಲಿನ ಅವಲಂಬನೆ ಅಷ್ಟೊಂದು ಸಾಧುವಲ್ಲ. ಸರ್ಕಾರದ ಪಾತ್ರ ಅಲ್ಪವಾಗಿದ್ದು ಅದು ಉತ್ತಮ ಆಡಳಿತ ನಡೆಸುವಂತಿರಬೇಕು. ಜಾಗತೀಕರಣ ಪ್ರಕ್ರಿಯೆಯಲ್ಲಿ ಸರ್ಕಾರದ ಪಾತ್ರ ಕಡಿಮೆಯಾಗುತ್ತಿದ್ದರೂ ಸರ್ಕಾರ ಮಾತ್ರ ಬಲಿಷ್ಠವಾಗಿರಬೇಕು. ಜಾಗತೀಕರಣ, ಖಾಸಗೀಕರಣದ ಪ್ರಕ್ರಿಯೆಯು, ಸಮಾಜದ ಎಲ್ಲ ವರ್ಗದ ಜನರ ಹಿತಾಸಕ್ತಿಗಳನ್ನು ಈಡೇರಿಸುತ್ತದೆ ಎಂದು ಹೇಳಲಿಕ್ಕಾಗದು. "ಜಾಗತೀಕರಣಕ್ಕೆ ವ್ಯಾಪಾರದ/ಲಾಭದ ಉದ್ದೇಶವೇ ಹೆಚ್ಚಾಗಿರುತ್ತದೆ ಹೊರತು, ಸೇವಾ ಮನೋಭಾವವಿರುವುದಿಲ್ಲ" (ಹಟ್ನೆ ಬಿಜಾರ್ನ-೨೦೦೨). ಹೀಗಾಗಿ ಜನರನ್ನು ಅಭಿವೃದ್ಧಿ ಪ್ರಕ್ರಿಯೆಯಿಂದ ಹೊರಗಿಟ್ಟು ಎಲ್ಲವನ್ನು ಖಾಸಗಿ ಸಂಸ್ಥೆಗಳೇ ನಿರ್ವಹಿಸಬಲ್ಲವು ಎನ್ನುವ ಜಾಗತೀಕರಣದ ವಾದ ಏಣಿ-ಶ್ರೇಣಿಗಳಿಂದ ಕೂಡಿದ ಜನತೆಯ ಬೇಕು-ಬೇಡಗಳನ್ನು ಪೂರೈಸಲಾರವು. ಇಡೀ ಜಗತ್ತೇ ಹಳ್ಳಿಯಾಗುತ್ತಿರುವ ಇಂದಿನ ಸ್ಥಿತಿಯಲ್ಲಿ ಎಲ್ಲ ಪ್ರಭುತ್ವಗಳು ಜನರಿಗಾಗಿಯೇ ಯೋಜನೆಗಳನ್ನು ರೂಪಿಸಲಾಗುತ್ತಿದೆ ಎಂದು ಹೇಳುತ್ತವೆ. ಅದು ಘೋಷಣೆಯಾಗಿಯೇ ಉಳಿದುಕೊಂಡಿದೆ. ಏಕೆಂದರೆ "ಪ್ರಭುತ್ವಗಳು ಮೇಲಿನಿಂದ ಕೆಳಗೆ ಹರಿಯುವ ಪ್ರಮೇಯಗಳಿಗೆ ಹೆಚ್ಚಿನ ಒತ್ತನ್ನು ನೀಡುತ್ತಿವೆ. ಇದರಿಂದ ಯೋಜನೆಗಳು ಸಮಾಜದ ಅಂಚಿನ ಜನತೆಯನ್ನು ತಲುಪುವಲ್ಲಿ ವಿಫಲವಾಗಿವೆ" (ಪ್ರದೀಪ್ ನಾರಾಯಣ-೨೦೦೩). ಈ ಟಾಪ್‌ಡೌನ್ ಪ್ರಮೇಯಗಳ ಹಿನ್ನೆಲೆಯಿಂದ ರೂಪಿತವಾದ ಕಾರ್ಯಕ್ರಮಗಳು ಅಭಿವೃದ್ಧಿ ಪ್ರಕ್ರಿಯೆಯಿಂದ ಜನತೆಯನ್ನು ಹೊರಗಿಟ್ಟವು. ಸರ್ಕಾರಗಳು ಜನತೆಯನ್ನು ಒಂದು ಸಾಧನವನ್ನಾಗಿ ಪರಿಗಣಿಸಿದವೇ ಹೊರತು, ಅವರೇ ಅಭಿವೃದ್ಧಿಯ ಅಂತಿಮ ಫಲಾನುಭವಿಗಳು ಎನ್ನುವುದನ್ನು ಮರೆತವು. ಪ್ರಭುತ್ವದ ಯೋಜನೆಗಳು ಅಭಿವೃದ್ಧಿಯ ಸವಲತ್ತುಗಳನ್ನು ಒದಗಿಸುವ ನಿಯೋಗಿಗಳಾದವೇ ಹೊರತು, ಜನರನ್ನು ಒಳಗೊಂಡು ಕಾರ್ಯಕ್ರಮಗಳನ್ನು ರೂಪಿಸಲಿಲ್ಲ. ಜನರನ್ನು ಕೇವಲ ಒಂದು ಸಾಧನವೆಂದು ಪರಿಗಣಿಸಿದ್ದು, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜನತೆ ಪಾಲುಗೊಳ್ಳಲು ಅವಕಾಶ ವಂಚಿತವಾಗುವಂತೆ ಮಾಡಿದ್ದು, ಪ್ರಧಾನಧಾರೆ ಅಭಿವೃದ್ಧಿ ಸಿದ್ಧಾಂತದ ಬಹುಮುಖ್ಯ ನ್ಯೂನತೆ

ಎಂದೇ ಹೇಳಬಹುದು. ಪ್ರಧಾನಧಾರೆ ಅಭಿವೃದ್ಧಿ ಸಿದ್ಧಾಂತಗಳಿಂದ ಪ್ರಚೋದನೆಗೊಂಡ ಕಾರ್ಯಕ್ರಮಗಳ ವಿಫಲತೆಯು ಆಡಳಿತಗಾರರು, ನೀತಿ-ನಿರೂಪಕರುಗಳು ಸ್ಥಳೀಯ ಅವಶ್ಯಕತೆಗಳನ್ನು ಪರಿಗಣಿಸುವಂತೆ ಮಾಡಿದವು. ಸ್ಥಳೀಯ ಅವಶ್ಯಕತೆಗಳನ್ನು ಅರಿಯಬೇಕೆಂಬ ಚಿಂತನೆಯು ಕ್ರಮೇಣವಾಗಿ 'ಸಹಭಾಗಿತ್ವ' ಪರಿಕಲ್ಪನೆಗೆ ಹಾದಿ ಮಾಡಿಕೊಟ್ಟಿತು.

ಸಮುದಾಯವಾದಿಗಳು ಮತ್ತು ಪರಿಸರವಾದಿಗಳು ಜನರ ಸಹಭಾಗಿತ್ವದ ಬಗ್ಗೆ ತಮ್ಮ ವಾದಗಳನ್ನು, ಸಿದ್ಧಾಂತಗಳನ್ನು ಪಾಲುದಾರರ ಸಹಭಾಗಿತ್ವದ ನೆಲೆಯಲ್ಲಿಯೆ ಪ್ರತಿಪಾದಿಸುತ್ತಾ ಬಂದರು. ಹೀಗಿರುವಾಗಲೇ ಪಾಶ್ಚಿಮಾತ್ಯ ದೇಶಗಳಲ್ಲಿ ಪ್ರಜಾಸಮಾಜ ಮತ್ತು ಸಾಮಾಜಿಕ ಬಂಡವಾಳದ ಪರಿಕಲ್ಪನೆಗಳು ಹೆಚ್ಚು ಹೆಚ್ಚು ಪ್ರಚಲಿತವಾಗತೊಡಗಿದವು. "ನಾಗರೀಕ ಸಂಘಟನೆಗಳು ತಮ್ಮ ಅಗತ್ಯಗಳನ್ನು ತಾವೇ ನಿರ್ವಹಿಸಿ ಕೊಳ್ಳುತ್ತೇವೆ ಎಂದು ಪ್ರಭುತ್ವಗಳ ಮೇಲೆ ಒತ್ತಡ ತಂದು ಪ್ರಭುತ್ವ ಮತ್ತು ಮಾರುಕಟ್ಟೆಗಳ ನಿಯಂತ್ರಣ ವನ್ನು ಕಡಿಮೆ ಮಾಡಿಕೊಂಡವು" (ಚಂದ್ರಪೂಜಾರಿ - ೨೦೦೨). ರಾಜ್ಯದ ರಚನಾವ್ಯವಸ್ಥೆ ಜಡವಾಗಿದ್ದಾಗ, ನೌಕರಶಾಹಿತ್ವ ಅತಿಯಾಗಿದ್ದಾಗ, ನಗರೀಕರಣದ ವೈಭವೀಕರಣವಿದ್ದಾಗ ಮತ್ತು ಉತ್ತರದಾಯಿತ್ವ ಇಲ್ಲದಿದ್ದಾಗ, ಪ್ರಜಾಸಮಾಜಗಳು ಸಣ್ಣ ಪ್ರಮಾಣವಿದ್ದು, ಹೆಚ್ಚು ಉತ್ತರದಾಯಿತ್ವವೆಂದೂ, ಸ್ಥಳೀಯವಾಗಿ ಜಾಗೃತವೆಂದೂ ಮತ್ತು ಕಾರ್ಯಸಾಧುವೆಂದೂ ನಂಬಲಾಗಿದೆ.

ಪ್ರಧಾನ ಅಭಿವೃದ್ಧಿಯೊಂದಿಗಿನ ಅತೃಪ್ತಿಯೇ ಜನಕೇಂದ್ರಿತ ಅಭಿವೃದ್ಧಿಗೆ ಅವಕಾಶ ನೀಡಿ ಪರ್ಯಾಯ ಅಭಿವೃದ್ಧಿ ಮಾದರಿಯ ಉಗಮಕ್ಕೆ ಕಾರಣವಾಯಿತು. ಇದು ಸ್ಥಳೀಯ ಅಭಿವೃದ್ಧಿಗೆ ಸಂಬಂಧಿಸಿದಂತೆ ದೃಷ್ಟಿಕೋನವನ್ನು ಹೊಂದಿದ್ದು, ತಳಮಟ್ಟದಲ್ಲಿ ಪರ್ಯಾಯ ಆಚರಣೆಗಳೊಂದಿಗೆ ಅಥವಾ ಪ್ರಧಾನ ಅಭಿವೃದ್ಧಿ ಪ್ರಣಾಳಿಕೆಗೆ ಒಂದು ಸವಾಲಾಗಿ ಮತ್ತು ಜಾಗತೀಕರಣದ ಪರ್ಯಾಯದ ಒಂದು ಭಾಗವಾಗಿ ಅಭಿವೃದ್ಧಿಗೊಂಡಿದೆ. ಅಭಿವೃದ್ಧಿ ಎನ್ನುವುದು ಅಗತ್ಯಗಳನ್ನು ತೃಪ್ತಿಪಡಿಸುವ ಕ್ರಿಯೆಯಾಗಿರಬೇಕು. ವೈವಿಧ್ಯತೆಯಿಂದ ಮತ್ತು ಸ್ವಯಂಪೂರ್ಣತೆಯಿಂದ ಕೂಡಿರಬೇಕು. ಪರಿಸರದೊಂದಿಗೆ ಸಹನೀಯವಾಗಿರಬೇಕು. ಅಭಿವೃದ್ಧಿಯಲ್ಲಿ ಜನಸಮುದಾಯ ಭಾಗವಹಿಸುವಂತಿರಬೇಕು. ಪರ್ಯಾಯ ಅಭಿವೃದ್ಧಿಯನ್ನು ಬಂಡವಾಳಶಾಹಿ ವಿರೋಧಿ, ಹಸಿರು ಚಿಂತನೆ, ಮಹಿಳಾವಾದಿ, ಪರಿಸರವಾದಿ, ಪ್ರಜಾಸತ್ತಾತ್ಮಕ ನವಸಮಾಜವಾದಿ ಆಂದೋಲನಗಳು, ಬುದ್ಧನ ಅರ್ಥಶಾಸ್ತ್ರ, ಸಾಂಸ್ಕೃತಿಕ ವಿಮರ್ಶೆ ಮತ್ತು ಅಭಿವೃದ್ಧಿ ಸಂಕಥನದ ರಾಚನಿಕೋತ್ತರ ವಿಶ್ಲೇಷಣೆ ಎನ್ನಲಾಗಿದೆ (ಪೀಟರ್‌ಸೇ ಜೆ.-೨೦೦೧). ಕೆಲವು ಚಿಂತಕರು ಇದನ್ನು ತೃತೀಯ ಜಗತ್ತಿನ ಜನಪ್ರಿಯವಾದ ಗಾಂಧಿ, ಮಾವೋ ಮತ್ತು ಬುದ್ಧನ ಅರ್ಥಶಾಸ್ತ್ರವೆಂದೂ ಕರೆದಿದ್ದಾರೆ.

ಪರ್ಯಾಯ ಅಭಿವೃದ್ಧಿ ಮಾದರಿಯ ವಿಧಾನವೇ ಸಹಭಾಗಿತ್ವವಾಗಿದೆ. ಸಹಭಾಗಿತ್ವವಾದಿ ಕ್ರಿಯಾ ಸಂಶೋಧನೆ ಪಾರ್ಟಿಸಿಪೇಟರಿ ರೂರಲ್ ಅಪ್ರೈಸಲ್ ಮತ್ತು ರ್‍ಯಾಪಿಡ್ ರೂರಲ್ ಅಪ್ರೈಸಲ್‌ಗಳು ಮೊದಲಾದವು ಸಹಭಾಗಿತ್ವ ಅಭಿವೃದ್ಧಿಯಲ್ಲಿ ಕಂಡುಬರುವ ಅಧ್ಯಯನ ವಿಧಾನಗಳ ತಾಂತ್ರಿಕ ಪರಿಕರಗಳಾಗಿವೆ.

ಈ ಪರ್ಯಾಯ ಅಭಿವೃದ್ಧಿ ಮಾದರಿಯೂ ಟೀಕೆಗಳಿಂದ ಮುಕ್ತವಾಗಿಲ್ಲ. ಕೆಲ ತಜ್ಞರ ಪ್ರಕಾರ ಪರ್ಯಾಯ ಅಭಿವೃದ್ಧಿ ಮಾದರಿಯೂ ಪ್ರಧಾನ ಅಭಿವೃದ್ಧಿ ಮಾದರಿಯ ಒಂದು ಭಾಗವಾಗಿದೆ. ಈ ಪರ್ಯಾಯ ಅಭಿವೃದ್ಧಿಯು ತಿರಸ್ಕೃತಗೊಂಡಿದೆ. ಏಕೆಂದರೆ "ಪರ್ಯಾಯ ಅಭಿವೃದ್ಧಿಯು ವಿಶ್ವದಾದ್ಯಂತ ಪ್ರಧಾನ ಅಭಿವೃದ್ಧಿ ಧಾರೆಯ ಪರಿಭಾವನೆಗಳಾದ ವಿಜ್ಞಾನ, ಉದಾರೀಕರಣ ಮತ್ತು ಅಭಿವೃದ್ಧಿಯ ರೂಪದ ಉತ್ಪನ್ನಗಳನ್ನೇ ಉತ್ಪಾದಿಸಿವೆ" (ನಂದಿ-೧೯೮೯:೨೭೦). "ಸಾಂಸ್ಕೃತಿಕ ಗ್ರಹಿತ ಬಡತನವು ಉಪಕರಣವಾದಿ ಬಡತನವಾಗಿರಬೇಕಾದ ಅಗತ್ಯವಿಲ್ಲ. ಜೀವನಾಧಾರ ಆರ್ಥಿಕತೆಗಳು ಒದಗಿಸುತ್ತಿರುವ ಮೂಲ ಸೌಕರ್ಯಗಳು, ಸೇವೆಗಳು ವಾಸ್ತವವಾಗಿ ದುಸ್ಥಿತಿಯಲ್ಲಿರುವ ಬಡವರಿಗಲ್ಲ. ಆದರೂ ಅಭಿವೃದ್ಧಿಯ ತಾತ್ವಿಕತೆ ಅವರನ್ನು ಮಾರುಕಟ್ಟೆ ಆರ್ಥಿಕತೆಯಲ್ಲಿ ಭಾಗವಹಿಸಿದಂತೆ ಮತ್ತು ಮಾರುಕಟ್ಟೆಯ ಮೂಲಕ ಹಂಚಿಕೆ ಮಾಡಿರುವ ಸರಕುಗಳನ್ನು ಅನುಭೋಗಿಸದಂತೆ ಮಾಡಿದೆ" (ವಂದನಾಶಿವ-೧೯೮೬:೧೦). ಹೀಗೆ ಅಭಿವೃದ್ಧಿ ಮತ್ತು ಸಹಭಾಗಿತ್ವದ ಚರ್ಚೆಗಳು ಹಲವು ಆಯಾಮಗಳನ್ನು ಪಡೆಯುತ್ತ ಬಂದಿದೆ. ಈ ಪರ್ಯಾಯ ತತ್ವಗಳು ಸಮಕಾಲೀನ ಜಗತ್ತಿನೊಂದಿಗೆ ತಳಕು ಹಾಕಿಕೊಂಡಿರುವುದನ್ನು ಮುಖ್ಯವಾಗಿ ಗಮನಿಸಬಹುದು.

## ೨.೨. ಸಹಭಾಗಿತ್ವದ ನಿರ್ವಚನ ಮತ್ತು ಅದರ ಜಾಗತಿಕ ನೆಲೆ

ಸಹಭಾಗಿತ್ವ ಅಭಿವೃದ್ಧಿಗೆ ಒಂದು ಸಾರ್ವತ್ರಿಕ ವ್ಯಾಖ್ಯಾನ ನೀಡುವುದು ಕಷ್ಟಕರ. ಆದರೂ ಹಲವು ತಜ್ಞರು ವ್ಯಾಖ್ಯಾನಿಸಲು ಪ್ರಯತ್ನಿಸಿದ್ದಾರೆ.

ಮೇಯೋ ಮತ್ತು ಕಾರ್ರೈಗ್ ಅಭಿಪ್ರಾಯದಲ್ಲಿ 'ಒಂದು ದೃಷ್ಟಿಯಲ್ಲಿ ಸಹಭಾಗಿತ್ವವು ಔಪಚಾರಿಕ ಅಭಿವೃದ್ಧಿ ಕಾರ್ಯಕ್ರಮಗಳ ದಕ್ಷತೆಯನ್ನು ಹೆಚ್ಚಿಸುವ ಪರಿಕರವಾಗಿದೆ' (ಮೇಯೋ ಮತ್ತು ಕಾರ್ರೈಗ್-೧೯೯೫). ಯಾವುದೇ ಸಂಸ್ಥೆಗಳಲ್ಲಿ ಅಭಿವೃದ್ಧಿಯ ನಿರೀಕ್ಷಿತ ಗುರಿಗಳು ಕಾರ್ಯ ಸಾಧುಗೊಳ್ಳದಿರುವಾಗ, ಅಲ್ಲಿನ ಫಲಾನುಭವಿಗಳನ್ನೆ ಅದರಲ್ಲಿ ಅಂತರ್ಗತಗೊಳಿಸಿದಾಗ ಕಾರ್ಯಕ್ಷಮತೆ ಅಧಿಕವಾಗುತ್ತದೆ.

ಮೋಹನ್ ಮತ್ತು ಸ್ಟೊಕ್ಕೆ ಪ್ರಕಾರ "ಪ್ರಚಲಿತವಾಗಿರುವ ಅಭಿವೃದ್ಧಿ ಪರಿಕಲ್ಪನೆಯೇ ಸಹಭಾಗಿತ್ವ ಅಭಿವೃದ್ಧಿ. ಸಹಭಾಗಿತ್ವ ಅಭಿವೃದ್ಧಿಯು ತಳಮಟ್ಟದಲ್ಲಿ ಬಹುತ್ವದ ಅಭಿವೃದ್ಧಿಯ ಗುರಿಗಳನ್ನು ತಲುಪಲು ಮತ್ತು ತಳಮಟ್ಟದ ಜನಸಮುದಾಯಗಳೇ ಅವರ ಅಗತ್ಯಗಳ ಬಗ್ಗೆ ಸ್ವಯಂ ನಿರ್ಣಯ ಕೈಗೊಳ್ಳುವ ಒಂದು ಕಾರ್ಯ ಪ್ರಕ್ರಿಯೆಯನ್ನು ಸೂಚಿಸುತ್ತದೆ" (ಮೋಹನ್ ಕೆ. ಮತ್ತು ಸ್ಟೊಕ್ಕೆ ಕೆ.-೨೦೦೦).

ಹೀಗೆ "ಸಹಭಾಗಿತ್ವ ಅಭಿವೃದ್ಧಿಯು ಇಂದು ಜನಕೇಂದ್ರಿತ ಯೋಜನಾ ಮಾದರಿಯಾಗಿ ಹೆಚ್ಚು ಪ್ರಸಿದ್ಧಿ ಪಡೆದಿದೆ. ಇದು ಅಭಿವೃದ್ಧಿಯ ಸಿದ್ಧಾಂತ ಮತ್ತು ಪ್ರಾಯೋಗಿಕ ಕಾರ್ಯಾನುಷ್ಠಾನವನ್ನು ಆಳ್ವಿಕೆ ಮಾಡುತ್ತಿದೆ" (ಓಕ್ಲೆ-೧೯೯೧:ಚೇಂಬರ್ಸ್-೧೯೯೪). ಉತ್ತಮ ಆಡಳಿತ ಮತ್ತು ನಾಗರೀಕರ

ಪಾಲ್ಗೊಳ್ಳುವಿಕೆಯು ಇಂದು ಅನಿವಾರ್ಯವಾಗಿ ಅಭಿವೃದ್ಧಿ ಚರ್ಚೆಯ ಒಂದು ಭಾಗವಾಗಿದೆ. ಸಹಭಾಗಿತ್ವ, ಸಬಲೀಕರಣ ಮತ್ತು ಒಳಗೊಳ್ಳುವಿಕೆ ಇವುಗಳು ಅಭಿವೃದ್ಧಿಯ ಆಕರ್ಷಣೀಯ ಪದಗಳಾಗಿವೆ. ಮೂಲಭೂತವಾಗಿ ಈ ಪದಗಳು ಪಾಶ್ಚಿಮಾತ್ಯ ದೇಶಗಳಿಂದ ಆಮದು ಆಗಿ ಎನ್.ಜಿ.ಓ.ಗಳ ಮೂಲಕ ಅಭಿವೃದ್ಧಿಶೀಲ ದೇಶಗಳಲ್ಲಿ ಜಾರಿಗೊಳ್ಳುತ್ತಿವೆ. ಇಂದಿನ ಜನಪ್ರಿಯ ಅಧ್ಯಯನ ವಿಧಾನಗಳು ಸುಸ್ಥಿರ ಅಭಿವೃದ್ಧಿಯನ್ನು ಮುನ್ನಡೆಸುವ ಗುರಿಯಿಂದ 'ಸಹಭಾಗಿತ್ವ'ವನ್ನು ಮುಖ್ಯ ಸಾಧನವನ್ನಾಗಿಸಿಕೊಂಡಿವೆ. ಕನಿಷ್ಟ ಅಭಿವೃದ್ಧಿಗೊಂಡ ರಾಷ್ಟ್ರಗಳಲ್ಲಿ ಸಾಮಾಜಿಕ ಏಳಿಗೆ ಮತ್ತು ಆರ್ಥಿಕತೆಯನ್ನು ವೇಗವರ್ಧಕಗೊಳಿಸಲು 'ಸಹಭಾಗಿತ್ವ ಗ್ರಾಮೀಣ ಅಭಿವೃದ್ಧಿ' ಎಂಬ ಕ್ರಿಯಾ ಮಾದರಿಯನ್ನು ಶಿಕ್ಷಣ, ಆರೋಗ್ಯ, ಪರಿಸರ ಸಂರಕ್ಷಣೆ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸುಸ್ಥಿರತೆ ಇತ್ಯಾದಿ ಕ್ಷೇತ್ರಗಳಲ್ಲಿ ಯಥೇಚ್ಛವಾಗಿ ಬಳಸಲಾಗುತ್ತಿದೆ. "ಸಮುದಾಯದ ಪಾಲ್ಗೊಳ್ಳುವಿಕೆಯು ಇಂದು ಏಷ್ಯಾ ಮತ್ತು ಕೆಲವು ದಕ್ಷಿಣ ಆಫ್ರಿಕಾ ದೇಶಗಳಲ್ಲಿ 'ಅಭಿವೃದ್ಧಿಯ ತಾರಕಮಂತ್ರ'ವಾಗಿ ನಿರೀಕ್ಷಿತ ಫಲಿತಗಳನ್ನು ನೀಡುತ್ತಿದೆ" (ಮುರಳೀಧರನ್ ಕೆ.-೨೦೦೫).

ಅನೇಕ ಸಂಘಸಂಸ್ಥೆಗಳು ಸಹಭಾಗಿತ್ವ ಗ್ರಾಮೀಣ ಅಭಿವೃದ್ಧಿಯ ತತ್ವ ಪರಿಕಲ್ಪನೆಯನ್ನು ಬಹುಮುಖಿ ಮಾರ್ಗಗಳಲ್ಲಿ, ನಾನಾ ಕ್ಷೇತ್ರಗಳಲ್ಲಿ ಅಭಿವೃದ್ಧಿ ಆರಂಭ ಮತ್ತು ಅಂತಿಮ ಗುರಿಯನ್ನಾಗಿ ಉಪಯೋಗಿಸಿಕೊಂಡಿವೆ. ಎರಡು ದಶಕಗಳಿಂದ ಅಭಿವೃದ್ಧಿ ಪರಿಕಲ್ಪನೆಯ ಸಾಹಿತ್ಯದಲ್ಲಿ ಈ ತತ್ವವನ್ನು ಬೆಂಬಲಿಸಲಾಗಿದೆ. "ಸಹಭಾಗಿತ್ವದ ಚಲಕವಿಲ್ಲದೆ ಇಂದು ಅಭಿವೃದ್ಧಿಯ ಕ್ರಿಯಾ ಮಾದರಿಯನ್ನು ಹುಡುಕುವುದು ಕಷ್ಟಸಾಧ್ಯ" (ಬಾಸ್ಟ್ಯನ್-೧೯೯೭:ಸ್ಪಿರಟ್-೧೯೯೭). ಇಂದು ದಕ್ಷಿಣ ಕೋರಿಯಾ, ಸಿಂಗಾಪುರ, ಕ್ಯೂಬಾ, ಶ್ರೀಲಂಕಾ, ಕೋಷ್ಟಾರಿಕಾ, ಚೀನಾ ಮತ್ತು ಭಾರತದಲ್ಲಿ ಈ ದೃಷ್ಟಿಕೋನದ ಕಾರ್ಯಾನುಷ್ಠಾನಕ್ಕೆ ಸಹಭಾಗಿತ್ವದ ಕಾರ್ಯತಂತ್ರಗಳು ಸಾಕ್ಷಿಯಾಗಿದೆ. "ಎಲ್ಲಿ ಸ್ವಯಂ ಸಂಘಟನೆ, ಸ್ವಯಂ ಹೊಣೆಗಾರಿಕೆ ಮತ್ತು ಸ್ವಯಂ ಕ್ರಿಯಾತ್ಮಕತೆ ಇರುತ್ತದೆಯೋ ಅದನ್ನು ಆದರ್ಶ ಸಹಭಾಗಿತ್ವ ಎನ್ನಲಾಗಿದೆ" (ಬರ್ಕೀ-೧೯೯೩).

ಸಹಭಾಗಿತ್ವ ಅಭಿವೃದ್ಧಿ ಮಾದರಿಯ ಉಗಮವನ್ನು ೧೯೭೦ರಲ್ಲಿ ಪೌಲೋ ಫೆರಿಕಿಯಂತಹ ಉಗ್ರವಾದಿ ಚಿಂತಕರು ಪ್ರತಿಪಾದಿಸಿದ ಸಹಭಾಗಿತ್ವ ಕ್ರಿಯಾ ಸಂಶೋಧನೆಯೊಂದಿಗೆ ಗುರುತಿಸಿಕೊಳ್ಳಲಾಗುತ್ತದೆ. ಇದೊಂದು ಅಧಿಕೃತ ಮತ್ತು ಔಪಚಾರಿಕ ಸಂಗತಿಯಾಗುತ್ತದೆಯೇ ಹೊರತು ಐತಿಹಾಸಿಕವಾಗಿ ಸಹಭಾಗಿತ್ವ ಪರಿಕಲ್ಪನೆ ಭಾರತದ ಅವಿಭಕ್ತ ಕುಟುಂಬಗಳಲ್ಲಿ ಮತ್ತು ಪ್ರಾಕೃತಿಕ ಸಂಪನ್ಮೂಲ ನಿರ್ವಹಣೆಯಲ್ಲಿ ಇದ್ದುದನ್ನು ಅನೇಕ ಚಿಂತಕರು ತಿಳಿಸುತ್ತಾರೆ. ಸಹಭಾಗಿತ್ವ ಅಭಿವೃದ್ಧಿಯನ್ನು ಬಲವಾಗಿ ಪ್ರತಿಪಾದಿಸುವವರ ಪ್ರಕಾರ, "ಸಾಮಾನ್ಯ ಅಭಿವೃದ್ಧಿ ಎನಿಸಿಕೊಂಡಿದ್ದ ಯೂರೋ ಕೇಂದ್ರಿತ, ಇತ್ಯಾತ್ಮಕವಾದ ಮತ್ತು ಮೇಲಿನಿಂದ ಕೆಳಗೆ ಹರಿಯುವಿಕೆ ವಾದಗಳೆಂಬ ಅಸಬಲೀಕರಣಗಳ ಬದಲೀ

ತತ್ವವೇ ಸಹಭಾಗಿತ್ವ ಅಭಿವೃದ್ಧಿ" (ಚೇಂಬರ್ಸ್ ಆರ್. ೧೯೯೭). ಪಾಶ್ಚಿಮಾತ್ಯ ಸಮಾಜಗಳು ಆಧುನಿಕತೆಯನ್ನು ಸಾಧಿಸಿದ್ದನ್ನೇ ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮ ಅಭಿವೃದ್ಧಿಯೊಂದಿಗೆ ಸಮೀಕರಿಸುವುದರೊಂದಿಗೆ ಅವರ ಯೋಜನೆಗಳನ್ನೆ ನಕಲು ಮಾಡಿದವು. ಅಂದರೆ ಮೇಲ್‌ಸ್ತರದ ತಜ್ಞರು ಪಾಶ್ಚಿಮಾತ್ಯದ ಪ್ರಭಾವದಿಂದ ಜನರನ್ನು ಒಳಗೊಳ್ಳದ ಯೋಜನೆಗಳನ್ನೇ ರೂಪಿಸತೊಡಗಿದರು. ಇದರಿಂದಾಗಿ ತಜ್ಞರಲ್ಲದವರು (ಸ್ಥಳೀಯ ಜನರು) ಮೂಲೆಗುಂಪಾದರು. ಹೀಗೆ ಮೂಲೆಗುಂಪಾದ ಜನರಲ್ಲಿ ಅತೃಪ್ತಿ ಹೆಚ್ಚಿದಂತೆ ಟಾಪ್‌ಡೌನ್ ತತ್ವಕ್ಕೆ ವಿರೋಧ ಕಂಡುಬಂದಿತು. ಜೊತೆ ಜೊತೆಗೆ ಚಿಂತಕರು, ಬುದ್ಧಿಜೀವಿಗಳು ಮುಖ್ಯವಾಗಿ ರಾಬರ್ಟ್ ಚೇಂಬರ್ಸ್‌ನಂತಹವರು ಕೊನೆಯಲ್ಲಿದ್ದವರನ್ನು ಮುಂಚೂಣಿಗೆ ತರುವುದೇ ಗ್ರಾಮೀಣಾಭಿವೃದ್ಧಿ ಸಾಧನೆಯ ಏಕೈಕ ಮಾರ್ಗವೆಂದೂ ವಾದಿಸತೊಡಗಿದರು. ಇದೇ ಸಂದರ್ಭದಲ್ಲಿ ಪ್ರಧಾನಧಾರೆಯ ಸಂಸ್ಥೆ ವಿಶ್ವಬ್ಯಾಂಕ್ ಸಹ ಮೂಲೆಗುಂಪಾದ ಜನಸಮೂಹಗಳ ಅವಶ್ಯಕತೆಗಳು ಪೂರೈಕೆಯಾಗಲು ಸಹಭಾಗಿತ್ವ ಅಭಿವೃದ್ಧಿ ಮಾದರಿಯನ್ನು ಅಳವಡಿಸಿಕೊಳ್ಳಲು ತನ್ನ ಸದಸ್ಯ ರಾಷ್ಟ್ರಗಳಿಗೆ ಸೂಚಿಸಿತು.

ಹೀಗೆ ಸಹಭಾಗಿತ್ವ ಅಭಿವೃದ್ಧಿಯು ನವ ಉದಾರವಾದದ ಪ್ರತಿರೋಧ ಕ್ರಾಂತಿಯು ೧೯೮೦ರಲ್ಲಿ ಹೆಚ್ಚು ಜನಪ್ರಿಯವಾಯಿತು. ಅದು ಸ್ವಸಹಾಯ ಮತ್ತು ವ್ಯಕ್ತಿವಾದ ಸಂಕಥನದಲ್ಲಿ ಹೆಚ್ಚು ಬಲಿಷ್ಠವಾಯಿತು. ವಿಶ್ವಬ್ಯಾಂಕ್ ಇತ್ತೀಚೆಗೆ ಸಹಭಾಗಿತ್ವದ ಮೇಲೆ ಒಂದು ಕಲಿಕಾ ಸಮೂಹವನ್ನು ಸ್ಥಾಪಿಸಿದೆ. "ಸಹಭಾಗಿತ್ವವು ಒಂದು ಸಂಘರ್ಷವಾಗಿದ್ದು ಜನರು ತಮ್ಮ ಅವಕಾಶಗಳನ್ನು ಮತ್ತೆ ಪಡೆದುಕೊಳ್ಳಲು ನಡೆಸುವ ಶಕ್ತಿಯುತ ಹೋರಾಟವಾಗಿದೆ" (ದಿ ಡೆವಲಪ್‌ಮೆಂಟ್ ಡಿಕ್ಸ್‌ನರಿ-೧೯೯೨). ಹೀಗೆ ಸಹಭಾಗಿತ್ವ ಅಭಿವೃದ್ಧಿ ಮಾದರಿಯು ಟಾಪ್‌ಡೌನ್ ಮಾದರಿಗೆ ವ್ಯತಿರಿಕ್ತವಾಗಿ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡಿದೆ.

## ೨.೩. ಸಹಭಾಗಿತ್ವ ನೀರಾವರಿ ನಿರ್ವಹಣೆಯ ಜಾಗತಿಕ ನೋಟ

ಇಂದು ವಿಶ್ವದ ಬಹುತೇಕ ರಾಷ್ಟ್ರಗಳು ವಿವಿಧ ಮಾರ್ಗಗಳಲ್ಲಿ ವೈವಿಧ್ಯಮಯ ರೂಪದ ಸಹಭಾಗಿತ್ವ ನೀರಾವರಿ ನಿರ್ವಹಣೆ ಮಾದರಿಗಳನ್ನು ನೀರಾವರಿ ಕ್ಷೇತ್ರದಲ್ಲಿ ಜಾರಿಗೊಳಿಸಲು ಮುಂದಾಗಿವೆ. ಅನೇಕ ದೇಶಗಳಲ್ಲಿ ಸರ್ಕಾರಿ ಇಲಾಖೆಗಳು ನೀರಾವರಿ ನಿರ್ವಹಣೆಯ ಹೊಣೆ ಮತ್ತು ಹಕ್ಕುಗಳನ್ನು ಖಾಸಗಿ ಅಥವಾ ಸ್ಥಳೀಯ ಜನರಿಗೆ ಇಲ್ಲವೆ ಸಂಘಸಂಸ್ಥೆಗಳಿಗೆ ವರ್ಗಾವಣೆ ಮಾಡುತ್ತಿವೆ. ಉದಾ. ಫಿಲಿಫೈನ್ಸ್, ಇಂಡೋನೇಷ್ಯಾ, ಚೀನಾ ಮತ್ತು ಶ್ರೀಲಂಕಾಗಳಲ್ಲಿ ಈಗಾಗಲೇ ಈ ಪ್ರಕ್ರಿಯೆ ಚಾಲನೆಗೊಂಡಿದ್ದು, ಅನೇಕ ಬದಲಾವಣೆಗಳಾಗಿವೆ. "ಮೆಕ್ಸಿಕೋ - ಕೊಲೊಂಬಿಯಾ, ನ್ಯೂಜಿಲ್ಯಾಂಡ್ ಟರ್ಕಿ ಮೊದಲಾದ ರಾಷ್ಟ್ರಗಳಲ್ಲಿ ನಿರ್ವಹಣೆಯ ಹೊಣೆಗಾರಿಕೆಯನ್ನು ಬಳಕೆದಾರರಿಗೆ ವರ್ಗಾಯಿಸಲಾಗಿದೆ" (ಬ್ರೆವರ್-೧೯೯೯). ವಿಶ್ವಬ್ಯಾಂಕಿನ ಪ್ರಕಾರ ಸಹಭಾಗಿತ್ವ ನೀರಾವರಿ ನಿರ್ವಹಣೆಯು ಬಳಕೆದಾರರು ನೀರಾವರಿ ನಿರ್ವಹಣೆಯ ಎಲ್ಲ ಕಾರ್ಯಗಳಲ್ಲಿ ಭಾಗವಹಿಸುವಿಕೆಗೆ ಸಂಬಂಧಿಸಿದೆ. ಆರಂಭಿಕ ಯೋಜನೆ ರೂಪಿಸುವುದರಿಂದ ಮೊದಲುಗೊಂಡು, ಯೋಜನೆಗಳ ವಿನ್ಯಾಸ ಉತ್ತಮಪಡಿಸುವ ಕಾರ್ಯಗಳು, ನಿರ್ಮಾಣ ಕಾಮಗಾರಿ,

ಮೇಲ್ವಿಚಾರಣೆ, ಹಣಕಾಸು ಹೊಂದಿಸುವಿಕೆ, ನಿಯಮಗಳ ನಿರ್ಣಯ, ಆಚರಣೆ ಮತ್ತು ವ್ಯವಸ್ಥಾಪನೆ, ಉಸ್ತುವಾರಿ ಮೊದಲಾದ ಕಾರ್ಯಗಳನ್ನು ನೇರವೇರಿಸುವುದಾಗಿರುತ್ತದೆ. ಇತ್ತೀಚೆಗೆ ಭಾರತ ಮತ್ತು ಪಾಕಿಸ್ತಾನಗಳಲ್ಲೂ ಸಹಭಾಗಿತ್ವ ನೀರಾವರಿ ನಿರ್ವಹಣೆ ಅಳವಡಿಕೆಯಾಗುತ್ತಿದೆ. ಈ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯತಂತ್ರವನ್ನು ಬಲಪಡಿಸುವ ದೃಷ್ಟಿಯಿಂದ ವಿಶ್ವಬ್ಯಾಂಕ್ ೧೯೯೪ ರಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆ ಮೇಲಿನ ಅಂತರರಾಷ್ಟ್ರೀಯ ಜಾಲವನ್ನು ಸ್ಥಾಪಿಸಿದೆ (ಇಂಟರ್‌ನ್ಯಾಷನಲ್ ನೆಟ್‌ವರ್ಕ್ ಆನ್ ಪಾರ್ಟಿಸಿಪೇಟರಿ ಇರಿಗೇಷನ್ ಮ್ಯಾನೇಜ್‌ಮೆಂಟ್). "ಇದು ಸ.ನೀ.ನಿ.ಗೆ. ಅಗತ್ಯವಾದ ನೀತಿ-ನಿಯಮ, ತರಬೇತಿ ಮತ್ತು ಸಾಮರ್ಥ್ಯ ನಿರ್ಮಾಣಕ್ಕೆ ಅಗತ್ಯವಾದ ಎಲ್ಲ ನೆರವನ್ನು ಒದಗಿಸುತ್ತದೆ" (ರಾಕೇಶ್ ಹೂಜ-೨೦೦೨). ಇಂತಹ ಪ್ರಕ್ರಿಯೆಗಳು ಸಹಭಾಗಿತ್ವದ ಸೀಮಿತ ನೆಲೆಯನ್ನು ವಿಸ್ತರಿಸುತ್ತಿವೆ. ಅಂತೆಯೇ ಅದರ ತಾತ್ವಿಕ ಚರ್ಚೆಯ ನೆಲೆಗಳು ಜಾಗತಿಕ ಆಯಾಮವನ್ನು ಪಡೆಯುತ್ತಿರುವುದು ಗಮನಾರ್ಹ.

### ೨.೪. ಭಾರತದಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆ

ಭಾರತದ ಭಾರಿ ಮತ್ತು ಮಧ್ಯಮ ನೀರಾವರಿ ವ್ಯವಸ್ಥೆಯು ರಾಜ್ಯ ಸರ್ಕಾರಗಳಿಂದ ನಿರ್ವಹಿಸಲ್ಪಡುತ್ತಿದ್ದು, ಅಲ್ಪಪ್ರಮಾಣದಲ್ಲಿ ಬಳಕೆದಾರರ ಪಾಲ್ಗೊಳ್ಳುವಿಕೆಯನ್ನು ಹೊಂದಿದೆ. ಇಂದು ಜಾಗತಿಕ ಮಟ್ಟದಲ್ಲಿ ಕಂಡುಬರುತ್ತಿರುವ ಸುಧಾರಣಾ ಪ್ರವೃತ್ತಿಗಳ ಪ್ರಭಾವ ಭಾರತದ ಮೇಲಾಗುತ್ತಿದೆ. ಸಾಮಾಜಿಕ ಗುರಿ, ಸಾಧನೆಗಾಗಿ ಮತ್ತು ಸ್ಥಳೀಯ ಜನರ ಸಬಲೀಕರಣಕ್ಕಾಗಿ ಹೆಚ್ಚು ಗಮನ ನೀಡುತ್ತಿರುವುದು ಜಾಗತಿಕ ಪ್ರಕ್ರಿಯೆ. ಪಾಲ್ಗೊಳ್ಳುವಿಕೆ, ವಿಕೇಂದ್ರೀಕರಣ ಮತ್ತು ಪ್ರಜಾಸತ್ತಾತ್ಮಕ ತತ್ವಗಳ ಹಿನ್ನೆಲೆಯಲ್ಲಿ ನೀರಾವರಿ ನಿರ್ವಹಣೆಯು ಬಳಕೆದಾರರ ಸಹಭಾಗಿತ್ವಕ್ಕೆ ಅವಕಾಶ ಒದಗಿಸುತ್ತಿದೆ. ಸರ್ಕಾರದ ಪರಿಧಿಯಲ್ಲಿದ್ದ ನೀರಾವರಿ ನಿರ್ವಹಣೆಯ ಹೊಣೆಗಾರಿಕೆ ಮತ್ತು ಅಧಿಕಾರವನ್ನು ಸರ್ಕಾರೇತರ ಸಂಸ್ಥೆಗಳು ಮತ್ತು ಬಳಕೆದಾರರಿಗೆ ವರ್ಗಾಯಿಸುವ ಕಾರ್ಯ ಭರದಿಂದ ಸಾಗಿದೆ. ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವು ರೈತರ ನೇರ ಪಾಲ್ಗೊಳ್ಳುವಿಕೆಯನ್ನು ಸೂಚಿಸುತ್ತದೆ. ಅದು ಪರಸ್ಪರ ಸಹಕಾರದೊಂದಿಗೆ ರೈತರ ಭಾಗವಹಿಸುವಿಕೆ ಅಥವಾ ಪರ್ಯಾಯ ಪಾತ್ರವನ್ನು ನಿರ್ವಹಿಸುತ್ತದೆ. ಇದು ಜಂಟಿ ನಿರ್ವಹಣೆ ಅಥವಾ ಸಹನಿರ್ವಹಣೆಗೆ ಅವಕಾಶ ಕಲ್ಪಿಸುತ್ತದೆ. ವ್ಯವಸ್ಥೆಯಲ್ಲಿ ದಕ್ಷತೆಯನ್ನು ಸಾಧಿಸಲು ಈ ವಿಧಾನವನ್ನು ಪ್ರಪಂಚದಾದ್ಯಂತ ಅಳವಡಿಸಿಕೊಳ್ಳಲಾಗಿದೆ. ಸಹಭಾಗಿತ್ವ ನೀರಾವರಿ ನಿರ್ವಹಣೆ ಮೇಲಿನ ಅಂತರರಾಷ್ಟ್ರೀಯ ಜಾಲ ಎಂಬ ವಿಶ್ವಬ್ಯಾಂಕಿನ ಒಂದು ಸಂಸ್ಥೆ ಪ್ರಾಯೋಗಿಕ ಸಂಗತಿಗಳ ಆಧಾರದ ಮೇಲೆ ಸಹಭಾಗಿತ್ವ ತತ್ವದ ಅಳವಡಿಕೆಗೆ ಒತ್ತು ನೀಡಿತು. ಈ ನಿಟ್ಟಿನಲ್ಲಿ ವಿಶ್ವಬ್ಯಾಂಕು ೧೯೯೩ ರಲ್ಲಿ ಒಂದು ಜಲನೀತಿ ಗೊತ್ತುವಳಿಯನ್ನು ಅಂಗೀಕರಿಸಿದ ಪರಿಣಾಮ ಫಲಾನುಭವಿಗಳ ಪಾಲ್ಗೊಳ್ಳುವಿಕೆಗೆ ಉತ್ತಮ ಬೆಂಬಲ ದೊರೆಯಿತು. ಅದೇ ರೀತಿಯಾಗಿ ಏಷ್ಯಾ ಅಭಿವೃದ್ಧಿ ಬ್ಯಾಂಕು ಮತ್ತು ಇತರ ದಾನಿ ಸಂಸ್ಥೆಗಳೂ ಈ

ತತ್ವವನ್ನು ಬೆಂಬಲಿಸಿದವು. ನೀರಾವರಿ ಕ್ಷೇತ್ರದಲ್ಲಿನ ಹಣಕಾಸಿನ ಬಿಕ್ಕಟ್ಟುಗಳು ನಿರ್ವಹಣೆಯ ಹೊಣೆಗಾರಿಕೆಯನ್ನು ಬಳಕೆದಾರರಿಗೆ ವರ್ಗಾವಣೆ ಮಾಡುವುದಕ್ಕೆ ಅವಕಾಶ ಮಾಡಿಕೊಟ್ಟವೆ. ೨೦೦೧ರಲ್ಲಿ ನಡೆಸಿದ ಅಂತರ್‌ಜಾಲದ ಸಮ್ಮೇಳನದಲ್ಲಿ ನೀರಾವರಿ ನಿರ್ವಹಣೆ ವರ್ಗಾವಣೆಯ ಅನೇಕ ಅಂಶಗಳನ್ನು ಸಾಧಕ-ಬಾಧಕಗಳನ್ನು ಅತ್ಯಂತ ಆಳವಾಗಿ ಅಧ್ಯಯನ ಮಾಡಿ, ಚರ್ಚೆ ಮಾಡಿ, ಸಹಭಾಗಿತ್ವ ನೀರಾವರಿ ನಿರ್ವಹಣೆಯನ್ನು ಅನುಮೋದಿಸಲಾಯಿತು. ಆ ಪ್ರಕಾರ ಇಂದು ಪ್ರಪಂಚದ ಅನೇಕ ದೇಶಗಳಲ್ಲಿ ಬಳಕೆದಾರರ ಸಂಘಟನೆಗಳು ಉದಯವಾಗಿ ಇಂದು ಅನೇಕ ಯಶಸ್ವಿ ಕಾರ್ಯಗಳನ್ನು ಸಾಧಿಸುತ್ತಿವೆ.

ಭಾರತ ಸರ್ಕಾರವು ಪ್ರಸಕ್ತ ನೀತಿಗಳನ್ನು ಪುನರ್ ರಚಿಸಲು ಮತ್ತು ಹೊಸ ನೀತಿಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಗಳನ್ನು ನಡೆಸುತ್ತಲೇ ಬಂದಿದೆ. ೧೯೭೨ ರಲ್ಲಿ ಎರಡನೇ ನೀರಾವರಿ ಆಯೋಗ ಸಲ್ಲಿಸಿದ ವರದಿಯ ಆಧಾರದ ಮೇಲೆ ಮತ್ತು ೧೯೭೩ ರಲ್ಲಿ ಎಲ್ಲ ರಾಜ್ಯಗಳ ನೀರಾವರಿ ಸಚಿವರ ಸಮ್ಮೇಳನದ ಗೊತ್ತುವಳಿ ಹಾಗೂ ೧೯೭೩ ರಲ್ಲಿ ಯೋಜನಾ ಆಯೋಗದ ಶಿಫಾರಸ್ಸಿನ ಮೇರೆಗೆ ೧೯೭೪ರಲ್ಲಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ (ಕಾಡಾ) ಪ್ರಾಧಿಕಾರಗಳನ್ನು ರಚಿಸಲಾಯಿತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಹಣಕಾಸಿನ ನೆರವಿನೊಂದಿಗೆ ಕಾಡಾಗಳಲ್ಲಿ ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಪ್ರಯತ್ನಿಸಲಾಯಿತು. ಈ ಕಾಡಾ ಕಾರ್ಯಕ್ರಮದಲ್ಲಿಯೇ ರೈತರ ಸಹಭಾಗಿತ್ವಕ್ಕೆ ಅವಕಾಶ ಕಲ್ಪಿಸಲಾಗಿತ್ತು.

ಭಾರತದ ಸಹಭಾಗಿತ್ವ ನೀರಾವರಿ ನಿರ್ವಹಣೆಯ ಬೆಳವಣಿಗೆಯನ್ನು ಮೂರು ಹಂತಗಳಲ್ಲಿ ಗುರುತಿಸಲಾಗಿದೆ.

೧೯೭೫ ರಿಂದ ೧೯೮೫ ರವರೆಗೆ ತೂಬು ಆಧರಿತ ನೀರು ಬಳಕೆದಾರರ ಸಂಘಗಳ ಸ್ಥಾಪನೆಯನ್ನು ಪರೀಕ್ಷಾರ್ಥವಾಗಿ ಹಲವಾರು ರಾಜ್ಯಗಳಲ್ಲಿ ಆರಂಭಿಸಲಾಯಿತು. ನೀರು ಬಳಕೆದಾರರ ಸಂಘಗಳು ನೀರಿನ ಸಮಾನ ಹಂಚಿಕೆ, ಉತ್ತಮ ನೀರು ನಿರ್ವಹಣೆ, ಸಣ್ಣ ಪ್ರಮಾಣದ ಕಾಮಗಾರಿಗಳ ದುರಸ್ತಿ ಮತ್ತು ಉಸ್ತುವಾರಿ ನೋಡಿಕೊಳ್ಳುತ್ತಿದ್ದವು. ನೀರಿನ ವಿವಾದಗಳನ್ನು ಇತ್ಯರ್ಥ ಮಾಡುತ್ತಿದ್ದವು. ಇದರ ಪರಿಣಾಮವಾಗಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾರ್ಯಕ್ರಮದಲ್ಲಿ ನೀ.ಬ. ಸಂಘಗಳ ರಚನೆಗೆ ಅವಕಾಶ ಕಲ್ಪಿಸಲಾಯಿತು. ಈ ಸಂಶೋಧನಾ ಕಾರ್ಯಕ್ರಮಕ್ಕೆ ಫೋರ್ಡ್ ಪ್ರತಿಷ್ಠಾನ ಧನಸಹಾಯ ಒದಗಿಸಿತು.

೧೯೮೫-೯೦ ರ ಅವಧಿಯಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆಯು ಸಂಶೋಧನಾ ಹಂತದಿಂದ ಪ್ರಾಯೋಗಿಕ ಮಜಲನ್ನು ತಲುಪಿತು. ದೇಶದಾದ್ಯಂತ ಅನೇಕ ಮಾದರಿ ಯೋಜನೆಗಳು ಪ್ರಾರಂಭಗೊಂಡವು. ಜಲಸಂಪನ್ಮೂಲ ಸಚಿವಾಲಯ, ಭಾರತ ಸರ್ಕಾರ, ವಿಶ್ವಬ್ಯಾಂಕು ಮತ್ತು ಯು.ಎಸ್.ಎ.ಐ.ಡಿ. ಈ ಕ್ರಿಯಾ ಯೋಜನೆಗಳಿಗೆ ಹಣಕಾಸಿನ ನೆರವು ನೀಡಿದವು. ಈ ಕಾರ್ಯಕ್ರಮಗಳಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರ ವಹಿಸಿದವು.

೧೯೯೦ ರ ನಂತರ ಸಣ್ಣ ಪ್ರಮಾಣದ ನೀರಾವರಿ ವ್ಯವಸ್ಥೆಗಳನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವ ಪ್ರಕ್ರಿಯೆ ಶುರುವಾಯಿತು. ಉಪಘಟಕಗಳು, ವಿತರಣಾನಾಲೆಯ ಹಂತದಲ್ಲಿ ಬಳಕೆದಾರರ ನಿರ್ವಹಣೆಯನ್ನು ಗುರುತಿಸಿ ಆಚರಣೆ ಮತ್ತು ವ್ಯವಸ್ಥಾಪನೆಯ ಹೊಣೆ ನೀಡಲಾಯಿತು. ಈ ಪ್ರಕ್ರಿಯೆಯಲ್ಲಿ ಭಾರತ ಸರ್ಕಾರ ಮತ್ತು ಸರಕಾರೇತರ ಸಂಸ್ಥೆಗಳು ಪ್ರಧಾನ ಪಾತ್ರ ವಹಿಸಿದವು.

ಇದೇ ಅವಧಿಯಲ್ಲಿ ಯೋಜನಾ ಆಯೋಗವು ಪಾರ್ಟಿಸಿಪೆಟರಿ ಇರಿಗೇಶನ್ ಮ್ಯಾನೇಜ್‌ಮೆಂಟ್‌ನ ಮೇಲೆ ಒಂದು ಪ್ರತ್ಯೇಕ ಕಾರ್ಯಪಡೆಯನ್ನು ರಚಿಸಿತು. ಈ ಕಾರ್ಯಪಡೆಯು ಹಣಕಾಸಿನ ಸಾಂಸ್ಥಿಕ ಮತ್ತು ನ್ಯಾಯಿಕ ಸಂಗತಿಗಳ ಬಗ್ಗೆ ವಿಮರ್ಶೆ ಮಾಡಿ ಸಹಭಾಗಿತ್ವದ ಪರಿಣಾಮಕಾರಿ ಅನುಷ್ಠಾನಕ್ಕೆ ಸಲಹೆ ಮಾಡಿತು.

೨೦೦೨ ರ ಪರಿಷ್ಕೃತ ರಾಷ್ಟ್ರೀಯ ಜಲನೀತಿಯು ಭಾರಿ ಮತ್ತು ಮಧ್ಯಮ ನೀರಾವರಿ ಕ್ಷೇತ್ರಗಳಲ್ಲಿ ಸಮುದಾಯದ ಸಹಭಾಗಿತ್ವವನ್ನು ಜಾರಿಗೆ ತರಲು ಸಲಹೆ ಮಾಡಿತು. ಹಲವಾರು ರಾಜ್ಯಗಳು ಈಗಾಗಲೇ ನೀರಾವರಿಯನ್ನು ಸಹಭಾಗಿತ್ವ ತತ್ವವನ್ನು ಆಧರಿಸಿ ನೀ.ಬ. ಸಂಘಗಳನ್ನು ಸ್ಥಾಪಿಸಿವೆ. ಕೆಲವು ಸಂಘಗಳು ಸುಧಾರಣೆಗಳನ್ನು ತರುವಲ್ಲಿ ಅನೇಕ ಪ್ರಯತ್ನಗಳನ್ನು ನಡೆಸಿವೆಯಾದರೂ ನಿರೀಕ್ಷಿತ ಫಲ ನೀಡುವಲ್ಲಿ ಅವು ಸಂಪೂರ್ಣ ಯಶಸ್ಸು ಸಾಧಿಸಲು ಸಾಧ್ಯವಾಗುತ್ತಿಲ್ಲ. ಸರಕಾರ ಮೇಲಿನಿಂದ ಕೆಳಮುಖವಾಗಿ ಹರಿಯುವ ಮಾದರಿಯನ್ನು ಸಹಭಾಗಿತ್ವವೆಂದು ಪ್ರಚುರಪಡಿಸುತ್ತಿರುವುದು ಅಪಯಶಸ್ಸಿಗೆ ಕಾರಣವಾಗಿರಬಹುದು.

### ೨.೫. ಕರ್ನಾಟಕದಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆ

ಕರ್ನಾಟಕದ ಇತಿಹಾಸದಲ್ಲಿ ರೈತರೇ ಸಾಮುದಾಯಿಕವಾಗಿ ನೀರಾವರಿ ನಿರ್ವಹಣೆಯನ್ನು ಕೈಗೊಂಡ ಅನೇಕ ಉದಾಹರಣೆಗಳು ದೊರೆಯುತ್ತವೆ. ವಿಜಯನಗರ ಸಾಮ್ರಾಜ್ಯದಲ್ಲಿ ರಾಜ್ಯದ ಆಡಳಿತ ನೀರಾವರಿಯಲ್ಲಿ ಕಡಿಮೆ ವೆಚ್ಚವನ್ನು ತೊಡಗಿಸಿಕೊಂಡರೂ ಜನರ ಸಹಭಾಗಿತ್ವದಲ್ಲಿ ಉತ್ತಮ ಕಾಮಗಾರಿ ಗಳನ್ನು ಕೈಗೆತ್ತಿಕೊಂಡು ಅನೇಕ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸಲಾಯಿತು.

೧೯೮೦ ರ ನಂತರ ಕರ್ನಾಟಕದಲ್ಲಿ ಭಾರಿ ಮತ್ತು ಮಧ್ಯಮ ನೀರಾವರಿ ವ್ಯವಸ್ಥೆಯಲ್ಲಿ ಹೊಸ ನೀತಿಗಳು ಜಾರಿಗೊಳಿಸಲು ಸರ್ಕಾರ ಮುಂದಾಯಿತು. ೧೯೮೦ ರ ಕರ್ನಾಟಕ ಕಾಡಾ ಕಾಯ್ದೆಯಿಂದ ಕೃಷ್ಣಾ ಮೇಲ್ದಂಡೆ ಅಚ್ಚುಕಟ್ಟು ವ್ಯಾಪ್ತಿಯಲ್ಲಿ ೩೬ ಪೈಪ್ ಸಮಿತಿಗಳನ್ನು ೧೯೮೫-೮೬ ರಲ್ಲಿ ರಚನೆ ಮಾಡಲಾಯಿತು. ಆಂಧ್ರಪ್ರದೇಶದ ಶ್ರೀರಾಮಸಾಗರ್ ಯೋಜನೆಯ ಪೈಪ್ ಸಮಿತಿಗಳ ಮಾದರಿಯನ್ನು ಇಲ್ಲಿ ಅನುಸರಿಸಲಾಗಿತ್ತು. ವಿಶ್ವಬ್ಯಾಂಕಿನ ನೆರವಿನಿಂದ ಇದೇ ಅಚ್ಚುಕಟ್ಟು ಪ್ರದೇಶದಲ್ಲಿ ಕಾಡಾ ಉಸ್ತುವಾರಿಯಲ್ಲಿ ಪೈಪ್ ಸಮಿತಿಗಳನ್ನು ರಚಿಸಿ ವಾರಾಬಂದಿ ವ್ಯವಸ್ಥೆಯನ್ನು ಜಾರಿಗೊಳಿಸಲಾಯಿತು.

ಕಾಲುವೆಗಳು ತೀವ್ರ ಹಾನಿಗೊಳಗಾಗಿದ್ದರಿಂದ ಈ 'ವಾರಬಂದಿ' ಪದ್ಧತಿಯು ಯಶಸ್ವಿಯಾಗಲಿಲ್ಲ. ಈ ಸಮಿತಿಗಳು ೧೯೮೯ ವೇಳೆಗೆ ನಿಷ್ಕ್ರಿಯಗೊಂಡು ತಮ್ಮ ಅಸ್ತಿತ್ವವನ್ನೆ ಕಳೆದುಕೊಂಡವು.

ಇದೇ ರೀತಿಯಾಗಿ ಸರ್ಕಾರ ೧೯೮೭ ರಲ್ಲಿ ತುಂಗಭದ್ರಾ ನೀರಾವರಿ ವ್ಯವಸ್ಥೆಯಲ್ಲಿ ಸಮರೋಪಾದಿಯಲ್ಲಿ ಫಲಾನುಭವಿಗಳ ಪಾಲ್ಗೊಳ್ಳುವಿಕೆಯನ್ನು ಉತ್ತೇಜಿಸಲಾಯಿತು. ತೂಬಿನ ಮಟ್ಟದಲ್ಲಿ ಸುಮಾರು ೩೦೦ ಸಂಘಗಳನ್ನು ನೋಂದಾಯಿಸಲಾಯಿತು. ಕಾಡಾ ಅಧಿಕಾರಿ ವರ್ಗವನ್ನು ಈ ಸಂಘಗಳ ಕಾರ್ಯಾಚರಣೆ ನೋಡಿಕೊಳ್ಳಲು ಸೂಚಿಸಲಾಯಿತು. ಆದರೆ ಈ ಸಂಘಗಳು ನಿರೀಕ್ಷಿತ ಪ್ರಗತಿಯನ್ನು ಸಾಧಿಸಲಿಲ್ಲ (ಗುಲಾತಿ ಮತ್ತು ಇತರರು, ೨೦೦೫). ಅಸಂಖ್ಯಾತ ರೈತರಿಗೆ ಈ ಸಂಘಗಳು ಅಸ್ತಿತ್ವದಲ್ಲಿರುವ ಬಗ್ಗೆಯೇ ತಿಳಿದಿರಲಿಲ್ಲ. ಒಂದು ವರ್ಷದ ನಂತರ ಯಾವ ಸಂಘವೂ ತಮ್ಮ ನೋಂದಣಿಯನ್ನು ಪುನರ್ ನವೀಕರಣಗೊಳಿಸಲಿಲ್ಲ.

೧೯೯೭ ರಲ್ಲಿ ವಿಶ್ವಬ್ಯಾಂಕಿನ ಪ್ರೋತ್ಸಾಹದಿಂದ ಕೃಷ್ಣ ಭಾಗ್ಯ ಜಲನಿಗಮ ನಿಯಮಿತದ ಮೂಲಕ ಕೃಷ್ಣ ಮೇಲ್ದಂಡೆ ಯೋಜನೆಯ ವ್ಯಾಪ್ತಿಯಲ್ಲಿ ಮಾದರಿ ನೀ.ಬ.ಸ. ಸಂಘಗಳನ್ನು ರಚಿಸಲಾಯಿತು. ನೋಂದಾಯಿಸಲ್ಪಟ್ಟ ಪ್ರತಿ ಸಂಘಕ್ಕೆ ಇಡಿಗಂಟಿನಲ್ಲಿ ವಾರ್ಷಿಕ ೧೧.೬೦೦ ರೂ.ಗಳನ್ನು ಪ್ರೋತ್ಸಾಹಕವನ್ನಾಗಿ ನೀಡಲಾಯಿತು. ಆದರೆ ನೋಂದಾಯಿಸಲ್ಪಟ್ಟ ೪೯ ನೀ.ಬ.ಸ. ಸಂಘಗಳಲ್ಲಿ ಕೇವಲ ೩ ಸಂಘಗಳು ಮಾತ್ರ ಈ ಸಹಾಯಧನವನ್ನು ಪಡೆದುಕೊಂಡವು. ಈ ೩ ಸಂಘಗಳೂ ಅಸ್ತಿತ್ವದಲ್ಲಿದ್ದದ್ದು ೬ ತಿಂಗಳು ಮಾತ್ರ. ನಂತರ ಅವು ಸ್ಥಗಿತಗೊಂಡವು.

೧೯೯೫ ರಲ್ಲಿ ಕರ್ನಾಟಕ ಸರ್ಕಾರ ಸಹಭಾಗಿತ್ವ ನೀರಾವರಿ ನಿರ್ವಹಣೆ ಬಗ್ಗೆ ವಿಶೇಷ ತಜ್ಞರ ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯ ಶಿಫಾರಸ್ಸುಗಳ ಆಧಾರದ ಮೇಲೆ ಸರಕಾರವು ಕರ್ನಾಟಕ ನೀರಾವರಿ ಕಾಯ್ದೆಗೆ ತಿದ್ದುಪಡಿ ಮಾಡಿ, ಕರ್ನಾಟಕದ ಸಹಕಾರ ಸಂಘಗಳ ಕಾಯ್ದೆ ಮತ್ತು ಸಹಕಾರ ಸಂಘಗಳ ನಿಯಮಾವಳಿಗಳ ಅನ್ವಯ ೨೦೦೦ ಜೂನ್‌ನಿಂದ ರಾಜ್ಯದ ಎಲ್ಲ ವಿಧವಾದ ನೀರಾವರಿ ನಿರ್ವಹಣೆಯನ್ನು ನೀರು ಬಳಕೆದಾರರ ಸಹಕಾರ ಸಂಘಗಳಿಗೆ ವಹಿಸಿಕೊಟ್ಟಿದೆ.

ಹೀಗೆ 'ಸಹಭಾಗಿತ್ವ' ತನ್ನ ಅರ್ಥ ಚಹರೆಗಳನ್ನು ಬದಲಾದ ಕಾಲದೊಂದಿಗೆ ಭಿನ್ನವಾಗಿಸಿಕೊಂಡಿದೆ. ಜನರನ್ನು ಆರ್ಥಿಕ ವಲಯದ ವಿಶೇಷ ಘಟಕವನ್ನಾಗಿ ರೂಪಾಂತರಗೊಳಿಸುವಲ್ಲಿ 'ಸಹಭಾಗಿತ್ವದ' ಪರಿಕಲ್ಪನೆ ಇಂದು ಹೆಚ್ಚು ಅಗತ್ಯ. ಈ ಮೇಲಿನ ಭಾಗದಲ್ಲಿ ಸಹಭಾಗಿತ್ವದ ನಿರ್ವಚನದ ವಿವಿಧ ನೆಲೆಗಳು, ಅದರ ಜಾಗತಿಕ ವಿಕಾಸದ ಹಂತಗಳನ್ನು ಚರ್ಚಿಸಲಾಗಿದೆ. ಈ ಚರ್ಚೆ ಸಹಭಾಗಿತ್ವ ನೀರಾವರಿ ನಿರ್ವಹಣೆಯನ್ನು ಅರ್ಥ ಮಾಡಿಕೊಳ್ಳಲು ಮುಂದಿನ ಅಧ್ಯಾಯಗಳಿಗೆ ಮಾರ್ಗಸೂಚಿಯಾಗಿದೆ.

❐❐

# ಅಧ್ಯಾಯ ಮೂರು

## ಅಧ್ಯಯನಗಳ ಸಮೀಕ್ಷೆ

೩.೧. ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳು

೩.೨. ಬೆಳೆ ಮಾದರಿ ಮತ್ತು ನೀರು ದರ ಕುರಿತ ಅಧ್ಯಯನಗಳು

೩.೩. ನೀರಾವರಿ ನಿರ್ವಹಣೆಯ ಹಸ್ತಾಂತರ

೩.೪. ಕಾಲುವೆಯ ಮೇಲ್ತುದಿ ಮತ್ತು ಕೆಳತುದಿ ರೈತರ ನಡುವಿನ ಬಿಕ್ಕಟ್ಟುಗಳು

೩.೫. ಸಹಭಾಗಿತ್ವ ನೀರಾವರಿ ನಿರ್ವಹಣೆ ಕುರಿತ ಅಧ್ಯಯನಗಳು

೩.೬. ನೀರು ಬಳಕೆದಾರರ ಸಂಘಗಳ ಸಮಾಜೋ ಆರ್ಥಿಕ ವಿಶ್ಲೇಷಣೆ

೩.೭. ನೀರಾವರಿ ನಿರ್ವಹಣೆಯಲ್ಲಿ ಮಹಿಳೆಯ ಪಾತ್ರ

# ಅಧ್ಯಾಯ ೩

# ಅಧ್ಯಯನಗಳ ಸಮೀಕ್ಷೆ

## ಪ್ರಸ್ತಾವನೆ

ಪ್ರಸ್ತುತ ಅಧ್ಯಾಯದಲ್ಲಿ ನೀರಾವರಿ ನಿರ್ವಹಣೆಯಲ್ಲಿ ಬಳಕೆದಾರರ ಸಹಭಾಗಿತ್ವದ ಬಗ್ಗೆ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳನ್ನು ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಭಾರತದ ನೀರಾವರಿ ನಿರ್ವಹಣೆಯ ಕುರಿತು ನಿದರ್ಶನಾತ್ಮಕವಾಗಿ ನಡೆದಿರುವ ಅಧ್ಯಯನಗಳಿಗೆ ಈ ಅಧ್ಯಾಯದಲ್ಲಿ ಪ್ರಾಮುಖ್ಯತೆ ನೀಡಲಾಗಿದೆ. ವರ್ತಮಾನದ ಸಂಶೋಧನಾ ಚಟುವಟಿಕೆಗಳಿಗೆ ಈ ಹಿಂದೆ ಆ ವಿಷಯಕ್ಕೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳು ಮಾರ್ಗದರ್ಶಕವಾಗಿರುತ್ತವೆ. ಇದರಿಂದ ಪ್ರಸ್ತುತ ಅಧ್ಯಯನದ ವಿಶ್ಲೇಷಣೆಗೆ ಒಂದು ಆಧಾರ ಸಿಕ್ಕು ಕಂಡುಕೊಂಡ ಫಲಿತಗಳನ್ನು ಚರ್ಚಿಸಲು ಅವಕಾಶವಾಗುತ್ತದೆ ಮತ್ತು ಇಂದಿನ ವಾಸ್ತವ ಸ್ಥಿತಿಗತಿಗಳನ್ನು ಒರೆಗೆ ಹಚ್ಚಲು ಸಹಾಯವಾಗುತ್ತದೆ. ಸಾಮಾಜಿಕ ಮತ್ತು ಆರ್ಥಿಕ ಸಂಗತಿಗಳು ಸದಾ ಬದಲಾಗುವ ಚಲಗಳಾಗಿರುವುದರಿಂದ ಹಿಂದಿನ ಅಧ್ಯಯನಗಳಲ್ಲಿ ಕಂಡುಬಂದ ಫಲಿತಗಳೇ ಇಂದೂ ಸಂಭವಿಸುತ್ತವೆ ಎನ್ನಲು ಸಾಧ್ಯವಾಗಲಾರದು.

ನೀರಾವರಿ ನಿರ್ವಹಣೆ ಎಂಬ ಪರಿಭಾವನೆಯು ಒಂದು ವಿಶಾಲ ಸಂಗತಿಯಾಗಿದ್ದು ಹೆಚ್ಚು ವ್ಯಾಪಕತೆಯನ್ನು ಪಡೆದಿದೆ. ಈ ಪರಿಕಲ್ಪನೆಯಲ್ಲಿ ತಾಂತ್ರಿಕ, ಪರಿಸರ, ಭೌಗೋಳಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ಹೀಗೆ ಅನೇಕ ಅಂಶಗಳು ಅಡಕವಾಗಿವೆ. ಆದುದರಿಂದ ಈ ಎಲ್ಲ ಅಂಶಗಳಿಗೆ ಸಂಬಂಧಿಸಿದ ಅಧ್ಯಯನಗಳನ್ನು ಸಮೀಕ್ಷಿಸಲು ಸಾಧ್ಯವಿಲ್ಲ. ಪ್ರಸ್ತುತ ಅಧ್ಯಯನದ ವಿಷಯ ವಿಶಿಷ್ಟವೆನಿಸುವ ಅಧ್ಯಯನಗಳನ್ನು ಮಾತ್ರ ಸಮೀಕ್ಷಿಸಲಾಗಿದೆ. ಇಲ್ಲಿ ಒಟ್ಟು ೪೦ ಅಧ್ಯಯನಗಳನ್ನು ಸಮೀಕ್ಷೆ ಮಾಡಲಾಗಿದೆ. ಅದರಲ್ಲಿ ಆರು ಅಂತಾರಾಷ್ಟ್ರೀಯ ಮಟ್ಟದ, ೧೦ ರಾಷ್ಟ್ರಮಟ್ಟದ, ೨೪ ರಾಜ್ಯದ ಮತ್ತು ಪ್ರದೇಶ ಮಟ್ಟದ ಹಾಗೂ ಒಂದು ಪ್ರಸ್ತುತ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ ಅಧ್ಯಯನವನ್ನು ಸಮೀಕ್ಷೆ ಮಾಡಲಾಗಿದೆ. ಒಂದೇ ರೀತಿಯ ಫಲಿತಗಳನ್ನು ಸೂಚಿಸುವ ಅಧ್ಯಯನಗಳನ್ನು ಪುನರಾವರ್ತನೆ ಮಾಡದೆ ಅವುಗಳ ಆಕರಸೂಚಿಯನ್ನು ನೀಡಲಾಗಿದೆ. ಪ್ರಸ್ತುತ ಅಧ್ಯಯನದ ಸಮಸ್ಯೆಗಳ ತೀವ್ರತೆ ಮತ್ತು ಅಧ್ಯಯನಗಳ ಲಭ್ಯತೆ ಆಧಾರದ ಮೇಲೆ ಸಮೀಕ್ಷೆಗಳನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

ಸಮಾಜವಿಜ್ಞಾನಗಳಲ್ಲಿ ಸಾರ್ವಕಾಲಿಕ ಸತ್ಯಗಳು ಅತ್ಯಂತ ವಿರಳವಾಗಿದ್ದು, ಕಾಲ ಬದಲಾದಂತೆ ಸತ್ಯಗಳೂ ಚಲನಶೀಲ ಸನ್ನಿವೇಶಕ್ಕೆ ತಕ್ಕಂತೆ ಮಾರ್ಪಾಟು ಹೊಂದುತ್ತವೆ. ಆದುದರಿಂದ ಬದಲಾಗುವ ಸ್ಥಿತಿಗತಿಗಳ ಆಧಾರದ ಮೇಲೆ ಬಳಕೆದಾರರ ಮನೋಭೂಮಿಕೆಯಲ್ಲಿ, ಪ್ರಭುತ್ವದ ನೀತಿ ಧೋರಣೆಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಅದೇ ರೀತಿ ಜಾಗತಿಕ ಸಂದರ್ಭದಲ್ಲಿ ಸಂಭವಿಸುವ ಅನೇಕ ಸಂಗತಿಗಳು ಇಂದು ನಮ್ಮ ಫಲಾನುಭವಿಗಳ ಮೇಲೆ ತಮ್ಮವೇ ಆದ ಪ್ರಭಾವ ಪರಿಣಾಮಗಳನ್ನು ಬೀರುತ್ತವೆ. ಅಂತಹ ಪ್ರಭಾವ ಮತ್ತು ಪರಿಣಾಮಗಳು ಎಲ್ಲ ಪ್ರದೇಶಗಳಲ್ಲಿ ಒಂದೇ ರೀತಿಯಾಗಿರುವುದಿಲ್ಲ. ಅಂದರೆ ಪ್ರತಿಯೊಂದು ಸಂಗತಿಯೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ.

ಒಂದು ರಾಜ್ಯದ ಒಳಗೆ ಈ ಸನ್ನಿವೇಶಗಳು ಏಕಪ್ರಕಾರವಾಗಿರಲಾರವು. ಕೆಲವು ಪ್ರದೇಶಗಳಲ್ಲಿ ಬದಲಾವಣೆಗಳು ತೀವ್ರವಾಗಿದ್ದರೆ, ಮತ್ತೆ ಕೆಲವು ಪ್ರದೇಶಗಳಲ್ಲಿ ಬದಲಾವಣೆಗಳು ಮಂದಗತಿಯಲ್ಲಿರುತ್ತವೆ. ಒಂದೇ ಪ್ರದೇಶದಲ್ಲಿ ಎಲ್ಲ ಜನರ ನಡುವಳಿಕೆಗಳು ಏಕಪ್ರಕಾರವಾಗಿರುವುದಿಲ್ಲ. ಆಯಾ ವ್ಯಕ್ತಿಗಳ ಶಿಕ್ಷಣ ಮಟ್ಟ, ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಾನಮಾನಗಳು ವ್ಯಕ್ತಿಯ ವರ್ತನೆಗಳನ್ನು ನಿಯಂತ್ರಿಸುತ್ತವೆ. ಇಂತಹ ಆಂತರಿಕ ಮತ್ತು ಬಾಹ್ಯ ಸಂಗತಿಗಳ ಪ್ರಭಾವಗಳು ನಮ್ಮ ಅಧ್ಯಯನ ಕ್ಷೇತ್ರದಲ್ಲಿ ಹೇಗೆ ತನ್ನ ವಿಶಿಷ್ಟತೆಯನ್ನು ಪಡೆದುಕೊಂಡಿವೆ ಎನ್ನುವುದನ್ನು ಈ ಅಧ್ಯಯನಗಳ ಸಮೀಕ್ಷೆಗಳ ಮೂಲಕ ಕಂಡುಕೊಳ್ಳುವ ಅಗತ್ಯವಿದೆ.

ಅಧ್ಯಯನಗಳ ಸಮೀಕ್ಷೆಯ ಆಧಾರದ ಮೇಲೆ ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಕಂಡುಬರುವ ವಾಸ್ತವ ಸ್ಥಿತಿಗತಿಗಳನ್ನು ತೌಲನಿಕವಾಗಿ ನೋಡುವ ಅವಶ್ಯಕತೆಯಿದೆ. ನೀರಾವರಿ ನಿರ್ವಹಣೆ ಎಂಬುದು ಹಲವಾರು ಸಂಗತಿಗಳಿಂದ ಕೂಡಿರುವ ಒಂದು ಘಟಕವಾಗಿದೆ. ತಾಂತ್ರಿಕ, ಮಾನವಿಕ, ಭೌತಿಕ ಮತ್ತು ಸಾಂಸ್ಕೃತಿಕ ಅಂಶಗಳು ನೀರಾವರಿ ನಿರ್ವಹಣೆಯಲ್ಲಿ ಬಳಕೆದಾರರ ಪಾತ್ರವನ್ನು ನಿಯಂತ್ರಿಸುತ್ತಿರುತ್ತವೆ. ಅಧ್ಯಯನಗಳ ಸಮೀಕ್ಷೆಯಲ್ಲಿ ಈ ಅಂಶಗಳು ವಿವಿಧ ಕ್ಷೇತ್ರ, ಪ್ರದೇಶಗಳಲ್ಲಿ ಹೇಗೆ ಬಳಕೆದಾರರ ವರ್ತನೆ, ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದವು ಮತ್ತು ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಆ ನಿಯಂತ್ರಣ ಹೇಗಿದೆ ಎಂಬುದನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಈ ಮೂರನೆಯ ಅಧ್ಯಾಯವನ್ನು ಏಳು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲ ಭಾಗದಲ್ಲಿ ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳ ಕುರಿತಾದ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಬೆಳೆ ಮಾದರಿ ಮತ್ತು ನೀರು ದರ ಸಂಗ್ರಹದಲ್ಲಿನ ತೊಡಕುಗಳು ಮತ್ತು ನೀರಾವರಿ ನಿರ್ವಹಣೆಯ ಹಸ್ತಾಂತರದ ಪ್ರಕ್ರಿಯೆ ಕುರಿತಾದ ಅಧ್ಯಯನಗಳ ಸಮೀಕ್ಷೆಯನ್ನು ಎರಡನೇ ಮತ್ತು ಮೂರನೇ ಭಾಗಗಳಲ್ಲಿ ವಿವರಿಸಲಾಗಿದೆ. ನಾಲ್ಕನೇ ಮತ್ತು ಐದನೇ ಭಾಗಗಳಲ್ಲಿ ಕಾಲುವೆಯ ಮೇಲ್ತುದಿ ಮತ್ತು ಕೆಳತುದಿ ರೈತರ ನಡುವಿನ ಬಿಕ್ಕಟ್ಟುಗಳು, ನೀರು ಬಳಕೆದಾರರ ಸಂಘಗಳ ಸಹಭಾಗಿತ್ವ ನೀರಾವರಿ ನಿರ್ವಹಣೆ ಕುರಿತಂತೆ

ಈವರೆಗೆ ನಡೆದ ಅಧ್ಯಯನಗಳ ಸಾರವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ನೀರು ಬಳಕೆದಾರರ ಸಂಘಗಳ ಸಾಮಾಜಿಕ ಮತ್ತು ಆರ್ಥಿಕ ಸಂರಚನೆ, ನೀರಾವರಿ ನಿರ್ವಹಣೆಯಲ್ಲಿ ಮಹಿಳೆಯರ ಪಾತ್ರಗಳ ಅಧ್ಯಯನಗಳ ವಿವರಗಳನ್ನು ಕ್ರಮವಾಗಿ ಆರನೇ ಮತ್ತು ಏಳನೇ ಭಾಗಗಳಲ್ಲಿ ಚರ್ಚಿಸಲಾಗಿದೆ.

## ೩.೧. ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳು

ಸೆನ್ ಡಿ. ಮತ್ತು ದಾಸ್ ಪಿ.ಕೆ. (೧೯೮೬) ನೀರಾವರಿ ಬೆಳವಣಿಗೆಯನ್ನು ಭಾರತದ ಯೋಜಿತ ಅಭಿವೃದ್ಧಿಯ ದೃಷ್ಟಿಕೋನದಿಂದ ವಿವರಿಸುತ್ತಾ ಭಾರಿ ಹೂಟೆಯಿಂದ ನೀರಾವರಿ ಕ್ಷೇತ್ರ ನಿರೀಕ್ಷಿತ ಫಲಿತಗಳನ್ನು ನೀಡಲಿಲ್ಲ ಎಂಬುದನ್ನು ಅಂಕಿ ಸಂಖ್ಯೆಗಳ ಸಮೇತ ವಿವರಿಸಿದ್ದಾರೆ. ಭಾರಿ ನೀರಾವರಿ ಯೋಜನೆಗಳು ನಿರ್ವಹಣೆಯ ಕೊರತೆಯಿಂದ ಅಸಂಖ್ಯಾತ ಸಮಸ್ಯೆಗಳು ಉಂಟಾಗಿವೆ. ಇವುಗಳ ಪರಿಹಾರಾರ್ಥವಾಗಿ ಸ್ಥಾಪನೆಗೊಂಡ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳು ಅಂತಿಮವಾಗಿ ವಿವಿಧ ಇಲಾಖೆಗಳ ಸಹಯೋಗ ಮತ್ತು ಸಮನ್ವಯತೆ ಸಾಧಿಸುವಲ್ಲಿ ವಿಫಲವಾದ ಬಗೆಯನ್ನು ವಿಶ್ಲೇಷಿಸಲಾಗಿದೆ. ಹೊಣೆಗಾರಿಕೆಯನ್ನು ಹೊತ್ತುಕೊಳ್ಳಲು ತಯಾರಿಲ್ಲದ ಇಲಾಖೆಗಳು ತಮ್ಮ ಜವಾಬ್ದಾರಿಗಳನ್ನು ಇತರೆ ಇಲಾಖೆಗಳ ಮೇಲೆ ಹೇರಿ ಜಾರಿಕೊಳ್ಳುವುದರಿಂದ ನೀರಾವರಿ ವ್ಯವಸ್ಥೆ ಅಧೋಗತಿ ತಲುಪಿರುವುದನ್ನು ವಿಷದಪಡಿಸಲಾಗಿದೆ.

ಈ ಅಧ್ಯಯನದಲ್ಲಿ ತುಂಗಾಭದ್ರ ಯೋಜನೆಯ ಅಚ್ಚುಕಟ್ಟು ಪ್ರದೇಶ ಉನ್ನತ ಮಟ್ಟದ ಕಾಲುವೆ ಹಂತ ಒಂದನ್ನು ಆಯ್ಕೆ ಮಾಡಿ ಕ್ಷೇತ್ರಕಾರ್ಯದ ಮೂಲಕ ಸಂಶೋಧನೆ ನಡೆಸಲಾಗಿದೆ. ಈ ಕಾಲುವೆಯು ಆಂಧ್ರಪ್ರದೇಶದ ಅನಂತಪುರ ಮತ್ತು ಕಡಪ ಜಿಲ್ಲೆಗಳಿಗೆ ನೀರಾವರಿಯನ್ನು ಒದಗಿಸುತ್ತಿದೆ. ಅಚ್ಚುಕಟ್ಟು ಪ್ರದೇಶದಲ್ಲಿನ ಬೆಳೆಯ ಮಾದರಿಯನ್ನು ವಿವರಿಸಿ ಯಾವ ಪ್ರಮಾಣದಲ್ಲಿ ಬೆಳೆಯ ಉಲ್ಲಂಘನೆಯಾಗಿದೆ, ಈ ಪ್ರದೇಶದ ಕಾಲುವೆಯ ನೀರಾವರಿ ಸಾಮರ್ಥ್ಯ ಮತ್ತು ವಾಸ್ತವ ನೀರಿನ ಬಳಕೆ ನಡುವಿನ ಅಂತರವನ್ನು, ಆದರ್ಶಪ್ರಾಯ ಗರಿಷ್ಟ ನೀರಿನ ಬಳಕೆಯ ಮೇಲೆ ಪ್ರಭಾವ ಬೀರುವ ಅಂಶಗಳನ್ನು, ಕಾಲುವೆ ಮೇಲ್ತುದಿ ಬಳಕೆದಾರರ ಅಧಿಕ ನೀರು ಬಳಕೆಯನ್ನು ಹಾಗೂ ಕೆಳತುದಿಗೆ ನೀರಿನ ಕೊರತೆ ಯಾಗಿರುವುದನ್ನು ವಿವರಿಸಲಾಗಿದೆ. ನೀರಾವರಿಯಿಂದ ಉಂಟಾಗಿರುವ ಅಭಿವೃದ್ಧಿಯ ಮಟ್ಟ, ರೈತರಿಗೆ ಮಾರುಕಟ್ಟೆಯ ಲಭ್ಯತೆ, ಕೃಷಿಗೆ ಅಗತ್ಯವಾದ ಪರಿಕರ ಮತ್ತು ಸಾಲ ಸೌಲಭ್ಯಗಳಲ್ಲಿನ ಹೆಚ್ಚಳವನ್ನು ಕಂಡುಕೊಳ್ಳಲಾಗಿದೆ. ರಾಸಾಯನಿಕ ಗೊಬ್ಬರ ಬಳಕೆಯಲ್ಲಿ ಹೆಚ್ಚಳವಾಗಿರುವುದು, ಇಳುವರಿಯಲ್ಲಿ ಹೆಚ್ಚಳ, ವಾರಾಬಂದಿಯ ಅಗತ್ಯ, ನೀ.ಬ.ಸ. ಸಂಘಗಳ ಅವಶ್ಯಕತೆ, ಮಾರುಕಟ್ಟೆ ಸೌಲಭ್ಯಗಳನ್ನು ಇನ್ನಷ್ಟು ವಿಸ್ತರಿಸಬೇಕೆಂದು ಸಲಹೆ ಮಾಡಲಾಗಿದೆ.

ಹನುಮಂತರಾವ್ ಸಿ.ಎಚ್. ಮತ್ತು ಅಶೋಕ ಗುಲಾಟಿ (೧೯೯೪) ಇವರು ಭಾರತದ ಕೃಷಿ ಕ್ಷೇತ್ರದಲ್ಲಿ ಹೊರಹೊಮ್ಮುತ್ತಿರುವ ಪರಿಪೇಕ್ಷ್ಯಗಳು ಮತ್ತು ವಿದ್ಯಮಾನಗಳು ಎಂಬ ಲೇಖನದಲ್ಲಿ

ಭಾರತದ ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಹಲವಾರು ಪ್ರಶ್ನೆಗಳನ್ನು ಚರ್ಚಿಸಿದ್ದಾರೆ. ಸರಕಾರದ ಹೂಡಿಕೆಯಿಂದ ಯಾವುದೇ ಧನಾತ್ಮಕ ಪ್ರಗತಿ ಕಾಣದಿರುವ ನೀರಾವರಿ ಕ್ಷೇತ್ರ ನಷ್ಟದಲ್ಲಿಯೇ ಸಾಗುತ್ತಿರುವ ಬಗ್ಗೆ ಕಳವಳ ವ್ಯಕ್ತಪಡಿಸಿದ್ದಾರೆ. ಕನಿಷ್ಠ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ಸಾಕಾಗುವಷ್ಟು ವೆಚ್ಚವನ್ನು ಬಳಕೆದಾರರಿಂದ ಸಂಗ್ರಹಿಸಲು ಸಾಧ್ಯವಾಗದೇ ಇರುವ ವಿಷಯ ರಾಜಕೀಯ ಪ್ರೇರಿತವಾದುದು. ಇಂತಹ ಸನ್ನಿವೇಶ ಭವಿಷ್ಯದ ಗಂಭೀರ ಪರಿಸ್ಥಿತಿಗೆ ಕಾರಣವಾಗಬಲ್ಲದು. ಈ ದಿಶೆಯಲ್ಲಿ ಪರಿಹಾರ ಕ್ರಮವಾಗಿ ಸಾಂಸ್ಥಿಕ ಸುಧಾರಣೆಗಳು ಮೇಲಿನಿಂದ ಕೆಳಗೆ ಹರಿಯುವಂತಿರಬೇಕೆ ಅಥವಾ ತಳಮಟ್ಟದಿಂದ ಮೇಲಕ್ಕೆ ಹರಿಯುವ ಜನಯೋಜನೆಯಾಗಿರಬೇಕೆ ಎಂಬ ಪ್ರಶ್ನೆಗಳನ್ನು ಎತ್ತಿಕೊಂಡು ಯಾವ ಮಾದರಿ ಸೂಕ್ತವಾಗಬಲ್ಲದು ಎಂಬುದನ್ನು ಚರ್ಚೆ ಮಾಡಿದ್ದಾರೆ. ಒಟ್ಟಾರೆ ಈ ಲೇಖನದಿಂದ ನೀರಾವರಿ ಕ್ಷೇತ್ರದಲ್ಲಿನ ವಿಷಮ ಪರಿಸ್ಥಿತಿಯನ್ನು ತಿಳಿದುಕೊಳ್ಳಲು, ಸಮಸ್ಯೆಗಳಿಗೆ ಕಾರಣವಾದ ಸಂಗತಿಗಳನ್ನು ಹಾಗೂ ದೂರದೃಷ್ಟಿಯಿಂದ ಯಾವ ಸುಧಾರಣೆಗಳನ್ನು ಕೈಗೊಳ್ಳಬಹುದೆಂಬುದನ್ನು ಪ್ರಸ್ತುತಪಡಿಸಿದ್ದಾರೆ. ಈ ಅಧ್ಯಯನದಲ್ಲಿ ಬಳಕೆದಾರರ ಸಹಭಾಗಿತ್ವದಲ್ಲಿ ನೀರಾವರಿ ನಿರ್ವಹಣೆಯನ್ನು ಕೈಗೊಳ್ಳಬೇಕೆನ್ನುವುದು ಸರಿ ಎನಿಸಿದರೂ, ಬಳಕೆದಾರರು ಯಾವ ಸಾಮಾಜಿಕ ಹಿನ್ನೆಲೆಯಿಂದ ಬಂದವರು ಮತ್ತು ಆರ್ಥಿಕವಾಗಿ ಅವರ ಅಸಮಾನತೆಗೆ ಕಾರಣವಾದ ಸಂಗತಿಗಳೇನು ಎಂಬ ಬಗ್ಗೆ ಯಾವುದೇ ಮಾಹಿತಿಯಿಲ್ಲದಿರುವುದು ಈ ಲೇಖನದ ಒಂದು ಕೊರತೆ ಎನಿಸುತ್ತದೆ. ಸಮಾನ ಸಾಮಾಜಿಕ ಮತ್ತು ಆರ್ಥಿಕ ಸನ್ನಿವೇಶದಲ್ಲಿ ಒಂದು ಆರೋಗ್ಯಕರವಾದ, ಕಾರ್ಯಕ್ಷಮತೆಯಿಂದ ಕೂಡಿದ, ಪರಿಪೂರ್ಣವಾದ ಪಾಲುಗೊಳ್ಳುವಿಕೆಯನ್ನು ನಿರೀಕ್ಷಿಸಬಹುದು. ಆದರೆ ಈ ಬಗ್ಗೆ ಈ ಲೇಖನದಲ್ಲಿ ಯಾವುದೇ ಮಾಹಿತಿಯಿಲ್ಲವಾಗಿದೆ. ಇದೇ ವಿಚಾರಗಳನ್ನು ಸಿಂಗ್ ಕೆ.ಕೆ. (೧೯೯೨) ಇವರ ಲೇಖನದಲ್ಲಿ ಕಾಣಬಹುದಾಗಿದೆ.

ನವಲವಾಲ ಬಿ.ಎನ್. (೧೯೯೯) ತಮ್ಮ ಲೇಖನದಲ್ಲಿ ದೇಶದ ನೀರಾವರಿಯ ಗರಿಷ್ಟ ಸಾಮರ್ಥ್ಯ ೧೭೪.೯೩ ದಶಲಕ್ಷ ಹೆಕ್ಟೇರ್‌ಗಳೆಂದು ತಿಳಿಸುತ್ತ ೨೦೦೭ ಮತ್ತು ೨೦೨೫ ರ ವೇಳೆಗೆ ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರದ ಸ್ವಾವಲಂಬನೆಗೆ ಜಲಸಂಪನ್ಮೂಲದ ನಿರ್ವಹಣೆಯಲ್ಲಿ ಆಮೂಲಾಗ್ರ ಸುಧಾರಣೆಯಾಗಬೇಕಾದ ಅಗತ್ಯವನ್ನು ವಿವರಿಸಿದ್ದಾರೆ. ಭಾರತದಲ್ಲಿ ೧೯೯೫ ರಲ್ಲಿ ಪ್ರತಿದಿನದ ತಲಾ ಧಾನ್ಯದ ಲಭ್ಯತೆಯು ಕೇವಲ ೫೦೨ ಗ್ರಾಂ ಇರುವುದು ಅತಿ ಕಡಿಮೆ ಎಂದು ತಿಳಿಸುತ್ತಾ ಅಧ್ಯಯನಗಳ ಪ್ರಕಾರ ಈ ಪ್ರಮಾಣ ೬೫೦ ಗ್ರಾಂ ಇರಬೇಕೆನ್ನುವುದನ್ನು ತಿಳಿಸಿದ್ದಾರೆ. ಈ ಮಟ್ಟವನ್ನು ತಲುಪಲು ನೀರಾವರಿ ನಿರ್ವಹಣೆಗೆ ಹೆಚ್ಚು ಗಮನ ನೀಡಬೇಕೆಂದು ಹೇಳಿದ್ದಾರೆ. ೨೦೨೫ ರ ವೇಳೆಗೆ ನಿರ್ವಹಣೆಗೆ ಹೆಚ್ಚು ಗಮನ ನೀಡಬೇಕೆಂದು ಒತ್ತಿ ಹೇಳಿದ್ದಾರೆ. ೨೦೨೫ರ ವೇಳೆಗೆ ೪೫೦ ದ.ಲ. ಟನ್ ಆಹಾರ ಧಾನ್ಯಗಳ ಉತ್ಪಾದನಾ ಗುರಿ ಇಟ್ಟುಕೊಳ್ಳಲಾಗಿದೆ. ಅದೇ ರೀತಿ ಭತ್ತದ ಇಳುವರಿಯ ಪ್ರಮಾಣವನ್ನು ೨ ಟನ್ (ಪ್ರತಿ ಹೆಕ್ಟೆರ್‌ಗೆ)ನಿಂದ ೫ ಟನ್‌ಗೆ ಹೆಚ್ಚಿಸಬೇಕು. ನೀರಾವರಿಯ ತೀವ್ರತೆಯಲ್ಲಿಯು ೧೩.೦% ರಿಂದ ೨೦೨೫ರ ವೇಳೆ ೧೭.೦% ಕ್ಕೆ ಹೆಚ್ಚಿಸಬೇಕೆನ್ನುವುದನ್ನು ತಿಳಿಸಿದ್ದಾರೆ.

ಕೃಷಿ ವಾಣಿಜ್ಯೀಕರಣಗೊಳ್ಳುತ್ತಿರುವ ಈ ಸಂದರ್ಭದಲ್ಲಿ ಮತ್ತು ಹಣಕಾಸಿನ ಮುಗ್ಗಟ್ಟಿನ ಸನ್ನಿವೇಶದಲ್ಲಿ ನೀರಾವರಿ ಸಾಮರ್ಥ್ಯ ನಿರ್ಮಾಣ ವೆಚ್ಚ ಅಧಿಕವಾಗುತ್ತಿರುವುದರಿಂದ ನೀರಾವರಿ ಕ್ಷೇತ್ರ ಕಠಿಣ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಇಂದಿನ ನೀರು ಬಳಕೆಯ ದಕ್ಷತೆ ಕೇವಲ ಶೇ. ೩೮ ರಷ್ಟಿದ್ದು ಇದನ್ನು ಶೇ. ೬೦ ಕ್ಕೆ ಹೆಚ್ಚಿಸುವ ಅಗತ್ಯವಿದೆ. ಈ ಎಲ್ಲ ಕಾರಣಗಳಿಂದ, ನೀರು ನಿರ್ವಹಣೆಯಲ್ಲಿ ಬಳಕೆದಾರರರ ಪಾತ್ರವನ್ನು ೧೯೮೭ರ ರಾಷ್ಟ್ರೀಯ ಜಲನೀತಿಯ ಎಚ್ಚರಿಕೆಯ ಸೂಚನೆಯನ್ನು ನೆನಪು ಮಾಡಿದ್ದಾರೆ. ಈಗಾಗಲೇ ಹಲವಾರು ರಾಜ್ಯಗಳಲ್ಲಿ ನೀ.ಬ ಸಂಘಗಳು ಸ್ಥಾಪನೆಯಾಗಿವೆಯಾದರೂ ಅವುಗಳು ಹೆಚ್ಚು ಕ್ರಿಯಾಶೀಲವಾಗಿಲ್ಲದೇ ಇರುವ ಬಗ್ಗೆ ತಿಳಿಸುತ್ತಾ ಅವುಗಳ ಸಮಸ್ಯೆಗಳನ್ನು ಪಟ್ಟಿ ಮಾಡಿದ್ದಾರೆ.

ಪರಸ್ಪರ ಉತ್ತರದಾಯಿತ್ವದ ಕೊರತೆ, ಕಾನೂನಿನ ಬೆಂಬಲದ ಕೊರತೆ, ಬಳಕೆದಾರರ ಮತ್ತು ನಿಯೋಗಿದಾರರ ಪ್ರವೃತ್ತಿಯಲ್ಲಿ ನಿರ್ಲಿಪ್ತತೆ ಪಾಲುಗೊಳ್ಳುವಿಕೆಯಲ್ಲಿನ ಸಮಸ್ಯೆಗಳು, ನೀ.ಬ. ಸಂಘಗಳಿಗೆ ಇರಬೇಕಾದ ಸ್ವಾಯತ್ತತೆ ಕೊರತೆ, ಸಂಪನ್ಮೂಲ ಸಂಚಯನದಲ್ಲಿನ ಅಡೆತಡೆಗಳು ಅನುಷ್ಠಾನದಲ್ಲಿ ಎಡರು ತೊಡರುಗಳು, ನೀ.ಬ.ಸ. ಸಂಘಗಳಿಗೆ ಬಹುಮುಖಿ ಅವಕಾಶಗಳ ಅಭಾವ ಸರಕಾರಗಳ ಬೆಂಬಲದ ಕೊರತೆ, ಈ ಕೊರತೆಗಳನ್ನು ನೀಗಿಸುವ ಸಲುವಾಗಿ ಮಾದರಿ ಕ್ರಿಯಾ ಸಂಶೋಧನೆಗಳ ಅಗತ್ಯವನ್ನು ಹೇಳಿದ್ದಾರೆ. ಅನೇಕ ರಾಜ್ಯಗಳಲ್ಲಿರುವ ಜಲ ಮತ್ತು ನೆಲ ನಿರ್ವಹಣೆ ಸಂಸ್ಥೆಗಳು ಈ ದಿಶೆಯಲ್ಲಿ ಉತ್ತಮ ಕಾರ್ಯಗಳನ್ನು ನಿರ್ವಹಿಸುತ್ತಿವೆಯಾದರೂ ಇನ್ನಷ್ಟು ಕ್ರಿಯಾಶೀಲವಾಗಬೇಕೆಂದು ಸಲಹೆ ಮಾಡಿದ್ದಾರೆ. ಇದೇ ಪ್ರಕಾರದ ವಿಷಯಗಳನ್ನು ಅಶೋಕ ಗುಲಾತಿ ಮತ್ತು ಇತರರು (೨೦೦೫) ತಮ್ಮ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ.

ಹೀಗೆ ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳನ್ನು ಚರ್ಚಿಸುವ ಅಧ್ಯಯನಗಳು ಹೇರಳವಾಗಿ ಬಂದಿವೆ. ಈ ಸಮಸ್ಯೆಗಳಿಗೆ ಪರಿಹಾರ ಸೂಚಿಸುವಲ್ಲಿ ಇಂತಹ ಅಧ್ಯಯನಗಳು ಆದರ್ಶ ಸಿದ್ಧಾಂತಗಳನ್ನು ರೂಪಿಸುತ್ತವೆ. ಆದರೆ ಭಾರತದಂತಹ ಬಹುಮುಖಿ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಸಿದ್ಧಾಂತಗಳು ಪ್ರಾಯೋಗಿಕವಾಗಿ ಯಶಸ್ಸನ್ನು ಗಳಿಸಿದ್ದು ಕಡಿಮೆ.

ನೀರಿನ ಬಳಕೆ ಮತ್ತು ಹಂಚಿಕೆ ಇಂದು ಜಾಗತಿಕ ನೆಲೆಯಲ್ಲಿ ಒಂದು ಜಟಿಲ ಸಮಸ್ಯೆಯಾಗುತ್ತಿದೆ. ಬಳಕೆದಾರರು ನೀರು ದರ ನೀಡುವಲ್ಲಿ ಅಸಹಕಾರ ತೋರುತ್ತಿರುವುದು ನೀರಾವರಿಯ ಎಲ್ಲಾ ಬಗೆಯ ತೊಡಕುಗಳಿಗೆ ಕಾರಣವಾಗಿದೆ. ಜಲ ಸಂಪನ್ಮೂಲದ ಬೇಡಿಕೆ ದಿನೇದಿನೇ ಹೆಚ್ಚುತ್ತಿರುವುದರಿಂದ ಖಂಡ-ಖಂಡಗಳ ನಡುವೆ ಮತ್ತು ಪ್ರದೇಶ-ಪ್ರದೇಶಗಳ ನಡುವೆ ವಿವಾದಗಳು ಅಧಿಕಗೊಳ್ಳುತ್ತಿವೆ. ಅದು ಅಂತಿಮವಾಗಿ ಪ್ರಪಂಚ ಯುದ್ಧಕ್ಕೆ ದಾರಿ ಮಾಡಿಕೊಡುತ್ತದೆ ಎಂದು ರತ್ನರೆಡ್ಡಿ ವಿ. (೨೦೦೪) ಅವರು ತಮ್ಮ ಪ್ರಬಂಧದಲ್ಲಿ ಎಚ್ಚರಿಸಿದ್ದಾರೆ. ನೀರಿಗಾಗಿ ಭಾರತದಲ್ಲಿ ತನ್ನ ಸ್ವಂತ ಸಹೋದರನ್ನನ್ನೇ ಕೊಲೆ

ಮಾಡುವ, ಜಿಲ್ಲಾಧಿಕಾರಿಗಳ ಮೇಲೆ ಹಲ್ಲೆ ಮಾಡುವ ಮಟ್ಟದ ಹಲವಾರು ಘಟನೆಗಳನ್ನು ಉಲ್ಲೇಖಿಸಿ, ಸಂಕೀರ್ಣತೆಯಿಂದ ಕೂಡಿರುವ ಜಲಸಂಪನ್ಮೂಲವನ್ನು ಅತ್ಯಂತ ಮಿತವಾಗಿ, ದಕ್ಷತೆಯಿಂದ ಬಳಕೆ ಮಾಡಬೇಕಾದ ತುರ್ತು ಅಗತ್ಯವನ್ನು ಮನಗಾಣಿಸಿದ್ದಾರೆ. ಜಲವು ಇಂದು 'ಮತಬ್ಯಾಂಕಿನ' ಅಸ್ತ್ರವಾಗಿ ರಾಜಕೀಯ ಪ್ರಾಬಲ್ಯವನ್ನು ಪಡೆಯುತ್ತಿರುವ ಅಪಾಯವನ್ನು ವಿವರಿಸಿದ್ದಾರೆ. ಜಲಭದ್ರತೆ ಮತ್ತು ಆಹಾರ ಭದ್ರತೆಗಳು ಹೇಗೆ ಪರಸ್ಪರ ಒಂದನ್ನೊಂದು ಅವಲಂಬಿಸಿವೆ ಎನ್ನುವುದನ್ನು ವಿಶ್ಲೇಷಿಸಿ, ಜಲಸಂರಕ್ಷಣೆ ಮತ್ತು ಜಲನಿರ್ವಹಣೆಯಲ್ಲಿ ಪ್ರಜಾಸಮುದಾಯಗಳು ಪ್ರಭುತ್ವ ಮತ್ತು ಸರಕಾರೇತರ ಸಂಸ್ಥೆಗಳು ಹೇಗೆ ಪಾತ್ರವಹಿಸಬೇಕೆಂದು ತಿಳಿಸಿದ್ದಾರೆ. ಬಳಕೆದಾರರ ನೆಲೆಯಲ್ಲಿ ಸಮಸ್ಯೆಗಳನ್ನು ಇತ್ಯರ್ಥಪಡಿಸಿಕೊಳ್ಳಬೇಕೆಂದು ಸಲಹೆ ಮಾಡಿದ್ದಾರೆ.

### ೩.೨. ಬೆಳೆ ಮಾದರಿ ಮತ್ತು ನೀರು ದರ ಕುರಿತ ಅಧ್ಯಯನಗಳು

ಅಶೋಕ ಕೆ. ಮಿತ್ರ (೧೯೯೮) ಮಹಾರಾಷ್ಟ್ರದಲ್ಲಿ ಭಾರಿ ಮತ್ತು ಮಧ್ಯಮ ನೀರಾವರಿಯ ಅಭಿವೃದ್ಧಿ ಮತ್ತು ನಿರ್ವಹಣೆ ಕುರಿತಾದ ಪ್ರಬಂಧದಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿನ ನೀರಾವರಿಯ ಗರಿಷ್ಠ ಸಾಮರ್ಥ್ಯ ಮತ್ತು ಬಳಕೆಯ ನಡುವಿನ ಅಂತರವನ್ನು ಗುರುತಿಸಿದ್ದಾರೆ. ಆನುಷಂಗಿಕ ಮಾಹಿತಿಯನ್ನು ಆಧರಿಸಿದ ಈ ಪ್ರಬಂಧದಲ್ಲಿ ಅಚ್ಚುಕಟ್ಟು ಪ್ರದೇಶಗಳಲ್ಲಿ ಅಧಿಕ ನೀರು ಬೇಡುವ ಬೆಳೆಗಳಾದ ಭತ್ತ ಮತ್ತು ಕಬ್ಬು ಮೇಲುಗೈ ಸಾಧಿಸಿರುವುದನ್ನು ಕಂಡುಕೊಂಡಿದ್ದಾರೆ. ಅತಿ ನೀರಾವರಿ ಬೆಳೆಗಳಿಗೆ ಗರಿಷ್ಠ ಮಹತ್ವ ನೀಡಿರುವುದನ್ನು ಬೆಳೆ ಮಾದರಿಯಲ್ಲಿ ವೈವಿಧ್ಯತೆ ಇಲ್ಲದೇ ಇರುವ ಸ್ಥಿತಿಯನ್ನು ಗುರುತಿಸಿದ್ದಾರೆ. ಬೆಳೆಯ ಮಾದರಿ ಪಾಲನೆಯಾಗದೇ ಇರುವುದು ಅಧ್ಯಯನದಿಂದ ದೃಢಪಟ್ಟಿದೆ. ಈ ಪ್ರಬಂಧದಲ್ಲಿ ಕಾರ್ಯಾಚರಣೆ ಮತ್ತು ನಿರ್ವಹಣೆಯ ಹಂತದಲ್ಲಿ ಕಂಡುಬರುವ ಹಲವಾರು ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಇದರೊಂದಿಗೆ ವಿವಿಧ ಹಣಕಾಸಿನ ಆಯೋಗಗಳು, ನೀರಾವರಿ ಆಯೋಗಗಳು, ಸಾರ್ವಜನಿಕ ಲೆಕ್ಕಪತ್ರ ಸಮಿತಿ ಸರಕಾರ ನೀರಾವರಿಯಲ್ಲಿ ತೊಡಗಿಸಿದ ಬಂಡವಾಳಕ್ಕೆ ಪ್ರತಿಯಾಗಿ ಫಲಾನುಭವಿಗಳಿಂದ ಯಾವುದೇ ತ್ಯಾಗ ಸಾಧ್ಯವಾಗದೇ ಇರುವುದು, ನಿರ್ಮಾಣಗೊಂಡಿರುವ ನೀರಾವರಿ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡಲು ಬೇಕಾಗಿರುವ ಕಾರ್ಯಾಚರಣೆ ಮತ್ತು ನಿರ್ವಹಣೆಯ ವೆಚ್ಚವನ್ನು ಸಂಗ್ರಹಿಸಲು ಸಾಧ್ಯವಾಗದಿರುವ ಬಗ್ಗೆ ಸರ್ಕಾರಗಳಿಗೆ ಎಚ್ಚರಿಕೆಯನ್ನು ನೀಡುತ್ತಲೇ ಬಂದಿರುವ ಬಗ್ಗೆ ವಿವರಿಸಲಾಗಿದೆ.

ನೀರಾವರಿ ಕ್ಷೇತ್ರದಲ್ಲಿನ ಸಂಕೀರ್ಣ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಾ ಈ ಬಗ್ಗೆ ಇನ್ನಷ್ಟು ಚರ್ಚೆ ಸಂವಾದ ಹಾಗೂ ಅನ್ವೇಷಣೆಗಳು ನಡೆಯಬೇಕಾದ ಅಗತ್ಯವನ್ನು ಪ್ರಸ್ತುತ ಅಧ್ಯಯನದಲ್ಲಿ ಪ್ರತಿಪಾದಿಸ ಲಾಗಿದೆ. ನೀರಾವರಿಯ ನೀರನ್ನು ಒಂದು ಸಾರ್ವಜನಿಕ ಸರಕು ಎಂದು ಪರಿಗಣಿಸಿರುವುದೇ ಎಲ್ಲಾ ರೀತಿ ದುಂದುಗಾರಿಕೆ ಮತ್ತು ಅಪವ್ಯಯಕ್ಕೆ ಕಾರಣವಾಗಿದ್ದು, ಅದನ್ನು 'ಬಳಕೆದಾರರ ಆಧಾರಿತ ಸರಕ'ನ್ನಾಗಿ

ಪರಿಗಣಿಸಬೇಕೆಂದೂ, ಆ ಮೂಲಕ ಅದಕ್ಕೆ ತಗಲುವ ವೆಚ್ಚವನ್ನು ಫಲಾನುಭವಿಗಳಿಂದ ಪಡೆಯಬೇಕೆಂದು ವಾದಿಸಲಾಗಿದೆ. ಇದನ್ನು ಪಡೆಯಬೇಕಾದರೆ ನೀರಾವರಿ ನಿರ್ವಹಣೆಗೆ ಒಂದು ಸಾಂಸ್ಥಿಕ ಚೌಕಟ್ಟನ್ನು ರಚಿಸುವ ಅವಶ್ಯಕತೆಯನ್ನು ಸೂಚಿಸುತ್ತಾ, ಇದಕ್ಕೆ ಬಳಕೆದಾರರ ಉತ್ತಮ ಸಹಕಾರ ಮತ್ತು ಸಹಯೋಗ ಹಾಗೂ ರಾಜಕೀಯ ಇಚ್ಛಾಶಕ್ತಿಯ ಅಗತ್ಯವನ್ನು ಹೇಳಲಾಗಿದೆ.

ತುಂಗಭದ್ರಾ ಅಚ್ಚುಕಟ್ಟು ಪ್ರದೇಶದ ಎಡದಂಡೆ ನಾಲೆಯ ವ್ಯಾಪ್ತಿಯಲ್ಲಿ ಬೆಳೆಯ ಪದ್ಧತಿಯನ್ನು ಆರ್ಥಿಕ ವಿಶ್ಲೇಷಣೆ ಮಾಡಲಾಗಿದೆ (ಗೋವರ್ಧನರಾವ್ - ೧೯೯೮). ಈ ಪ್ರದೇಶದಲ್ಲಿ ಮುಖ್ಯವಾಗಿ ಭತ್ತ ಮತ್ತು ಹತ್ತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಕಾಲುವೆಯ ಮೇಲ್ತುದಿಯ ರೈತರು ಶೇ. ೮೬ ರಷ್ಟು ಭತ್ತವನ್ನು ಬೆಳೆಯುತ್ತಾರೆ. ಇದಕ್ಕೆ ವಿರುದ್ಧವಾಗಿ ಕಾಲುವೆ ಕೆಳತುದಿ ರೈತರು ಶೇ. ೪.೭೦ ರಷ್ಟು ಮಾತ್ರ ಭತ್ತ ಬೆಳೆಯುತ್ತಿದ್ದು, ಉಳಿದಂತೆ ಹತ್ತಿ ಮತ್ತು ಇತರೆ ಅರೆ ನೀರಾವರಿ ಬೆಳೆಗಳನ್ನು ಬೆಳೆಯುವುದು ತಿಳಿದುಬಂದಿದೆ. ಅಧ್ಯಯನದಲ್ಲಿ ವಿವಿಧ ಭಾಗದಲ್ಲಿ ರೈತರು ಬೆಳೆಯುವ ಬೆಳೆಗಳ ಇಳುವರಿ ಪ್ರಮಾಣವನ್ನು ಅಳತೆ ಮಾಡಲಾಗಿದೆ. ಅದರ ಪ್ರಕಾರ ಮೇಲ್ತುದಿ ಮತ್ತು ಮಧ್ಯಭಾಗದಲ್ಲಿ ಇಳುವರಿ ಕಡಿಮೆಯಿದ್ದು ಕೆಳತುದಿಯಲ್ಲಿ ಇಳುವರಿ ಹೆಚ್ಚಾಗಿರುವುದು ಕಂಡುಬಂದಿದೆ. ಅಂದರೆ ಅಧಿಕ ನೀರಿನಿಂದ ಹೆಚ್ಚು ಇಳುವರಿ ಸಾಧ್ಯವಿಲ್ಲ ಎನ್ನುವುದನ್ನು ಕಂಡುಕೊಳ್ಳಲಾಗಿದೆ. ಸಣ್ಣ ರೈತರಿಗೆ ಅಧಿಕ ವೆಚ್ಚ ತಗಲುವುದರಿಂದ ಅವರ ಆದಾಯ ಕಡಿಮೆಯಿದ್ದು, ದೊಡ್ಡ ರೈತರಿಗೆ ಹೆಚ್ಚಿನ ಆದಾಯವಿರುವುದನ್ನು ಗುರುತಿಸಲಾಗಿದೆ.

ಕಾಲುವೆಯ ಮೇಲ್ತುದಿಯಲ್ಲಿ ಹೆಚ್ಚಿನ ನೀರು ಬಳಕೆ ಮಾಡುತ್ತಿರುವುದರಿಂದ ಅಧಿಕ ಸಾಗುವಳಿ ಭೂಮಿ ಸವಳು. ಜೌಗು ಮತ್ತು ಕ್ಷಾರೀಯತೆಗೆ ಸಿಲುಕಿದೆ. ಬಸಿಗಾಲುವೆಗಳೇ ಇಲ್ಲದಿರುವುದರಿಂದ ಮತ್ತು ರೈತರ ನೀರಿನ ವ್ಯಾಮೋಹ ಹೆಚ್ಚಾಗಿರುವುದರಿಂದ ಈ ಸಮಸ್ಯೆ ಉಂಟಾಗಿದೆ ಎನ್ನುವ ತೀರ್ಮಾನಕ್ಕೆ ಬರಲಾಗಿದೆ. ಇದರಿಂದ ಕೆಳತುದಿ ರೈತರಿಗೆ ನೀರಿನ ಅಭಾವ ಉಂಟಾಗಿ ಅವರ ಆರ್ಥಿಕ ದುಸ್ಥಿತಿಗೆ ಕಾರಣವಾಗಿರುವುದನ್ನು ಗುರುತಿಸಲಾಗಿದೆ. ಏಕಬೆಳೆ ಪದ್ಧತಿಯನ್ನು ನಿವಾರಿಸಿದಾಗ ಕೆಲಮಟ್ಟಿನ ಸುಧಾರಣೆ ಸಾಧ್ಯ. ಅಕ್ರಮ ನೀರಾವರಿಯನ್ನು ತಡೆಗಟ್ಟಿದರೆ ಮಾತ್ರ ಕೆಳತುದಿ ರೈತರಿಗೆ ನೀರು ಪೂರೈಸಲು ಸಾಧ್ಯ ಎಂದು ನೀರು ವಂಚಿತ ರೈತರು ವಾದಿಸುತ್ತಾರೆ. ಈ ಬಗ್ಗೆ ಕಟ್ಟುನಿಟ್ಟಿನ ಕಾನೂನು ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಸಲಹೆ ಮಾಡಲಾಗಿದೆ.

ಭದ್ರಾ ಅಚ್ಚುಕಟ್ಟು ಪ್ರದೇಶದ ಮೇಲ್ಮೈ ಜಲದ ಬೆಲೆ ನಿಗದೀಕರಣ ಕುರಿತ ಅರ್ಥಶಾಸ್ತ್ರೀಯ ಅಧ್ಯಯನ ಮಾಡಲಾಗಿದೆ (ರವಿ ಬಿ.ಎಂ.-೨೦೦೧). ಅಧ್ಯಯನದ ಮುಖ್ಯವಾಗಿ ಭದ್ರಾ ಜಲಾಶಯ ಯೋಜನೆಯ ಗರಿಷ್ಠ ನೀರಾವರಿ ನಿರ್ಮಾಣ ಸಾಮರ್ಥ್ಯವನ್ನು ಕಾರ್ಯಾಚರಣೆ ಮತ್ತು ನಿರ್ವಹಣೆಗೆ ತಗಲುವ ವೆಚ್ಚವನ್ನು ಲೆಕ್ಕ ಹಾಕಲಾಗಿದೆ, ಇದು ವಾರ್ಷಿಕ ೪೪೧.೧೧ ಲಕ್ಷ ರೂ.ಗಳಾಗುತ್ತದೆ. ಆದರೆ ನೀರು ದರದಿಂದ ಕೇವಲ ೩೫೭.೬೧ ಲಕ್ಷಗಳು ಮಾತ್ರ ವಸೂಲಿಯಾಗುತ್ತಿರುವುದನ್ನು ಉಲ್ಲೇಖಿಸಲಾಗಿದೆ.

ಜಲಾಶಯ ಮತ್ತು ಅಚ್ಚುಕಟ್ಟು ಪ್ರದೇಶ ನಿರ್ಮಾಣಕ್ಕೆ ತಗಲುವ ವಾರ್ಷಿಕ ಸ್ಥಿರ ವೆಚ್ಚವನ್ನು ಐತಿಹಾಸಿಕ ಬೆಲೆಗಳಲ್ಲಿ ರೂ. ೨೧೪೩ ಲಕ್ಷವೆಂದು ಲೆಕ್ಕ ಹಾಕಲಾಗಿದೆ. ಕಾರ್ಯಾಚರಣೆ ಮತ್ತು ನಿರ್ವಹಣೆ ವೆಚ್ಚದೊಂದಿಗೆ ಸ್ಥಿರ ವೆಚ್ಚವನ್ನು ಸೇರಿಸಿದರೆ ನೀರು ದರದಿಂದ ಸಂಗ್ರಹಿಸುವ ಮೊತ್ತ ಕೇವಲ ಶೇ. ೬.೨೨ ರಷ್ಟು ಮಾತ್ರವಾಗುತ್ತದೆ. ಕಾಲುವೆಯ ಮೇಲ್ತುದಿ ರೈತರಿಗೆ ಭತ್ತ ಬೆಳೆಯಲು ಅಧಿಕ ವೆಚ್ಚ ತಗಲುತ್ತದೆ ಮತ್ತು ಅದರಿಂದ ಅವರಿಗೆ ದೊರೆಯುವ ಆದಾಯ-ವೆಚ್ಚ ಅನುಪಾತವೂ ಕಡಿಮೆಯಿರುತ್ತದೆ. ಆದರೆ ಕೆಳತುದಿ ರೈತರಿಗೆ ಇದಕ್ಕೆ ವ್ಯತಿರಿಕ್ತವಾಗಿ ವೆಚ್ಚ ಕಡಿಮೆಯಾಗಿ ಲಾಭ ಹೆಚ್ಚು ದೊರೆಯುತ್ತದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಒಂದು ಕುತೂಹಲದ ಸಂಗತಿಯೆಂದರೆ ನೀರಾವರಿಯಿಂದ ಮೇಲ್ತುದಿ ಮತ್ತು ಕೆಳತುದಿ ರೈತರಿಗೆ ಹೆಚ್ಚಿನ ಪ್ರತಿಫಲ ದೊರೆತರೆ ಮಧ್ಯಭಾಗದ ರೈತರಿಗೆ ಕಡಿಮೆ ಪ್ರತಿಫಲ ಸಿಗುತ್ತಿರುವುದು ತಿಳಿದುಬಂದಿದೆ. ಕಾಲುವೆಯ ಮೇಲ್ತುದಿ ರೈತರು ಭತ್ತದ ಬೆಳೆಗೆ ಪ್ರತಿ ಎಕರೆಗೆ ೧೧೯.೨ ಇಂಚುಗಳ ನೀರು ಬಳಕೆ ಮಾಡಿದರೆ ಕೆಳತುದಿ ರೈತರು ನೀರಾವರಿ ತಜ್ಞರು ಶಿಫಾರಸ್ಸು ಮಾಡಿರುವಂತೆ ೫೦ ಇಂಚು ನೀರನ್ನು ಮಾತ್ರ ಬಳಸುತ್ತಾರೆ. ಕಾಲುವೆಯ ವಿವಿಧ ಭಾಗಗಳ ನೀರು ಬಳಕೆಯ ಸಾಮಾಜಿಕ ವೆಚ್ಚವನ್ನು ಲೆಕ್ಕ ಹಾಕಲಾಗಿದ್ದು ಪ್ರತಿ ಎಕರೆಗೆ ಮೇಲ್ತುದಿ ರೈತರು ರೂ.೮೯.೬, ಮಧ್ಯಭಾಗದ ರೈತರು ರೂ. ೨೮೨.೧ ಮತ್ತು ಕೆಳತುದಿ ರೈತರು ರೂ. ೨೯.೯೦ ನೀಡಬೇಕಾಗುತ್ತದೆ. ಹೀಗೆ ಅತಿಯಾದ ನೀರು ಬಳಕೆದಾರರಿಗೆ ಮತ್ತು ಅಲ್ಪ ನೀರು ಬಳಕೆದಾರರಿಗೆ ಏಕರೂಪದ ನೀರು ದರ ವಿಧಿಸುವುದು ನ್ಯಾಯ ಸಮ್ಮತವಲ್ಲ ಎಂದು ರೈತರು ಪ್ರತಿಕ್ರಿಯಿಸಿದ್ದಾರೆ. ರೈತರ ಸಾಗುವಳಿ ಜಮೀನಿಗೆ ನಿಗದಿತ ಸಮಯಕ್ಕೆ ಸಾಕಷ್ಟು ನೀರನ್ನು ಪೂರೈಸಿದರೆ ರೈತರು ಪ್ರತಿ ಎಕರೆಗೆ ರೂ. ೧೦೦ ರಿಂದ ರೂ. ೩೦೦ ಕೊಡಲು ಸಿದ್ಧರಿದ್ದಾರೆ. ನೀರು ದರ ನೀಡುವ ಇಚ್ಛೆ ಜಲಾಶಯದ ದೂರ ಹೆಚ್ಚಿದಂತೆ ಅಧಿಕವಾಗುತ್ತದೆ. ಆದುದರಿಂದ ಬಳಕೆದಾರರ ಸಹಭಾಗಿತ್ವದಲ್ಲಿ ನೀರಾವರಿ ನಿರ್ವಹಣೆಯನ್ನು ಕೈಗೊಂಡರೆ ಹೆಚ್ಚಿನ ಪ್ರಗತಿ ಸಾಧ್ಯವೆಂದು ಸಲಹೆ ಮಾಡಲಾಗಿದೆ.

### ೩.೩. ನೀರಾವರಿ ನಿರ್ವಹಣೆಯ ಹಸ್ತಾಂತರ

ಬ್ರೇವರ್ ಮತ್ತು ಇತರರು (೧೯೯೧) ನೀರಾವರಿ ನಿರ್ವಹಣೆಯು ಜಾಗತಿಕವಾಗಿ ಸರ್ಕಾರಿ ಏಜೆನ್ಸಿಗಳಿಂದ ಖಾಸಗಿ, ಸ್ಥಳೀಯ ವ್ಯಕ್ತಿಗಳಿಗೆ ಅಥವಾ ಸಂಘ ಸಂಸ್ಥೆಗಳಿಗೆ ಹಸ್ತಾಂತರವಾಗುತ್ತಿರುವ ಬಗೆಯನ್ನು ವಿವರಿಸಿದ್ದಾರೆ. ಈ ಪುಸ್ತಕದಲ್ಲಿ ನೀರು ಬಳಕೆದಾರರ ಸಂಸ್ಥೆಗಳು ನಿರ್ವಹಿಸಬೇಕಾದ ಐದು ಕಾರ್ಯಗಳನ್ನು ನೀರು ವಿತರಣೆ, ನಿರ್ವಹಣಾ ವೆಚ್ಚ ಮತ್ತು ಇತರ ವೆಚ್ಚಗಳನ್ನು ಭರಿಸಲು ಅಗತ್ಯವಾದ ಸಂಪನ್ಮೂಲ ಸಂಚಯನ, ಇತರ ರಾಜ್ಯಗಳೊಂದಿಗಿನ ಜಲವಿವಾದಗಳನ್ನು ಬಗೆಹರಿಸಲು ನ್ಯಾಯಾಲಯದ ನೆರವು ಪಡೆಯುವುದು, ನೀರು ಹಂಚಿಕೆಯ ನಿಯಮಗಳ ಜಾರಿ, ಸಂಪನ್ಮೂಲ ಸಂಚಯನ ಮೊದಲಾದವುಗಳನ್ನು ಗುರುತಿಸಲಾಗಿದೆ. ಈ ಕೃತಿಯಲ್ಲಿ ಭಾರತದ ನೀರಾವರಿಯ ಸಾಮಾನ್ಯ ಲಕ್ಷಣಗಳನ್ನು ವಿವರಿಸಲಾಗಿದೆ

ಮತ್ತು ನೀರಾವರಿ ಹಂಚಿಕೆಯ ವಾರಾಬಂದಿ, ಸೇಜ್‌ಪಾಲಿ ಭೂವರ್ಗಗಳು ಮತ್ತು ನೀರಾವರಿ ಖಾತ್ರಿ ಪ್ರದೇಶವೆಂಬ ತತ್ವಗಳನ್ನು ಚರ್ಚಿಸಲಾಗಿದೆ. ಜಲನಿರ್ವಹಣೆಯ ವರ್ಗಾವಣೆಗೆ ಅಗತ್ಯವಾದ ಸಂಗತಿಗಳನ್ನು ಗುರುತಿಸಿ, ಅದನ್ನು ಮೌಲ್ಯಮಾಪನ ಮಾಡುವ ಅಂಶಗಳ ಬಗ್ಗೆ ವಿವರಿಸಲಾಗಿದೆ. ಒಟ್ಟಾರೆ ನೀರಾವರಿ ನಿರ್ವಹಣೆಯ ವರ್ಗಾವಣೆಯು ಸದ್ಯ ನಿರೀಕ್ಷಿತ ಪ್ರತಿಫಲ ನೀಡದೇ ಇದ್ದರೂ ಮುಂದೆ ಉತ್ತಮ ಸಾಧನೆಯನ್ನು ಕಾಣಬಹುದೆಂದು ಆಶಿಸಲಾಗಿದೆ.

ಭಾರತದ ಮಟ್ಟಿಗೆ ಬಳಕೆದಾರರ ಪಾಲುಗೊಳ್ಳುವಿಕೆ ಏನೆಲ್ಲ ಪ್ರಯತ್ನ ಪ್ರಯೋಗಗಳನ್ನು ಕೈಗೊಂಡಿದ್ದರೂ ಒಟ್ಟಾರೆ ಬದಲಾವಣೆ ಅಷ್ಟೇನು ತೃಪ್ತಿಕರವಾಗಿಲ್ಲದಿರುವುದನ್ನು ವಿವಿಧ ರಾಜ್ಯಗಳಲ್ಲಿನ ವಿಷಯಾಧ್ಯಯನಗಳಿಂದ ತಿಳಿದು ಬಂದಿದೆ. ಭಾರತದ ಮೇಲ್ಮೈ ಜಲದ ನಿಯಂತ್ರಣ ರಾಜ್ಯ ಸರ್ಕಾರಗಳ ವ್ಯಾಪ್ತಿಗೆ ಬರುವುದರ ಬಗ್ಗೆ ವಿವರಿಸುತ್ತಾ ಬಹುತೇಕ ರಾಜ್ಯಗಳಲ್ಲಿ ನೀರಾವರಿ ಇಲಾಖೆಗಳೇ ನಿರ್ವಹಣೆಯ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿವೆ. ನೀರು ದರದಿಂದ ಕನಿಷ್ಟ ಕಾರ್ಯಾಚರಣೆ ಮತ್ತು ನಿರ್ವಹಣೆ ವೆಚ್ಚವನ್ನು ಭರಿಸಲು ಸಾಧ್ಯವಾಗದ ಸ್ಥಿತಿಯನ್ನು ವಿವರಿಸಲಾಗಿದೆ.

ಬ್ರೇವರ್ ಮತ್ತು ಇತರರು (೧೯೯೯) ತಮ್ಮ ಗ್ರಂಥದಲ್ಲಿ ಭಾರತದಲ್ಲಿ ನೀರಾವರಿ ನಿರ್ವಹಣೆ ಹಸ್ತಾಂತರ ನೀತಿಗಳು, ಪ್ರಕ್ರಿಯೆಗಳು ಮತ್ತು ಕಾರ್ಯದಕ್ಷತೆಯನ್ನು ವಿಷಯವನ್ನಾಗಿಸಿಕೊಂಡು, ೨೧ ವಿಷಯಾಧ್ಯಯನಗಳ ಸಹಿತ ಸಮಗ್ರ ವಿಶ್ಲೇಷಣೆ ಮಾಡಿದ್ದಾರೆ.

ಸರಿಸುಮಾರು ಎಲ್ಲಾ ರಾಜ್ಯಗಳಲ್ಲಿ ನೀರಾವರಿ ಇಲಾಖೆಗಳು ಹಣಕಾಸನ್ನು ಖಜಾನೆಗಳ ಮೂಲಕವೇ ಪಡೆಯುತ್ತಿವೆ. ನೀರು ದರ ಕಂದಾಯ ಇಲಾಖೆಗೆ ಸೇರುವುದರಿಂದ ವೆಚ್ಚ ಮತ್ತು ಆದಾಯವನ್ನು ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಇಲ್ಲಿಯ ತನಕ ನಡೆದ ಅನೇಕ ಅಧ್ಯಯನಗಳ ಪ್ರಕಾರ ಎಲ್ಲಾ ರಾಜ್ಯಗಳಲ್ಲಿ ಹೊಲಗಾಲುವೆ ಮತ್ತು ಬಸಿಗಾಲುವೆ ವ್ಯವಸ್ಥೆ ಹಾನಿಗೆ ಈಡಾಗಿದ್ದು ಎಲ್ಲಾ ರೀತಿಯ ಸಮಸ್ಯೆಗಳಿಗೆ ಕಾರಣವಾಗಿದೆ. ಈ ಅವ್ಯವಸ್ಥೆಯನ್ನು ಸುಧಾರಿಸಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ದಿಟ್ಟ ಕ್ರಮಗಳನ್ನು ಕೈಗೊಳ್ಳಬೇಕೆಂಬ ಸಲಹೆಯನ್ನು ಈ ಅಧ್ಯಯನ ನೀಡಿದೆ. ಇದೇ ರೀತಿ ಅಶೋಕ್ ಗುಲಾತಿ ಮತ್ತು ಇತರರು (೨೦೦೫) ಗುಜರಾತ್ ಮತ್ತು ಕರ್ನಾಟಕ ನೀರಾವರಿ ನಿರ್ವಹಣೆಯಲ್ಲಿ ಬಳಕೆದಾರರರ ಪಾತ್ರವನ್ನು ಚರ್ಚೆ ಮಾಡಿದ್ದಾರೆ.

ಕೈತ್ ಓಬಿಲಿತಸ್ ಮತ್ತು ಇತರರು (೧೯೯೯) ಆಂಧ್ರಪ್ರದೇಶದಲ್ಲಿ ನೀರಾವರಿ ನಿರ್ವಹಣೆ ರೈತರಿಗೆ ಹಸ್ತಾಂತರ ಎನ್ನುವ ವಿಷಯದ ವಿಶ್ವಬ್ಯಾಂಕಿನ ತಾಂತ್ರಿಕ ಪತ್ರಿಕೆಯಲ್ಲಿ ಹಲವಾರು ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. ನೀರಾವರಿ ವ್ಯವಸ್ಥೆ ಸುಧಾರಣೆಗೆ ಗುರಿಯಾಗಿರುವುದನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಆಂಧ್ರಪ್ರದೇಶ ಸರ್ಕಾರ ೧೯೯೭ರ ನೀರಾವರಿ ಕಾಯ್ದೆ ಒಂದು ಕ್ರಾಂತಿಕಾರಿ ಬೆಳವಣಿಗೆ ಯನ್ನು ಹುಟ್ಟು ಹಾಕಿದೆ. ಸುಧಾರಣೆಗೆ ಮುಂಚಿನ ನೀರಾವರಿ ವ್ಯವಸ್ಥೆಯ ಸ್ಥಿತಿಗತಿಯನ್ನು ಪ್ರಥಮ

ಭಾಗದಲ್ಲಿ ಆಮೂಲಾಗ್ರವಾಗಿ ಚರ್ಚಿಸಿ ನೀರಾವರಿ ಕ್ಷೇತ್ರ ಹೇಗೆ ವಿಷಮತ್ತಕ್ಕೆ ಸಿಲುಕಿದೆ ಎಂಬುದನ್ನು ಚಿತ್ರಿಸಲಾಗಿದೆ. ಹಣಕಾಸಿನ ನಿಧಿಗಳ ಕೊರತೆಯು ನೀರಾವರಿಯ ಮೂಲ ಸೌಕರ್ಯಗಳು ಹಾಳಾಗಲು ಕಾರಣವಾಗಿದ್ದು, ಅದು ರೈತರ ಅತೃಪ್ತಿಗೆ ಅವಕಾಶವಾಗಿ ಅಂತಿಮವಾಗಿ ವ್ಯವಸ್ಥೆ ಸರಿಯಾಗದೆ ನೀರು ದರ ಪಾವತಿಗೆ ಸಿದ್ಧರಿಲ್ಲದ ಪರಿಸ್ಥಿತಿ ಉಂಟಾಗಿರುವುದನ್ನು ವಿವರಿಸಲಾಗಿದೆ.

ಇಂತಹ ವಿಷವರ್ತುಲದಿಂದ ಹೊರಬರಲು ಆಂಧ್ರಪ್ರದೇಶ ಸರ್ಕಾರ ಈ ವಿಷಯದ ಬಗ್ಗೆ ಒಂದು ಶ್ವೇತಪತ್ರವನ್ನು ಹೊರಡಿಸಿ ಹೊಸದಾದ ನೀರಾವರಿ ಕಾಯ್ದೆಯನ್ನು ಅನುಷ್ಠಾನಕ್ಕೆ ತಂದಿತು. ಈ ಕಾಯ್ದೆಯ ಪ್ರಕಾರ ಎಲ್ಲ ಪ್ರಕಾರದ ನೀರಾವರಿ ವ್ಯವಸ್ಥೆಯಲ್ಲಿ ಬಳಕೆದಾರನು ನೀರಾವರಿ ಸಂಘದ ಸದಸ್ಯನಾಗಬೇಕೆಂಬ ಕಡ್ಡಾಯ ಈ ಕಾಯ್ದೆಯಲ್ಲಿದೆ. ಆದುದರಿಂದ ಸಣ್ಣ, ಮಧ್ಯಮ ಮತ್ತು ಭಾರಿ ನೀರಾವರಿ ವ್ಯವಸ್ಥೆಗಳಲ್ಲಿ ಸುಮಾರು ೧೦ ಸಾವಿರಕ್ಕೂ ಹೆಚ್ಚಿನ ಸಂಘಗಳು ಆರಂಭದಲ್ಲಿಯೇ ಅಸ್ತಿತ್ವಕ್ಕೆ ಬಂದವು.

ಮೂರನೇ ಭಾಗದಲ್ಲಿ ನೀರು ದರ ಪರಾಮರ್ಶೆ ಸಮಿತಿಗಳ ನೇಮಕ ಮಾಡಿ ಆ ಸಂಘಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ನೀಡಿರುವ ಬಗ್ಗೆ ಚರ್ಚೆಯಿದೆ. ನೀರಾವರಿ ಕ್ಷೇತ್ರದ ಸುಧಾರಣಾ ನೀತಿ ಬಗ್ಗೆ ವಿವರಣೆಯಿದೆ. ನಂತರ ನೀರು ಬಳಕೆದಾರರ ಸಂಘಗಳ ಕಾರ್ಯಕ್ಷಮತೆ, ಸಂಘದ ಅಧ್ಯಕ್ಷರು ಮತ್ತು ಅವರ ಆಯ್ಕೆ ಭೂಹಿಡುವಳಿಗಳ ಬಗ್ಗೆ ಕೋಷ್ಟಕಗಳ ಮೂಲಕ ವಿವರಿಸಲಾಗಿದೆ. ಬಳಕೆದಾರರ ಸಂಘಗಳ ಸ್ಥಾಪನೆಯ ನಂತರ ನೀರಾವರಿ ನಿರ್ವಹಣೆಯಲ್ಲಿ ಕಂಡು ಬಂದ ಬದಲಾವಣೆಗಳನ್ನು ವಿಶ್ಲೇಷಣೆ ಮಾಡಲಾಗಿದೆ. ನೀರು ಬಳಕೆದಾರರ ಸಂಘಗಳಲ್ಲಿ ಜಾತಿವಾರು ಅಧ್ಯಕ್ಷರ ಪಟ್ಟಿಯನ್ನು ಶೇಕಡವಾರು ನೀಡಲಾಗಿದ್ದು, ಪರಿಶಿಷ್ಟರ ಪ್ರಮಾಣ ಕೇವಲ ಶೇ.೫ ರಷ್ಟಿದ್ದು ಹಿಂದುಳಿದ ವರ್ಗಗಳ ಪ್ರಮಾಣ ಪ್ರತಿಶತ ೩೧ ರಷ್ಟಿರುವುದು ಕಂಡುಬಂದಿದೆ.

ಲಿಂಗಸಂಬಂಧಿ ವಿಷಯವನ್ನು ಪ್ರಸ್ತಾಪಿಸುತ್ತಾ ಸಂಘಗಳಲ್ಲಿ, ಮಹಿಳೆಯರಿಗೆ ಅತಿ ಕಡಿಮೆ ಪ್ರಾತಿನಿಧ್ಯ ಹೊಂದಿರುವ ಬಗ್ಗೆ ವಿವರಣೆಯಿದೆ. ಆರಂಭದಲ್ಲಿ ಈ ಪ್ರಮಾಣ ಕಡಿಮೆಯಿದ್ದು ಭವಿಷ್ಯದಲ್ಲಿ ಆ ಪ್ರಮಾಣ ಹೆಚ್ಚಾಗುವ ನಿರೀಕ್ಷೆ ವ್ಯಕ್ತವಾಗಿದೆ. ಸುಧಾರಣೆ ಕಾರ್ಯಕ್ರಮ ಯಶಸ್ವಿಯಾಗಲು ಭವಿಷ್ಯದಲ್ಲಿ ಬೇಕಾಗುವ ಸಂಗತಿಗಳ ಕುರಿತು ಚರ್ಚಿಸಲಾಗಿದೆ. ಮುಖ್ಯವಾಗಿ ಬಳಕೆದಾರರ ಸಂಘಗಳ ಏಳಿಗೆಗೆ ದರ್ಶನಯುಕ್ತ ನಾಯಕತ್ವ, ಸುಧಾರಣಾಯುಕ್ತ ಪ್ರಣಾಳಿಕೆ, ರಾಜಕೀಯ ಇಚ್ಛಾಶಕ್ತಿ ಅತಿಮುಖ್ಯ ವಾದವುಗಳೆಂದು ಈ ಅಧ್ಯಯನದಲ್ಲಿ ಬಿಂಬಿಸಲಾಗಿದೆ.

ಅಸ್ತಿತ್ವದಲ್ಲಿರುವ ಸಂಸ್ಥೆಗಳ ಪಾಲುದಾರಿಕೆ, ಜಿಲ್ಲಾ ಆಡಳಿತದ ಪಾತ್ರ, ಉತ್ತಮ ಸಂವಹನ, ರಾಜಕೀಯ ನಿರಪೇಕ್ಷತೆ, ಫಲಾನುಭವಿಗಳಲ್ಲಿ ಕಲಿಕೆಗೆ ಇರುವ ಸಿದ್ಧತೆ ಮತ್ತು ಹೊಂದಾಣಿಕೆ, ಸರ್ಕಾರ ಮತ್ತು ವಿಶ್ವಬ್ಯಾಂಕಿನ ಪಾಲುದಾರಿಕೆಗಳ ಮೇಲೆ ಈ ಸುಧಾರಣೆ ನಿಂತಿದೆ ಎನ್ನುವುದನ್ನು ವಿಶ್ಲೇಷಿಸಲಾಗಿದೆ.

ಮುಂದಿನ ಹೆಜ್ಜೆಗಳಾಗಿ ಆದ್ಯತೆಗೆ ತಕ್ಕಂತೆ ಕಾರ್ಯಕ್ರಮಗಳನ್ನು ಕೈಗೊಳ್ಳುವ ಅವಶ್ಯಕತೆಯನ್ನು ಒತ್ತಿ ಹೇಳಲಾಗಿದೆ. ನೀರಾವರಿ ಇಲಾಖೆ ಮತ್ತು ಕಾಡಾ ಅಧಿಕಾರಿ ವರ್ಗ ಮತ್ತು ಸಿಬ್ಬಂದಿಗಳಿಗೆ ಉನ್ನತ ಮಟ್ಟದಲ್ಲಿ ಸಹಭಾಗಿತ್ವ ಏರ್ಪಟ್ಟರೆ ಮುಂದಿನ ಹಂತದ ಒಕ್ಕೂಟದ ರಚನೆಗೆ ದಾರಿಯಾಗುತ್ತದೆ ಎಂಬುದನ್ನು ವಿವರಿಸಲಾಗಿದೆ. ಬಳಕೆದಾರರ ಮತ್ತು ಸರಕಾರದ ವಿವಿಧ ಇಲಾಖೆಗಳ ಕಾರ್ಯದಲ್ಲಿ ಪಾರದರ್ಶಕತೆ ಮತ್ತು ಉತ್ತರದಾಯಿತ್ವವನ್ನು ಕಾಯ್ದುಕೊಂಡಾಗ ಮಾತ್ರ ನಿರೀಕ್ಷಿತ ಯಶಸ್ಸು ಸಾಧ್ಯ ಎನ್ನುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಮನಗಾಣಿಸಲಾಗಿದೆ.

ಅನುರಾಗ್ ಮೊಹಂತಿ (೨೦೦೦) ಸ್ಥಳೀಯ ಸಂಸ್ಥೆಗಳಲ್ಲಿ ಸರ್ಕಾರ, ಖಾಸಗಿ ಮತ್ತು ಸರ್ಕಾರೇತರ ಸಂಸ್ಥೆಗಳ ಪಾತ್ರವನ್ನು ತಮ್ಮ ಲೇಖನದಲ್ಲಿ ಚರ್ಚೆ ಮಾಡಿದ್ದಾರೆ. ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದ ಈ ಎಲ್ಲಾ ಪ್ರಕ್ರಿಯೆಗಳಿಗೆ ಚಾಲನೆ ಸಿಕ್ಕಿದೆ. ಈ ಲೇಖನದಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ನೀರಾವರಿ ನಿರ್ವಹಣೆಯಲ್ಲಿ ರೈತರ ಪಾಲುಗೊಳ್ಳುವಿಕೆಯನ್ನು ವಿವರಿಸಲಾಗಿದೆ. ರಾಷ್ಟ್ರಮಟ್ಟದಲ್ಲಿ ಮಹಾರಾಷ್ಟ್ರದ ಫದ್ ವ್ಯವಸ್ಥೆಯನ್ನು ಮತ್ತು ಈ ರಾಜ್ಯ ೧೯೭೬ ರಲ್ಲಿಯೇ ನೀರಾವರಿ ಕಾಯ್ದೆ ಜಾರಿಗೊಳಿಸಿ ಸಂಘಗಳನ್ನು ಕಾನೂನುಬದ್ಧವಾಗಿಯೇ ರಚನೆ ಮಾಡಲು ಅವಕಾಶ ಮಾಡಿಕೊಟ್ಟಿರುವುದನ್ನು ವಿಕೇಂದ್ರೀಕರಣ ಮತ್ತು ರೈತರ ಸಶಸ್ತ್ರೀಕರಣ ಎಂದು ಗುರುತಿಸಲಾಗಿದೆ. ಈ ಸಂಘಗಳು ಸಕಾರಾತ್ಮಕವಾಗಿ ಸ್ಪಂದಿಸುತ್ತಿರುವ ಬಗ್ಗೆ ಉಲ್ಲೇಖಿಸಲಾಗಿದೆ.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಫಿಲಿಪೈನ್ಸ್ ಮತ್ತು ಅಮೇರಿಕಾ ದೇಶಗಳ ಉದಾಹರಣೆಗಳನ್ನು ಅನಭಿವೃದ್ಧಿ ರಾಷ್ಟ್ರಗಳಲ್ಲಿನ ಸಹಭಾಗಿತ್ವ ನೀರಾವರಿ ನಿರ್ವಹಣೆ ಸಾಧಕ-ಬಾಧಕಗಳನ್ನು ವಿಶ್ಲೇಷಿಸಿದ್ದಾರೆ. ಬಳಕೆದಾರರಲ್ಲಿನ ಅಸಹಕಾರ ಮತ್ತು ಅಜ್ಞಾನ ಹಲವಾರು ಸಮಸ್ಯೆಗಳಿಗೆ ಕಾರಣವಾಗಿದ್ದು, ಪ್ರಭುತ್ವವು ಫಲಾನುಭವಿಗಳಲ್ಲಿ ಜಾಗೃತಿ ಮೂಡಿಸುವ ಅಗತ್ಯವನ್ನು ಒತ್ತಿ ಹೇಳಲಾಗಿದೆ.

ದೀಪಕ್‌ಕುಮಾರ್‌ದಾಸ್ (೨೦೦೫) ತಮ್ಮ ಲೇಖನದಲ್ಲಿ ಸುಸ್ಥಿರ ಕೃಷಿಗೆ ಅಗತ್ಯವಾದ ಸಂಗತಿಗಳೆಂದರೆ ಜಲಹಂಚಿಕೆಯಲ್ಲಿ ಸಮಾನತೆ, ನೀರಾವರಿ ಪೂರೈಕೆಯಲ್ಲಿ ವಿಶ್ವಾಸಾರ್ಹತೆ, ಜಲ ಬಳಕೆಯಲ್ಲಿ ದಕ್ಷತೆ ಮತ್ತು ಸುಸ್ಥಿರತೆ ಇತ್ಯಾದಿ ಸಂಗತಿಗಳನ್ನು ಪಟ್ಟಿ ಮಾಡಿದ್ದಾರೆ. ಇತ್ತೀಚಿಗೆ ಪ್ರಪಂಚದ ಎಲ್ಲ ದೇಶಗಳ ಯೋಜನಾಕಾರರು ಮತ್ತು ನೀತಿನಿರೂಪಕರು ಜಲಸಂಪನ್ಮೂಲಗಳ ಅಭಿವೃದ್ಧಿಗೆ ಮತ್ತು ನಿರ್ವಹಣೆಗೆ ಪ್ರಥಮ ಆದ್ಯತೆ ನೀಡುತ್ತಿದ್ದಾರೆ. ನೀರಾವರಿಯ ಮೂಲ ಸೌಕರ್ಯದಲ್ಲಿ ವಿಕೇಂದ್ರೀಕರಣ ಆಡಳಿತವು ಒಂದು ಪೂರ್ವ ಅಪೇಕ್ಷಿತವೆಂದು ತಿಳಿದು ಇದಕ್ಕೆ ವಿಶಿಷ್ಟ ಗಮನ ನೀಡುತ್ತಿರುವ ಬಗ್ಗೆ ವಿವರಿಸಿದ್ದಾರೆ. ನೀರಾವರಿ ನಿರ್ವಹಣೆಯ ಹೊಣೆಗಾರಿಕೆಯನ್ನು ರೈತ ಸಂಘಟನೆ ಅಥವಾ ನೀ.ಬ. ಸಂಘಗಳಿಗೆ ವರ್ಗಾಯಿಸುತ್ತಿರುವ ಪ್ರಕ್ರಿಯೆ ನಡೆಯುತ್ತಿರುವುದನ್ನು ಸಹಭಾಗಿತ್ವ ನೀರಾವರಿ ನಿರ್ವಹಣೆ ಎಂದು ಕರೆಯಲಾಗಿದೆ. ಈ ಪರಿಕಲ್ಪನೆಯು ಸ್ಥಳೀಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯವಾಗಿ

ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿದೆ. ಇದು ಯಶಸ್ವಿಯಾಗಬೇಕಾದರೆ ನೀ.ಬ.ಸ. ಸಂಘಗಳಿಗೆ ಉತ್ತಮ ಪ್ರೋತ್ಸಾಹ, ಪರಸ್ಪರ ಅನುಸಂಧಾನ, ಫಲಾನುಭವಿಗಳಲ್ಲಿ ಸಹಕಾರ ಭಾವನೆ ಮಾಡುವಂತೆ ಮಾಡುವುದು, ಮಾಹಿತಿ ವಿನಿಮಯ ಹೆಚ್ಚಿಸುವುದು. ಈ ಮೂಲಕ ಬಳಕೆದಾರರಲ್ಲಿ ನಂಬಿಕೆ ಮತ್ತು ವಿಶ್ವಾಸಾರ್ಹತೆಯನ್ನು ಮೂಡಿಸಬಹುದೆಂದು ತಿಳಿಸಿದ್ದಾರೆ. ಇವರು ಸಹಭಾಗಿತ್ವ ನೀರಾವರಿ ನಿರ್ವಹಣೆಯನ್ನು ಎರಡು ದೃಷ್ಟಿಕೋನಗಳಿಂದ ನೋಡಿದ್ದಾರೆ. ಮೊದಲನೆಯದಾಗಿ ಮೇಲಿನಿಂದ ಕೆಳಗೆ ಹರಿಯುವ ಶಾಸನಬದ್ಧ ಪ್ರಭುತ್ವದ ದೃಷ್ಟಿಕೋನ ಮತ್ತು ಕೆಳಗಿನಿಂದ ಮೇಲಕ್ಕೆ ಹರಿಯುವ ಪ್ರೇರಣಾತ್ಮಕ ದೃಷ್ಟಿಕೋನಗಳ ಬಗ್ಗೆ ವಿವರಿಸುತ್ತಾ ಭಾರತದಲ್ಲಿ ಕೆಲವು ರಾಜ್ಯಗಳು ಮೊದಲ ಮಾದರಿಯನ್ನು ಕೆಲವು ರಾಜ್ಯಗಳು ಎರಡನೇ ಮಾದರಿಯನ್ನು ಮತ್ತೆ ಕೆಲವು ರಾಜ್ಯಗಳು ಈ ಎರಡೂ ದೃಷ್ಟಿಕೋನದ ಮಧ್ಯಮ ಮಾದರಿಯನ್ನು ಅಳವಡಿಸಿಕೊಂಡಿರುವ ಬಗ್ಗೆ ವಿವರಿಸಿದ್ದಾರೆ. ಈ ಲೇಖನದ ಮೂಲಕ ನೀರಾವರಿ ನಿರ್ವಹಣೆ ವರ್ಗಾವಣೆ ಹೇಗೆ ನಡೆಯುತ್ತಿದೆ ಮತ್ತು ಸಹಭಾಗಿತ್ವ ನೀರಾವರಿ ನಿರ್ವಹಣೆಯ ವಿವಿಧ ದೃಷ್ಟಿಕೋನಗಳೇನು ಎಂಬುದನ್ನು ತಿಳಿಯಬಹುದಾಗಿದೆ. ಹಾಗೂ ಒರಿಸ್ಸಾ ರಾಜ್ಯದ ನೀ.ಬ. ಸಂಘಗಳ (ಪಾನಿ ಪಂಚಾಯತ್ ಕಾಯ್ದೆ) ಕುರಿತು ವಿವರಿಸಲಾಗಿದೆ.

ಈ ಅಧ್ಯಯನಗಳನ್ನು ಪರಿಶೀಲಿಸಿದರೆ ನೀರಾವರಿ ನಿರ್ವಹಣೆಯ ಹಸ್ತಾಂತರ ರೈತರಿಗೆ ವರಕ್ಕಿಂತ ಶಾಪವಾದದ್ದೇ ಹೆಚ್ಚು ಅನ್ನಿಸುತ್ತದೆ. ಖಾಸಗಿ ಸಂಘ ಸಂಸ್ಥೆಗಳಿಗೆ ಹಸ್ತಾಂತರಿಸುವುದರಿಂದ ಬಡರೈತರಿಗೆ ತುಂಬಾ ಸಂಕಷ್ಟವಾಗುತ್ತದೆ. ಅಂತೆಯೇ ಭೂಮಾಲಿಕ ರೈತನಿಗೆ ಅವಕಾಶದ ಹಲವು ಬಾಗಿಲುಗಳು ತೆರೆದುಕೊಳ್ಳುತ್ತವೆ. ಇದರಿಂದಾಗಿ ಸಾಮಾಜಿಕ ಶ್ರೇಣೀಕರಣದ ಏರಿಳಿತಗಳು ಬೇರೆಯದೇ ರೀತಿಯಲ್ಲಿ ಮುಂದುವರಿದಂತಾಗುತ್ತದೆ.

## ೩.೪. ಕಾಲುವೆಯ ಮೇಲ್ತುದಿ ಮತ್ತು ಕೆಳತುದಿ ರೈತರ ನಡುವಿನ ಬಿಕ್ಕಟ್ಟುಗಳು

ಗೋವಿಂದಯ್ಯ ಟಿ. (೧೯೯೨) ಕೃಷ್ಣರಾಜ ಸಾಗರದ ಒಂದು ಅಧ್ಯಯನದಲ್ಲಿ ಬೆಳೆಯ ಪದ್ಧತಿಯ ಉಲ್ಲಂಘನೆಯನ್ನು ಕ್ಷೇತ್ರಕಾರ್ಯದ ಮೂಲಕ ಪ್ರಾಥಮಿಕ ಮಾಹಿತಿಯನ್ನು ಕಲೆ ಹಾಕಿ ಅದರ ಫಲಿತಗಳನ್ನು ವಿವರಿಸಿದ್ದಾರೆ. ನೀರಾವರಿಯಲ್ಲಿ ಭತ್ತದ ಬೆಳೆ ಮೇಲುಗೈ ಸಾಧಿಸಿರುವುದನ್ನು ತಿಳಿಸುತ್ತಾ, ಹೆಚ್ಚಿನ ನೀರನ್ನು ಈ ಬೆಳೆಗೆ ಮೀಸಲಿಟ್ಟಿರುವುದನ್ನು ಕಂಡುಕೊಂಡಿದ್ದಾರೆ. ಅಗತ್ಯಕ್ಕಿಂತ ಎರಡು ಪಟ್ಟು ನೀರನ್ನು ಭತ್ತಕ್ಕೆ ಬಳಕೆ ಮಾಡುತ್ತಿರುವುದನ್ನು ವಿಶ್ಲೇಷಿಸಿದ್ದಾರೆ. ಜಪಾನ್ (೬ ಸಾವಿರ ಲೀ.) ಮತ್ತು ಭಾರತದಲ್ಲಿ (೧೫ ಸಾವಿರ ಲೀ.) ಪ್ರತಿ ಕಿ.ಗ್ರಾಂ. ಭತ್ತ ಬೆಳೆಯಲು ಪ್ರಮಾಣವನ್ನು ವಿವರಿಸುತ್ತಾ ಭಾರತ ೯ ಸಾವಿರ ಲೀಟರ್ ಅಧಿಕ ನೀರು ಬಳಕೆ ಮಾಡುತ್ತಿರುವುದನ್ನು ಉಲ್ಲೇಖಿಸಿದ್ದಾರೆ. ಕಾಲುವೆಯ ಆರಂಭದ ರೈತರು ಹೆಚ್ಚಿನ ನೀರನ್ನು ಬಳಕೆ ಮಾಡಿದರೆ, ಕೆಳಭಾಗದ ರೈತರು ನೀರಿನ ಕೊರತೆಯಿಂದ ಬಳಲುತ್ತಿರುವುದನ್ನು ಕಂಡುಕೊಂಡಿದ್ದಾರೆ. ಬೆಳೆಯ ಉಲ್ಲಂಘನೆ ಸರ್ವೇ ಸಾಮಾನ್ಯವಾಗಿರುವುದು ಈ ಅಧ್ಯಯನದಿಂದ

ತಿಳಿದುಬರುತ್ತದೆ. ವಾರಾಬಂದಿ ನೀರಿನ ಪದ್ಧತಿಯನ್ನು ಅಳವಡಿಸಿಕೊಳ್ಳುವಲ್ಲಿ ರೈತರೂ ವಿಫಲರಾಗಿದ್ದಾರೆ. ಕಾಡಾ ಕೂಡ ಅದನ್ನು ಜಾರಿಗೊಳಿಸುವಲ್ಲಿ ವಿಫಲವಾಗಿದೆ. ಇನ್ನು ಭೂಮಿಯ ಫಲವತ್ತತೆಯ ಸುಸ್ಥಿರತೆಯನ್ನು ಕಾಪಾಡಲು ಸರದಿ ಬೆಳೆಗಳನ್ನು ಬೆಳೆಯಬೇಕೆಂದಿದ್ದರೂ ರೈತರು ಏಕರೀತಿಯ ಬೆಳೆಗಳನ್ನು ಬೆಳೆಯುತ್ತಿರುವುದನ್ನು ಈ ಅಧ್ಯಯನದ ಮೂಲಕ ತಿಳಿಯುತ್ತದೆ.

ಈ ಅಧ್ಯಯನದಲ್ಲಿ ತಿಳಿದುಬರುವ ಮತ್ತೊಂದು ಸಂಗತಿಯೆಂದರೆ ನೀರಾವರಿಯಿಂದ ಆ ಪ್ರದೇಶದಲ್ಲಿ ವರಮಾನ, ವ್ಯವಹಾರಗಳು ಉಳ್ಳವರಲ್ಲಿ ಹೆಚ್ಚಾಗಿರುವುದನ್ನು ಮತ್ತು ಯಂತ್ರಗಳ ಬಳಕೆಯಿಂದ ಕೂಲಿಕಾರರಿಗೆ ಭೂರಹಿತರಿಗೆ ಉದ್ಯೋಗ ಮತ್ತು ವರಮಾನ ಕಡಿಮೆಯಾಗಿರುವುರಿಂದ ಉಳ್ಳವರು ಮತ್ತು ಇಲ್ಲದವರ ನಡುವೆ ಅಂತರ ಹೆಚ್ಚಾಗಿರುವುದನ್ನು ತಮ್ಮ ಸಂಶೋಧನೆಯಲ್ಲಿ ಪತ್ತೆ ಹಚ್ಚಿದ್ದಾರೆ.

ತುಷಾರ್ ಷಾ (೨೦೦೦) ತಮ್ಮ ಪ್ರಬಂಧದಲ್ಲಿ ನೀರಾವರಿಯ ಉತ್ತಮ ನಿರ್ವಹಣೆಯು ಅಂತಿಮವಾಗಿ ಜನರ ಬದುಕನ್ನು ಹೆಚ್ಚಿಸುವ ಜೊತೆ ಜೊತೆಗೆ ಗ್ರಾಮೀಣ ಬಡಜನರ ಆಹಾರ ಭದ್ರತೆಯನ್ನು ಅಧಿಕಗೊಳಿಸುತ್ತದೆ. ಆಹಾರ ಭದ್ರತೆ ಎಂದರೆ ಕೃಷಿ ಉತ್ಪನ್ನದ ಹೆಚ್ಚಳವಾಗಿದೆ. ವಿಶಾಲ ಭೂಮಿಕೆಯಲ್ಲಿ ಅದು ಪ್ರಾಥಮಿಕ ಶಿಕ್ಷಣ, ಮೂಲ ವೈದ್ಯಕೀಯ ಸೌಲಭ್ಯ, ನೈರ್ಮಲ್ಯ, ಸುರಕ್ಷಿತ ಕುಡಿಯುವ ನೀರು ಮತ್ತು ಸಮತೋಲನ ಆಹಾರದ ಆರ್ಥಿಕ ಲಭ್ಯತೆ ಮತ್ತು ಭೌತಿಕ ಸುಸ್ಥಿರತೆಯನ್ನು ಪ್ರತಿಬಿಂಬಿಸುತ್ತದೆ ಎಂದು ತಿಳಿಸಿದ್ದಾರೆ. ಮುಖ್ಯವಾಗಿ ಕಾಲುವೆ ನೀರಾವರಿ ಮತ್ತು ಖಾಸಗಿ ಭಾವಿ ಮತ್ತು ಕೊಳವೆ ಭಾವಿಯಿಂದ ನೀರು ಪಡೆಯಲು ಮಾಡಬೇಕಾದ ವೆಚ್ಚದ ಬಗ್ಗೆ ವಿವರಿಸುತ್ತಾ ಕಾಲುವೆ ನೀರಾವರಿ ವ್ಯಾಪ್ತಿ ರೈತರು ಅತಿ ಕಡಿಮೆ ವೆಚ್ಚದಲ್ಲಿ ಹೆಚ್ಚು ಅನುಕೂಲ ಪಡೆಯುತ್ತಾರೆ ಎಂಬುದನ್ನು ಅಂಕಿ ಸಂಖ್ಯೆಗಳ ಸಹಿತ ವಿವರಿಸಿದ್ದಾರೆ. ಅಚ್ಚುಕಟ್ಟು ಪ್ರದೇಶಗಳಲ್ಲಿ ಕಾಲುವೆಯ ಮೇಲ್ಭಾಗದ ರೈತರು ಅಧಿಕ ನೀರಿನ ವ್ಯಾಮೋಹದಿಂದ ಜೌಗು ಪ್ರದೇಶ ಹೆಚ್ಚಾಗುವಂತೆ ಮಾಡುತ್ತಾರೆ. ಇದರಿಂದ ಕಾಲುವೆಯ ಕೊನೆಭಾಗ ರೈತರಿಗೆ ನೀರು ದೊರೆಯದಂತಾಗುತ್ತದೆ ಎಂಬುದನ್ನು ಪ್ರಾಯೋಗಿಕ ಅಧ್ಯಯನಗಳ ಉದಾಹರಣೆಗಳೊಂದಿಗೆ ಚರ್ಚೆ ಮಾಡಿದ್ದಾರೆ. ನೀರು ದರ ನಿಗದಿಯಲ್ಲಿನ ವಿಳಂಬದಿಂದಾಗಿ ಆಚರಣೆ ಮತ್ತು ನಿರ್ವಹಣೆ ವೆಚ್ಚವನ್ನು ಭರಿಸಲು ಸಾಧ್ಯವಾಗದೇ ಭಾರತದ ನೀರಾವರಿ ವ್ಯವಸ್ಥೆ ಹೇಗೆ ಬಿಕ್ಕಟ್ಟಿಗೆ ಸಿಲುಕಿದೆ ಎಂಬುದನ್ನು ಎಳೆ ಎಳೆಯಾಗಿ ವಿಶ್ಲೇಷಣೆ ಮಾಡಲಾಗಿದೆ. ನೀರಾವರಿ ಕ್ಷೇತ್ರವನ್ನು ನಿರ್ವಹಿಸುತ್ತಿರುವ ಕಾಡಾ ಪ್ರಾಧಿಕಾರಗಳು ಅಚ್ಚುಕಟ್ಟು ಪ್ರದೇಶದ ನೀರಾವರಿ ವ್ಯವಸ್ಥೆಯನ್ನು ನಿರ್ವಹಿಸುವಲ್ಲಿ ವಿಫಲವಾಗಿರುವ ಬಗ್ಗೆ ವಿವರಿಸುತ್ತಾ, ಇಡೀ ವ್ಯವಸ್ಥೆಗೆ ಒಂದು ಕ್ರಿಯಾ ಮಾದರಿ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಒಟ್ಟಾರೆ ಭಾರತದ ನೀರಾವರಿ ವ್ಯವಸ್ಥೆಯ ಮೇಲೆ ನಿಯಂತ್ರಣವಿಲ್ಲದ ನಿಯೋಗಿ ಸಂಸ್ಥೆಗಳು ಹೆಚ್ಚಾಗಿದ್ದು ಅವುಗಳ ಜೊತೆಗೆ ಫಲಾನುಭವಿಗಳನ್ನು ತೊಡಗಿಸಿಕೊಳ್ಳಬೇಕಾದ ಅವಶ್ಯಕತೆಯನ್ನು ತಿಳಿಸಿದ್ದಾರೆ.

ರಾಕೇಶ್ ಹೂಜ, ಗಣೇಶ್ ಪಂಗರೆ ಮತ್ತು ರಾಜು ಕೆ.ವಿ. (೨೦೦೨) ಇವರು ತಮ್ಮ ಸಂಪಾದಿತ ಕೃತಿಯಲ್ಲಿ ಭಾರತದ ಬೃಹತ್ ಮತ್ತು ಮಧ್ಯಮ ನೀರಾವರಿ ಯೋಜನೆಗಳನ್ನು ಪ್ರಭುತ್ವ ಕೇಂದ್ರೀಕೃತ ನಿಯಂತ್ರಣದ ಮೂಲಕ ಅಭಿವೃದ್ಧಿಪಡಿಸಲಾಯಿತು. ಆನಂತರ ವಿಕೇಂದ್ರೀಕರಣದ ನೆಲೆಯಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆಯನ್ನು ಅನುಷ್ಠಾನಗೊಳಿಸುವತ್ತ ಇದೀಗ ಹೆಜ್ಜೆಯಿಡುತ್ತಿದೆ ಎನ್ನುವುದನ್ನು ವಿಶ್ಲೇಷಿಸಿದ್ದಾರೆ. ಆಂಧ್ರಪ್ರದೇಶದಲ್ಲಿ ವಿಶ್ವಬ್ಯಾಂಕಿನ ನೆರವಿನಿಂದ ಜಾರಿಗೊಳ್ಳುತ್ತಿರುವ ಸಹಭಾಗಿತ್ವ ನೀರಾವರಿ ನಿರ್ವಹಣೆ ಬಗ್ಗೆ ವಿವಿಧ ಲೇಖಕರು ಅದರ ಬೇರೆ ಬೇರೆ ನೆಲೆಗಳನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ.

ಕರ್ನಾಟಕದ ಹೇಮಾವತಿ ನೀರಾವರಿ ಯೋಜನೆ ವ್ಯಾಪ್ತಿಯಲ್ಲಿ ಕಾಲುವೆಯ ಮೇಲ್ತುದಿ ಮತ್ತು ಕೆಳತುದಿ ರೈತರ ನಡುವಿನ ನೀರಾವರಿ ನಿರ್ವಹಣಾ ಸಾಮರ್ಥ್ಯವನ್ನು ಮೌಲ್ಯಮಾಪನ ಮಾಡಲಾಗಿದೆ (ಬಸವರಾಜ್ ಹುಲಗೂರು-೨೦೦೨). ಈ ಅಧ್ಯಯನದಲ್ಲಿ ಕಾಲುವೆಯ ಮೇಲ್ತುದಿ ಮತ್ತು ಕೆಳತುದಿ ರೈತರ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ. ಕಾಲುವೆಯ ಮೇಲ್ತುದಿ ರೈತರು ಕೆಳತುದಿ ರೈತರಿಗಿಂತ ಉತ್ತಮ ಸ್ಥಿತಿಯಲ್ಲಿರುವುದನ್ನು ಕಂಡುಕೊಳ್ಳಲಾಗಿದೆ. ಮೇಲ್ತುದಿ ರೈತರು ಉತ್ತಮ ನೀರಿನ ಪೂರೈಕೆ ಪಡೆದರೆ ಕೆಳತುದಿಯ ರೈತರು ನೀರಿನ ಕೊರತೆಯನ್ನು ಅನುಭವಿಸುತ್ತಾರೆ. ಮೇಲ್ತುದಿ ರೈತರು ಬೆಳೆಯ ಮಾದರಿಯನ್ನು ಶೇ. ೧೦೦ ರಷ್ಟು ಉಲ್ಲಂಘಿಸಿರುವುದು ಕಂಡುಬರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಕೆಳತುದಿಯ ರೈತರು ಬೆಳೆಯ ಮಾದರಿಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದಾರೆ. ಕೆಳತುದಿ ರೈತರ ಉತ್ಪಾದಕತೆ ಮೇಲ್ತುದಿ ರೈತರಿಗಿಂತ ಉತ್ತಮವಾಗಿರುವುದು ತಿಳಿದುಬಂದಿದೆ.

ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ಒರಿಸ್ಸಾದ ಅನುಭವಗಳು ಕರ್ನಾಟಕದ ಅನುಭವಗಳಿಗೆ ಹತ್ತಿರವಾಗಿವೆ. ಒರಿಸ್ಸಾ ರಾಜ್ಯದ ಪುರಿ ಮುಖ್ಯ ಕಾಲುವೆ ವ್ಯವಸ್ಥೆಯ ಡಿಲಾಂಗ್ ವಿತರಣಾ ನಾಲೆಯ ಒಂದು ವಿಷಯಾಧ್ಯಯನವು (ನಂದ ಪಿ. ಮತ್ತು ಶ್ರೀವತ್ಸವ ಆರ್.ಸಿ. ೨೦೦೦) ಇದನ್ನು ಪುಷ್ಟೀಕರಿಸುತ್ತದೆ. ಈ ಅಧ್ಯಯನದಲ್ಲಿ ಕ್ಷೇತ್ರಕಾರ್ಯದ ಮೂಲಕ ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಗಳನ್ನು ಕಲೆ ಹಾಕಲಾಗಿದೆ. ಅಧ್ಯಯನವನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಪ್ರಥಮವಾಗಿ ವಿತರಣಾ ನಾಲೆಯ ಭೌತಿಕ ಮತ್ತು ಜಲವ್ಯವಸ್ಥೆಯ ಲಕ್ಷಣಗಳನ್ನು, ಎರಡನೆಯದಾಗಿ ವಿತರಣಾ ನಾಲೆಯ ಬೇಸಾಯದ ಸ್ಥಿತಿಗತಿಗಳನ್ನು ಮತ್ತು ನೀರಾವರಿ ನಿರ್ವಹಣೆಯ ದಕ್ಷತೆಯನ್ನು ಮೂರನೇ ಭಾಗದಲ್ಲಿ ಮೌಲ್ಯಮಾಪನ ಮಾಡಲಾಗಿದೆ. ಸಂದರ್ಶಕ ಪ್ರಶ್ನಾವಳಿಗಳ ಮೂಲಕ ಭೂಹಿಡುವಳಿ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಪಡೆಯಲಾಗಿದೆ. ಜನಾಭಿಪ್ರಾಯವನ್ನು ನೀರಾವರಿಯ ಸಮಸ್ಯೆಗಳ ಬಗ್ಗೆ, ಬೆಳೆಯ ಉತ್ಪಾದನೆಯ ಬಗ್ಗೆ ಪಡೆದು ಕಾಲುವೆಯ ಮೊದಲ ಭಾಗದ ಮತ್ತು ಕೊನೆಭಾಗದ ರೈತರ ಅಭಿಮತ ಅನುಭವಗಳನ್ನು ತೌಲನಿಕವಾಗಿ ಅಭ್ಯಸಿಸಲಾಗಿದೆ.

ಅಧ್ಯಯನದಲ್ಲಿ ಕಂಡುಬಂದಂತೆ ಕಾಲುವೆಯ ಭೌತಿಕ ಸ್ಥಿತಿ ಅತಿ ಹಾನಿಗೆ ಈಡಾಗಿದ್ದು ನೀರಿನ ಹರಿಯುವಿಕೆಯು ಶೇ. ೩೦ ರಿಂದ ಶೇ. ೯೦ರಷ್ಟಿರುವುದನ್ನು ಅಂದಾಜಿಸಲಾಗಿದೆ. ನೀರಿನ ನಿಯಂತ್ರಕಗಳಿಲ್ಲದಿರುವುದು ಸರ್ವೇಸಾಮಾನ್ಯವಾಗಿದೆ. ಇದರಿಂದಾಗಿ ಕೆಳತುದಿ ರೈತರು ನೀರು ದೊರೆಯದೇ ದುಸ್ಥಿತಿಯಲ್ಲಿದ್ದಾರೆ.

ಕಾಲುವೆಯ ಮೊದಲ ಭಾಗದಲ್ಲಿ ಅತಿ ನೀರು ಬೇಡುವ ಭತ್ತವನ್ನು ಸರದಿಯಂತೆ ಏಕಬೆಳೆಯನ್ನೇ ಬೆಳೆಯಲಾಗುತ್ತದೆ. ಅತಿ ಇಳುವರಿ ಕೊಡುವ ತಳಿಗಳನ್ನೇ ಬೆಳೆಯುತ್ತಿರುವುದು ಕಂಡುಬಂದಿದೆ. ಪ್ರತಿ ಹೆಕ್ಟೇರ್‌ಗೆ ೨೫೦ ಕಿ.ಗ್ರಾಂ.ನಷ್ಟು ರಾಸಾಯನಿಕ ಗೊಬ್ಬರ ಬಳಕೆ ಮಾಡುವುದು ಕಂಡುಬಂದಿದೆ. ಎಲ್ಲ ರೈತರು ಗದ್ದೆಗಳ ತುಂಬಾ ನೀರು ನಿಲ್ಲಿಸುತ್ತಾರೆ ಮತ್ತು ಗದ್ದೆಯಿಂದ ಗದ್ದೆಗೆ ನೀರನ್ನು ಹಾಯಿಸುತ್ತಾರೆ. ಕೊನೆಯ ಭಾಗದಲ್ಲಿ ಶೇ. ೯೩.೫೨ ರೈತರು ತಮಗೆ ಸಾಕಷ್ಟು ನೀರು ದೊರೆಯುತ್ತಿಲ್ಲ ಎಂದು ಹೇಳಿದ್ದಾರೆ. ರೈತರ ನಡುವೆ ಸಹಕಾರವಿಲ್ಲದ ಕಾರಣ ಹೊಲಗಾಲುವೆಗಳನ್ನು ದುರಸ್ತಿಗೊಳಿಸಿಕೊಳ್ಳಲು ಸಾಧ್ಯವಾಗಿಲ್ಲವೆಂದು ತಿಳಿಸಿದ್ದಾರೆ. ಯಾವ ರೈತರೂ ಅಂತರ್ಜಲವನ್ನಾಗಲೀ, ಕೆರೆಕುಂಟೆಗಳ ನೀರನ್ನು ಬಳಕೆ ಮಾಡಿಕೊಂಡಿಲ್ಲ. ಏಕಪ್ರಕಾರ ಭತ್ತಕ್ಕೆ ಬದಲು ಪರ್ಯಾಯ ಬೆಳೆಗಳ ಬಗ್ಗೆ ಅವರಿಗೆ ಅರಿವು ಇದ್ದರೂ ಆ ಬಗ್ಗೆ ಇಷ್ಟವಿಲ್ಲದೆ ಇರುವುದು ತಿಳಿದು ಬಂದಿದೆ. ಪ್ರತಿಶತ ೩೦.೭೭ ಪ್ರತಿಕ್ರಿಯೆದಾರರು ಅತಿ ನೀರಿನ ಬಳಕೆಯಿಂದ ಹೆಚ್ಚು ಭೂಮಿ ಜೌಗಿಗೆ ತುತ್ತಾಗಿರುವುದನ್ನು ತಿಳಿಸಿದ್ದಾರೆ.

ಕಾಲುವೆಯ ಕೆಳತುದಿಯ ರೈತರು ಅನಿಶ್ಚಿತ ಮತ್ತು ನೀರಿನ ಅತಿಯಾದ ಕೊರತೆಯಿಂದ ಕಷ್ಟ ಅನುಭವಿಸುತ್ತಿದ್ದಾರೆ. ಆ ರೈತರ ಅಭಿಪ್ರಾಯದಲ್ಲಿ ಒಂದು ವರ್ಷ ಮುಂಗಾರಿನಲ್ಲಿ ನೀರು ಹಾಯಿಸಿದರೆ ಮತ್ತೊಂದು ವರ್ಷ ಹಿಂಗಾರಿನಲ್ಲಿ ಕಾಲುವೆಗಳಿಗೆ ನೀರು ಪೂರೈಕೆಯಾಗುತ್ತದೆ. ಕೆಳತುದಿಯ ರೈತರು ಅರೆ ನೀರಾವರಿ ಬೆಳೆಗಳನ್ನು ಮಾತ್ರ ಬೆಳೆಯುತ್ತಾರೆ. ಈ ರೈತರು ಅಂತರ್ಜಲವನ್ನು ಸಾಕಷ್ಟು ಬಳಕೆ ಮಾಡುತ್ತಾರೆ. ಬಸಿಗಾಲುವೆ ನೀರನ್ನು ಉಪಯೋಗಿಸಿಕೊಳ್ಳುತ್ತಾರೆ. ಮುಂಗಾರಿನಲ್ಲಿ ಕುಟುಂಬದ ಅನುಭೋಗಕ್ಕೆ ಭತ್ತವನ್ನು ಬೆಳೆಯುತ್ತಾರೆ. ಇಲ್ಲಿಯೂ ಗದ್ದೆಯಿಂದ ಗದ್ದೆಗೆ ನೀರು ಹಾಯಿಸುವ ವಿಧಾನವನ್ನೇ ಅನುಸರಿಸಲಾಗುತ್ತದೆ. ಕೆಲ ಮಟ್ಟಿನ ಕೆರೆ ಮತ್ತು ಕುಂಟೆಗಳ ನೀರನ್ನು ಬಳಕೆ ಮಾಡುತ್ತಾರೆ. ಮುಂಗಾರಿನಲ್ಲಿ ಕಾಲುವೆಗಳಲ್ಲಿ ನೀರು ಹೆಚ್ಚಾಗಿ ಹರಿಯುವುದರಿಂದ ಭೂಮಿ ನೀರಿನಿಂದಾವೃತ್ತವಾಗುವುದರಿಂದ ವಿಧಿಯಿಲ್ಲದೆ ಭತ್ತವನ್ನೇ ಆಯ್ಕೆ ಮಾಡಬೇಕಾದ ಅಗತ್ಯವನ್ನು ತಿಳಿಸುತ್ತಾರೆ. ಒಟ್ಟಾರೆ ಈ ಅಧ್ಯಯನದ ಮೂಲಕ ಗದ್ದೆಯಿಂದ ಗದ್ದೆಗೆ ನೀರು ಹಾಯಿಸುವುದರಿಂದ ಹೆಚ್ಚಿನ ನೀರು ವ್ಯರ್ಥವಾಗುತ್ತದೆ ಮತ್ತು ಕೊನೆ ಭಾಗದ ರೈತರಿಗೆ ನೀರು ದೊರೆಯುವುದಿಲ್ಲ ಎನ್ನುವುದು ತಿಳಿಯುತ್ತದೆ.

ಹೂಗಾರ್ ಎಲ್.ಬಿ. (೧೯೯೭) ಇವರು ತಮ್ಮ ಮಹಾಪ್ರಬಂಧದಲ್ಲಿ ಕಾಲುವೆ ಕೆಳತುದಿ ಮತ್ತು ಮೇಲ್ತುದಿ ರೈತರ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ಹೆಚ್ಚು ಸಮಸ್ಯೆಗಳನ್ನು ಎದುರಿಸುವ ಕೆಳತುದಿ ರೈತರು

ನೀರಿನ ಕೊರತೆಯ ಕಾರಣದಿಂದ ಹೆಚ್ಚು ಸಂಘಟಿತರಾಗುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಮೇಲ್ಬದಿ ರೈತರು ಸಂಘಟಿತರಾಗಲು ಆಸಕ್ತಿ ತೋರುವುದಿಲ್ಲ ಎನ್ನುವ ಅವರ ವರ್ತನೆಗಳ ಕುರಿತು ವಿವರಿಸಿದ್ದಾರೆ.

## ೩.೫. ಸಹಭಾಗಿತ್ವ ನೀರಾವರಿ ನಿರ್ವಹಣೆ ಕುರಿತ ಅಧ್ಯಯನಗಳು

ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಅಧ್ಯಯನ ಸಂಸ್ಥೆ (ಇಸಾರ್ಡ್) ಧಾರವಾಡ (೧೯೯೨) ತುಂಗಭದ್ರಾ ಎಡದಂಡೆ ಕಾಲುವೆಯ ೩೬/೫ಬಿ ಉಪವಿತರಣಾ ನಾಲೆಯ ಅಚ್ಚುಕಟ್ಟು ಪ್ರದೇಶದ ಧಡೇಸುಗೂರು ಗ್ರಾಮದಲ್ಲಿ ನೀರಾವರಿ ನಿರ್ವಹಣೆಯಲ್ಲಿ ರೈತರ ಪಾಲುಗೊಳ್ಳುವಿಕೆ ಬಗ್ಗೆ ನಡೆಸಿದ ಕ್ರಿಯಾ ಸಂಶೋಧನೆಯಲ್ಲಿ ಕಂಡುಕೊಂಡ ಸಂಗತಿಗಳೆಂದರೆ ರೈತರ ಮನವೊಲಿಕೆಯನ್ನು ಅವರೊಂದಿಗೆ ಇದ್ದುಕೊಂಡೇ ಮಾಡಿದರೆ ಮಾತ್ರ ಯಶಸ್ಸು ಸಾಧ್ಯ. ಸಂಘ ಮತ್ತು ಅದರ ಕರ್ತೃ ಸಂಸ್ಥೆಯ ನಡುವೆ ಉತ್ತಮ ಸಂಬಂಧ ಬೆಸೆಯಲು ಒಂದು ಕ್ರಿಯಾವರ್ಧಕ ಸಂಸ್ಥೆ ಇರಬೇಕಾಗುತ್ತದೆ. ರೈತರಿಗೆ ಅವರು ದುಡಿಯುವ ಹೊಲಗದ್ದೆಗಳಲ್ಲಿಯೇ ತರಬೇತಿ ನೀಡಬೇಕೆ ವಿನಹ ಒಂದು ಕೊಠಡಿಯಲ್ಲಿ ಕೂರಿಸಿ ಪಾಠ ಹೇಳುವುದರಿಂದ ಪ್ರಯೋಜನವಿಲ್ಲ. ಕಾರ್ಯಕ್ರಮ ಅನುಷ್ಠಾನದಲ್ಲಿ ಭಾಗಿಯಾಗುವ ಎಲ್ಲ ಇಲಾಖೆ ಮತ್ತು ಸಂಸ್ಥೆಗಳು ಸಮರ್ಪಣಾ ಭಾವದಿಂದ ಪಾಲುಗೊಂಡರೆ ಕಠಿಣವಾದುದನ್ನು ಸಾಧಿಸಬಹುದು. ವೈಯಕ್ತಿಕ ಸರದಿಗಿಂತ ಸಾಮೂಹಿಕ ವಾರಾಬಂದಿ ಹೆಚ್ಚು ಉಪಯುಕ್ತ. ಬೆಳೆಯ ಮಾದರಿಯನ್ನು ಅನುಷ್ಠಾನಗೊಳಿಸಲು ಹಲವಾರು ಇಲಾಖೆಗಳ ಸಹಯೋಗ ಬೇಕಾಗುತ್ತದೆ. ಮಣ್ಣಿನ ಸರ್ವೇಕ್ಷಣೆ, ಜಲಸಂಪನ್ಮೂಲದ ಅಧ್ಯಯನ, ಕೃಷಿ ತಜ್ಞರ ನೆರವು ಅವಶ್ಯಕವಾಗಿರುತ್ತದೆ.

ಭೌತಿಕ ವ್ಯವಸ್ಥೆಯ ನಿರ್ಮಾಣದಲ್ಲಿ ಗುತ್ತಿಗೆದಾರರು ಕೈಗೊಳ್ಳುವ ಕಾಮಗಾರಿ ಅತ್ಯಂತ ಕಳಪೆಯಾಗಿರುತ್ತದೆ. ಈ ಕಾಮಗಾರಿಗಳ ಗುಣಮಟ್ಟ ಕಾಯ್ದುಕೊಳ್ಳಲು ನೀರು ಬಳಕೆದಾರರಿಗೆ ಕಾಮಗಾರಿ ಉಸ್ತುವಾರಿಗೆ ಅವಕಾಶ ಕೊಡಬೇಕು. ಶಿಫಾರಸ್ಸು ಮಾಡಿದ ಬೆಳೆ ಮಾದರಿಯನ್ನು ರೈತರು ಪಾಲಿಸಲು ಮಾರುಕಟ್ಟೆ ಬೆಲೆ, ಬಂಡವಾಳ ಲಭ್ಯತೆ, ಕಾರ್ಮಿಕರ ಲಭ್ಯತೆ ಮೊದಲಾದ ಸಂಗತಿಗಳು ಅಡ್ಡಿಯಾಗುತ್ತವೆ. ಒಟ್ಟಾರೆ ಅಧ್ಯಯನದಲ್ಲಿ ಕಾಡಾದ ವಿವಿಧ ಇಲಾಖೆಗಳನ್ನು ಚೆನ್ನಾಗಿ ತೊಡಗಿಸಿಕೊಂಡು ಭೌತಿಕ ನಿರ್ಮಿತಿಗಳನ್ನು ಪುನರ್ ಸಜ್ಜುಗೊಳಿಸಿದ ನಂತರ ರೈತರಿಗೆ ವಿಶ್ವಾಸ ಬಂದು ಕೊನೆಭಾಗದ ರೈತರು ಸಂಘದಲ್ಲಿ ಕ್ರಿಯಾಶೀಲರಾಗಿರುವುದು ಕಂಡುಬರುತ್ತದೆ.

ಧಾರವಾಡದ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಅಧ್ಯಯನ ಸಂಸ್ಥೆ (೧೯೯೩) ಮಲಪ್ರಭಾ ಬಲದಂಡೆ ನಾಲೆ ಅರೆಕುರಹಟ್ಟಿ ಅಚ್ಚುಕಟ್ಟು ಪ್ರದೇಶದಲ್ಲಿ ನೀರಾವರಿ ನಿರ್ವಹಣೆಯಲ್ಲಿ ರೈತರ ಪಾಲುಗೊಳ್ಳುವಿಕೆಯ ಕ್ರಿಯಾ ಸಂಶೋಧನೆಯಲ್ಲಿ ಕಂಡುಕೊಂಡ ತಥ್ಯಗಳೆಂದರೆ ತಾತ್ವಿಕ ಆಧಾರಿತ ವಾರಾಬಂದಿ ಅನುಸೂಚಿಗಳು ಪ್ರಾಯೋಗಿಕವಾಗಿ ಕೆಲಸ ಮಾಡುವುದಿಲ್ಲ. ರೈತರ ಸಮಸ್ಯೆಗಳು ಮತ್ತು ಅಭಿಲಾಷೆಗಳನ್ನು ಮನಗಂಡು ಪ್ರತಿ ವಿತರಣಾ ನಾಲೆಗಳ ವ್ಯಾಪ್ತಿಯ ಸ್ಥಳೀಯ ಸ್ಥಿತಿಗತಿಗನುಗುಣವಾಗಿ

ವಾರಾಬಂದಿಯನ್ನು ಪರಿವರ್ತಿಸುವ ಅಗತ್ಯವನ್ನು ತಿಳಿಸುತ್ತದೆ. ರೈತರು ಮತ್ತು ಸರ್ಕಾರದ ನಡುವಿನ ಸಂಬಂಧವನ್ನು ಉತ್ತಮಪಡಿಸಲು ಒಂದು ಮಧ್ಯವರ್ತಿ ವ್ಯವಸ್ಥೆಯು ಪೂರ್ವಾಪೇಕ್ಷಿತವಾದುದಾಗಿದೆ. ಹೀಗಿದ್ದಾಗ ಮಾತ್ರ ಕಾಲುವೆಯ ಮೇಲ್ತುದಿ ಮತ್ತು ಕೆಳತುದಿ ರೈತರಿಗೆ ಸಮಾನವಾಗಿ ನೀರು ಹಂಚಿಕೆ ಸಾಧ್ಯ. ಬೆಳೆ ಮಾದರಿ ಅನುಸರಣೆ ಸಾಧ್ಯವಿಲ್ಲ. ರೈತರಿಗೆ ಸಾಧುವೆನಿಸಿದ ಮತ್ತು ಲಾಭದಾಯಕವೆನಿಸುವ ಬೆಳೆಗಳಿಗೆ ಅವಕಾಶ ಕಲ್ಪಿಸಬೇಕೆ ವಿನಹ ಬೆಳೆಯ ಮಾದರಿಯನ್ನು ಹೇರುವುದು ಸರಿಯಲ್ಲ. ಭೌತಿಕ ವ್ಯವಸ್ಥೆಯನ್ನು ಕ್ರಮಬದ್ಧವಾಗಿ ವಿನ್ಯಾಸಗೊಳಿಸಿದರೆ ಮಾತ್ರ ಅಗತ್ಯ ಪ್ರಮಾಣದ ನೀರನ್ನು ರೈತರಿಗೆ ತಲುಪಿಸಲು ಸಾಧ್ಯವಾಗುತ್ತದೆ. ರೈತರು ಜಾಗೃತರಾಗಿದ್ದು, ನೀರಿನ ಮಿತವ್ಯಯದ ಬಗ್ಗೆ ಅವರಿಗೆ ಅರಿವಿದ್ದರೂ ಅವರು ಬದಲಾವಣೆಗೆ ಸ್ಪಂದಿಸಲಾರರು. ಸಂಘದ ಮಹತ್ವವನ್ನು ಮನದಟ್ಟು ಮಾಡಿದರೆ ಮತ್ತು ಅಗತ್ಯ ಸನ್ನಿವೇಶಗಳನ್ನು ಸೃಷ್ಟಿಸಿದರೆ ಮಾತ್ರ ಪರಿವರ್ತನೆಗೆ ಒಪ್ಪುತ್ತಾರೆ. ಅಧಿಕಾರಿಶಾಹಿಯ ಸಕಾರಾತ್ಮಕ ಪಾಲುಗೊಳ್ಳುವಿಕೆಯಿಂದ ಮಾತ್ರ ರೈತರ ನಿರ್ಲಿಪ್ತ ಮನೋಧೋರಣೆ ಬದಲಾಗಬಲ್ಲದು. ಇಲ್ಲಿ ರಾಜಕೀಯ ನಾಯಕರ ಪಾತ್ರವೂ ಮುಖ್ಯವೆನಿಸುತ್ತದೆ. ರೈತರ ನಡುವೆ ಉದ್ಭವಿಸುವ ಸಂಘರ್ಷ ಮತ್ತು ತಿಕ್ಕಾಟಗಳನ್ನು ಹೋಗಲಾಡಿಸಿ ಪರಸ್ಪರರಲ್ಲಿ ಅನ್ಯೋನ್ಯತೆಯನ್ನು ತಂದಾಗ ಮಾತ್ರ ನೀ.ಬ.ಸ. ಸಂಘದ ಸ್ಥಾಪನೆಯ ಉದ್ದೇಶ ಈಡೇರುತ್ತದೆ ಎನ್ನುವುದನ್ನು ಕ್ರಿಯಾ ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

ಕರ್ನಾಟಕದ ಬಿಜಾಪುರ ಜಿಲ್ಲೆಯ ಚಿಕ್ಕಪಡಸಲಿಗಿ ಬ್ಯಾರೇಜ್‌ನ್ನು ಫಲಾನುಭವಿಗಳೇ ನಿರ್ಮಾಣ ಮಾಡಿ ನಿರ್ವಹಣೆ ಮಾಡಿರುವುದು ಇಡೀ ದೇಶದಲ್ಲಿಯೇ ಒಂದು ಮಾದರಿಯಾಗಿರುವುದು ಕಂಡುಬರುತ್ತದೆ. ಈ ಕುರಿತು ಒಂದು ಅಧ್ಯಯನ ನಡೆದಿದೆ (ರಾಜೇಂದ್ರ ಪೊದ್ದಾರ್-೧೯೯೯). ಚಿಕ್ಕಪಡಸಲಗಿ ಬ್ಯಾರೇಜ್‌ನ್ನು ಆ ಪ್ರದೇಶದ ರೈತರ ಸಾಮೂಹಿಕ ಪ್ರಯತ್ನದ ಮೂಲಕ ನಿರ್ಮಾಣ ಮಾಡಲಾಗಿದೆ. ಕೃಷ್ಣ ತೀರ ರೈತಸಂಘವನ್ನು ಸ್ಥಾಪಿಸಿಕೊಂಡು ಆ ಮೂಲಕ ಸರಕಾರೇತರ ಸಂಸ್ಥೆಗಳು ಮತ್ತು ಸರಕಾರದ ಅಲ್ಪನೆರವಿನೊಂದಿಗೆ ವಿಶಾಲ ಪ್ರದೇಶಕ್ಕೆ ನೀರಾವರಿಯನ್ನು ಕಲ್ಪಿಸಲಾಗಿದೆ. ಸರಕಾರದ ಯೋಜನೆಗಳಿಗಿಂತ ಕಡಿಮೆ ವೆಚ್ಚದಲ್ಲಿ, ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಕೈಗೊಂಡಿರುವುದು ಅಧ್ಯಯನಕಾರರು ಗುರುತಿಸಿದ್ದಾರೆ. ಯಾವುದೇ ವಿಳಂಬವಿಲ್ಲದೆ ಶೀಘ್ರವಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ.

ಫಲಾನುಭವಿಗಳ ಶ್ರಮದಾನ, ಹಣಕಾಸಿನ ನೆರವಿನಲ್ಲಿ ಹೆಚ್ಚಿನ ವೆಚ್ಚವನ್ನು ತುಂಬಿಕೊಳ್ಳಲಾಗಿದೆ. ಸಹಭಾಗಿತ್ವಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ. ಬ್ಯಾರೇಜ್‌ಗೆ ಮಾಡಿದ ಸಾಲವನ್ನು ೬ ವರ್ಷಗಳಲ್ಲಿ ಮರುಪಾವತಿ ಮಾಡಲು ನಿರ್ಧರಿಸಿರುವುದು ರೈತರ ಉತ್ತರದಾಯಿತ್ವಕ್ಕೆ ಸಾಕ್ಷಿಯಾಗಿದೆ. ಯೋಜನೆಯ ಆರಂಭದಲ್ಲಿ ಹಣಕಾಸಿನ ಕೊರತೆ, ವಿದ್ಯುತ್ ಕೊರತೆ, ನೌಕರಶಾಹಿ ವಿಳಂಬನೀತಿ, ರಾಜಕೀಯ ಪೈಪೋಟಿ ಮೊದಲಾದ ಅಡೆತಡೆಗಳು ಕಂಡುಬಂದವು. ಆದರೆ ಅವುಗಳನ್ನು ಕ್ರಿಯಾಶೀಲ ನಾಯಕತ್ವದ ಮೂಲಕ ನಿವಾರಿಸಿಕೊಳ್ಳಲಾಗಿದೆ. ಬಳಕೆದಾರರ ಸಂಪೂರ್ಣ ಸಹಕಾರ, ಬೆಂಬಲ ಮತ್ತು

ಸಹಭಾಗಿತ್ವ ಎಲ್ಲ ಸಮಸ್ಯೆಗಳನ್ನು ಪರಿಹರಿಸಿವೆ. ಇಂತಹ ಸಣ್ಣ ಪ್ರಮಾಣದ ರೈತ ಸ್ನೇಹಿ ಮತ್ತು ಬಳಕೆದಾರರರ ಪಾಲುದಾರಿಕೆಯಲ್ಲಿ ಯೋಜನೆಗಳನ್ನು ಕೈಗೊಂಡರೆ ಸರಕಾರದ ಹೊರೆಯನ್ನು ತಗ್ಗಿಸಬಹುದು. ಪರಿಸರದ ಹಾನಿಯನ್ನು ನಿವಾರಿಸಲು ಸಹಾಯಕವಾಗುತ್ತದೆ. ಇದರಿಂದ ಜನರ ವರಮಾನ, ಜೀವನಮಟ್ಟ, ಸಾಮಾಜಿಕ ಸ್ಥಿತಿಗತಿ ಉತ್ತಮಗೊಂಡಿರುವ ಬಗ್ಗೆ ಅಧ್ಯಯನದಲ್ಲಿ ತಿಳಿದುಬರುತ್ತದೆ. ಅದೇ ರೀತಿ ಶಿಕ್ಷಣದ ಕೊರತೆಯಿಂದ ಜನರು ದುಶ್ಚಟಗಳಿಗೆ ಬಲಿಯಾಗಿರುವ ಕುರಿತು ಆತಂಕ ವ್ಯಕ್ತಪಡಿಸಲಾಗಿದೆ.

ಜಸ್ವಿನ್ ಜೈರತ್ (೧೯೯೯) ಆಂಧ್ರಪ್ರದೇಶದ ಸಹಭಾಗಿತ್ವ ನೀರಾವರಿ ನಿರ್ವಹಣೆಯ ಅನುಭವಗಳನ್ನು ವಿಮರ್ಶಾತ್ಮಕವಾಗಿ ವಿವರಿಸಿದ್ದಾರೆ. ೧೯೯೭ ರ ನೀರಾವರಿ ಕಾಯ್ದೆಯಂತೆ ರಾಜ್ಯದಲ್ಲಿ ಎಲ್ಲ ಪ್ರಕಾರದ ನೀರಾವರಿ ಬಳಕೆದಾರರನ್ನು ಕಡ್ಡಾಯವಾಗಿ ನೀ.ಬ. ಸಂಘಗಳ ಸದಸ್ಯರನ್ನಾಗಿ ಮಾಡಲಾಗಿದೆ. ಈ ಕಾರಣದಿಂದ ೧೯೯೯ ರ ವೇಳೆಗೆ ಸುಮಾರು ೧೦ ಸಾವಿರ ನೀ.ಬ. ಸಂಘಗಳು ಸ್ಥಾಪನೆಯಾಗಿದ್ದವು. ಈ ಸಂಘಗಳಲ್ಲಿ ಭೂರಹಿತ ಮಹಿಳೆ ಮತ್ತು ರೈತರಿಗೆ ಯಾವುದೇ ಸ್ಥಾನವಿಲ್ಲದಿರುವ ಬಗ್ಗೆ ಕಾಯ್ದೆಯ ದೋಷವನ್ನು ಎತ್ತಿ ತೋರಿಸಿದ್ದಾರೆ. ನೀ.ಬ. ಸಂಘಗಳು ಮೂರು ಹಂತಗಳಲ್ಲಿ ರಚಿಸಲ್ಪಟ್ಟಿವೆ. ನೀರು ಬಳಕೆದಾರರ ಸಂಘಗಳು, ವಿತರಣಾನಾಲಾ ಮಟ್ಟದ ಸಮಿತಿ, ಯೋಜನಾಮಟ್ಟದ ಸಮಿತಿ. ಈ ನೀರಾವರಿ ಸುಧಾರಣೆಗೆ ರಾಜಕೀಯ ಬೆಂಬಲವಿದೆಯಾದರೂ ಇದೊಂದು 'ಮೇಲಿನಿಂದ ಕೆಳಗೆ ಹರಿಯುವ' ಅಭಿವೃದ್ಧಿ ತಂತ್ರವೆಂದೂ ಟೀಕೆಗೆ ಗುರಿಯಾಗಿರುವುದನ್ನು ಉಲ್ಲೇಖಿಸಲಾಗಿದೆ.

ನಿರಂಜನ್ ಪಂಥ್ (೧೯೯೯) ತಮ್ಮ ಪ್ರಬಂಧದಲ್ಲಿ ಮಹಾರಾಷ್ಟ್ರದಲ್ಲಿ ನೀರು ಬಳಕೆದಾರರ ಸಂಘಗಳ ಉಗಮವನ್ನು ವಿವರಿಸುತ್ತಾ ೧೯೦೨-೦೩ರ ಸಾಲಿನಲ್ಲಿ ಸರ್.ಎಂ. ವಿಶ್ವೇಶ್ವರಯ್ಯನವರು ಮೊಟ್ಟ ಮೊದಲ ಬಾರಿಗೆ ಮಹಾರಾಷ್ಟ್ರದ ಕಂದಕವಾಸ್ಲ ಕಾಲುವೆಗಳ ವ್ಯಾಪ್ತಿಯಲ್ಲಿ ನೀ.ಬ. ಸಂಘಗಳ ಸ್ಥಾಪನೆಗೆ ಸಲಹೆ ಮಾಡಿ ಅನುಷ್ಠಾನಗೊಳಿಸಿದ್ದನ್ನು ವಿವರಿಸಲಾಗಿದೆ. ಸರ್ ಎಂ.ವಿ. ನೇತೃತ್ವದಲ್ಲಿ ೧೯೩೮ ರ ನೀರಾವರಿ ವಿಚಾರಣಾ ಸಮಿತಿಯು ನೀರು ಪಂಚಾಯಿತಿಗಳ ಸ್ಥಾಪನೆಗೆ ಸಲಹೆ ಮಾಡಿದ್ದನ್ನು ಉಲ್ಲೇಖಿಸಲಾಗಿದೆ.

ಈ ರಾಜ್ಯದಲ್ಲಿ ಬಳಕೆದಾರರರ ಸಹಭಾಗಿತ್ವದಲ್ಲಿ ನೀರಾವರಿ ನಿರ್ವಹಣೆ ಎಷ್ಟರ ಮಟ್ಟಿಗೆ ಸುಧಾರಣೆಗೊಂಡಿದೆ ಎಂಬುದನ್ನು ಸಂಘಗಳ ಸ್ಥಾಪನೆಯ ಪೂರ್ವದಲ್ಲಿನ ನೀರಾವರಿ ನಿರ್ಮಾಣ ಸಾಮರ್ಥ್ಯ ಮತ್ತು ಬಳಕೆಯ ಬಗ್ಗೆ ಆನುಷಂಗಿಕ ಮಾಹಿತಿ ಪಡೆದು, ಪ್ರಸ್ತುತ ಬಳಕೆದಾರರ ಸಂಘಗಳು ಸ್ಥಾಪನೆಯ ನಂತರದ ಸ್ಥಿತಿಗತಿಗಳನ್ನು ಕ್ಷೇತ್ರಾಧ್ಯಯನದ ಮೂಲಕ ಅಂಕಿ-ಅಂಶಗಳನ್ನು ತುಲನಾತ್ಮಕವಾಗಿ ಪರಿಶೀಲಿಸಲಾಗಿದೆ. ಒಟ್ಟಾರೆ ಫಲಿತವೆಂದರೆ ಸಂಘಗಳ ಸ್ಥಾಪನೆಯ ನಂತರ ನೀರು ನಿರ್ವಹಣೆಯು ಉತ್ತಮಗೊಂಡಿದ್ದು ಸಾಗುವಳಿಗೆ ಒಳಪಟ್ಟ ಪ್ರದೇಶವು ಹೆಚ್ಚಳಗೊಂಡಿರುವುದನ್ನು ವಿವರಿಸಲಾಗಿದೆ. ನೀರು ದರ ಪಾವತಿಯಲ್ಲಿ ಸುಧಾರಣೆ ಕಂಡುಬಂದಿದ್ದು ಸ್ವತಃ ಸಂಘಗಳೇ ಸಣ್ಣ ಪ್ರಮಾಣದ ಕಾಮಗಾರಿಗಳನ್ನು ಕೈಗೊಂಡಿರುವುದನ್ನು ಉದಾಹರಿಸಲಾಗಿದೆ.

ಕ್ಷೇತ್ರಕಾರ್ಯದಲ್ಲಿ ಅವಶ್ಯಕ ಪ್ರಶ್ನಾವಳಿಗಳನ್ನು ನೀಡಿ ಪ್ರಾಥಮಿಕ ಮಾಹಿತಿ ಪಡೆಯಲಾಗಿದೆ. ಈ ಪ್ರಶ್ನಾವಳಿಗಳಲ್ಲಿ ನೀ.ಬ. ಸಂಘಗಳ ಅಧ್ಯಕ್ಷ/ಕಾರ್ಯದರ್ಶಿಗಳ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳನ್ನು ಮಾಪನ ಮಾಡಲು ಅವರ ವೃತ್ತಿ, ಹೊಂದಿರುವ ಭೂಮಿಯ ಪ್ರಮಾಣ, ದಾಖಲೆಗಳನ್ನು ನಿರ್ವಹಿಸುವ ದಕ್ಷತೆ, ಆಂತರಿಕ ಪ್ರಜಾಪ್ರಭುತ್ವದ ಮಟ್ಟ, ನೀರಿನ ವಿತರಣೆಯಲ್ಲಿ ಸಮಾನತೆಯ ಮಟ್ಟ ಮತ್ತು ನಿರ್ದೇಶಕ ಮಂಡಲಿಯ ಸದಸ್ಯರು ಹೊಂದಿರುವ ಭೂಹಿಡುವಳಿ ಪ್ರಮಾಣ ಹೀಗೆ ಆರು ಸೂಚಿಗಳನ್ನು ಬಳಕೆ ಮಾಡಿಕೊಳ್ಳಲಾಗಿದೆ. ಈ ಪ್ರಬಂಧದಲ್ಲಿ ಬಳಕೆ ಮಾಡಿರುವ ಸೂಚಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಕೆ ಮಾಡಿಕೊಳ್ಳಲು ಅನುಕೂಲವಾಗಿದೆ.

೨೦೦೦ನೇ ಇಸವಿಯಲ್ಲಿ ಹೊಸದಾಗಿ ರಚನೆಯಾದ ಚತ್ತೀಸ್‌ಗಡ ರಾಜ್ಯದಲ್ಲಿ ಈ ಹಿಂದೆ ಮಧ್ಯಪ್ರದೇಶದಲ್ಲಿದ್ದ ಮಾದರಿಯಲ್ಲಿಯೇ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾಯ್ದೆಯನ್ನು ಬಳಕೆ ಮಾಡಲಾಗಿದೆ. ಅದರಂತೆ ಪ್ರಸ್ತುತ ೯೪೨ ನೀ.ಬ. ಸಂಘಗಳ ಸ್ಥಾಪನೆಯಾಗಿದೆ. ಈ ಸಂಘಗಳನ್ನು ನಾಲ್ಕು ಹಂತಗಳನ್ನಾಗಿ ಜೋಡಿಸಲಾಗಿದೆ. ನೀ.ಬ. ಸಂಘ, ವಿತರಣಾ ನಾಲಾ ಹಂತ, ಯೋಜನಾ ಮಟ್ಟ ಮತ್ತು ರಾಜ್ಯಮಟ್ಟದ ಸಮಿತಿಗಳನ್ನು ಸ್ಥಾಪಿಸಲು ಅವಕಾಶ ಕಲ್ಪಿಸಲಾಗಿದೆ (ದಿನೇಶ್ ಕೆ ಮರೋಥಿಯಾ - ೨೦೦೫). ಪ್ರಸ್ತುತ ಅಧ್ಯಯನದಲ್ಲಿ ಚತ್ತೀಸ್‌ಗಡ ರಾಜ್ಯದ ಮಹಾನದಿ ಜಲಾಶಯ ಯೋಜನೆ ಮಧಾರ್ ಉಪನಾಲೆಯ ವ್ಯಾಪ್ತಿಯ ೨೨ ನೀ.ಬ. ಸಂಘಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಸಂದರ್ಶಕ ಪ್ರಶ್ನಾವಳಿ, ಗುಂಪು ಚರ್ಚೆ ವಿಧಾನಗಳನ್ನು ಅಳವಡಿಸಿಕೊಂಡು ನೀ.ಬ. ಸಂಘಗಳ ಅಧ್ಯಕ್ಷರು, ಆಯ್ಕೆಯಾದ ಸದಸ್ಯರು, ನಾಮಕರಣಗೊಂಡ ಸದಸ್ಯರು ಮತ್ತು ನೀರಾವರಿ ಇಂಜಿನಿಯರ್‌ಗಳು ಹಾಗೂ ಕೃಷಿ ವಿಸ್ತರಣಾಧಿಕಾರಿಗಳನ್ನು ಅಧ್ಯಯನದಲ್ಲಿ ಮೌಲ್ಯಮಾಪನ ಮಾಡಲಾಗಿದೆ. ಕ್ಷೇತ್ರಕಾರ್ಯದಲ್ಲಿ, ಕಾಲುವೆಗಳ ಭೌತಿಕ ಸ್ಥಿತಿಗತಿ, ನೀರಿನ ನಿಯಂತ್ರಕಗಳ ಗುಣಮಟ್ಟ, ನೀರಿನ ಸೋರಿಕೆ, ನೀರಿನ ಮಾಪಕಗಳ ಸ್ಥಿತಿ, ಹೂಳು ತುಂಬಿರುವಿಕೆ ಕಾಲುವೆಗಳಲ್ಲಿ ಗಿಡಗಂಟಿ, ಕಸಕಡ್ಡಿಗಳ ಅಡ್ಡಿ, ಸಹಭಾಗಿತ್ವ ನೀರಾವರಿ ನಿರ್ವಹಣೆಯ ಬಗ್ಗೆ, ನಿಯಮಗಳ ಕುರಿತು ರೈತರ ಅರಿವು ಇತ್ಯಾದಿಗಳನ್ನು ಪರೀಕ್ಷೆಗೆ ಗುರಿಪಡಿಸಲಾಗಿದೆ.

ಅಧ್ಯಯನದಲ್ಲಿ ತಿಳಿದು ಬಂದ ಫಲಿತಗಳೆಂದರೆ ಶೇ. ೧೦ರಷ್ಟು ಸಂಘಗಳು ಸಾಕಷ್ಟು ನೀರನ್ನು ಪಡೆದರೆ, ಪ್ರತಿಶತ ೪೦ ರಷ್ಟು ಸಂಘಗಳು ಮಧ್ಯಮ ಪ್ರಮಾಣದ ನೀರನ್ನು ಪಡೆಯುತ್ತವೆ. ಉಳಿದ ಪ್ರತಿಶತ ೫೦ ರಷ್ಟು ಸಂಘಗಳ ವ್ಯಾಪ್ತಿಯಲ್ಲಿ ನೀರಿನ ಕೊರತೆಯಿರುವುದು ಕಂಡುಬಂದಿದೆ. ಸಂಘಗಳಿಗೆ ಅಧ್ಯಕ್ಷರು ಮತ್ತು ಸದಸ್ಯರು ಬಹುತೇಕ ಅವಿರೋಧವಾಗಿ ಆಯ್ಕೆಯಾಗಿರುವುದು ಕಂಡುಬರುತ್ತದೆ. ಹೆಚ್ಚಿನ ಅಧ್ಯಕ್ಷರು ಹಿಂದುಳಿದ ಜಾತಿಗಳಿಂದ ಆಯ್ಕೆಯಾಗಿದ್ದಾರೆ. ಬಹುತೇಕ ಅಧ್ಯಕ್ಷರು ರಾಜಕೀಯ ಪ್ರೇರಣೆಯಿಂದ ಆಯ್ಕೆಯಾಗಿರುವುದು ಕಂಡುಬಂದಿದೆ. ನೀರು ಬಳಕೆದಾರರ ಸಂಘಗಳಲ್ಲಿ ಕೆಲವು ಉಪ ಸಮಿತಿಗಳನ್ನು ನೇಮಕ ಮಾಡಲಾಗಿರುತ್ತದೆ. ಈ ಉಪ ಸಮಿತಿಗಳು, ಸಂಘಗಳ ನಿಯಮಗಳಿಗೆ,

ದಂಡದ ನಿಯಮಗಳಿಗೆ, ವಿವಾದಗಳ ಇತ್ಯರ್ಥಗಳಿಗೆ, ನೀರಾವರಿ ಪ್ರದೇಶದ ಎಲ್ಲೆಯ ನಿಯಮಗಳಿಗೆ ಸಂಬಂಧಿಸಿರುತ್ತದೆ. ಕೆಲವು ಸಂಘಗಳು ರಾಜಕೀಯವಾಗಿ ಬಲಿಷ್ಠವಾಗಿದ್ದು, ತಮ್ಮ ಪಾಲಿನ ಯೋಜನೆಗಳನ್ನು, ಅನುದಾನಗಳನ್ನು, ನಿಗದಿತ ವೇಳೆಗೆ, ಸಾಕಷ್ಟು ನೀರನ್ನು ಪಡೆಯುವಲ್ಲಿ ಶಕ್ತವಾಗಿರುವುದು ಕಂಡುಬಂದಿದೆ. ಈ ಸಂಘಗಳು ರಾಜಕೀಯದೊಂದಿಗೆ ಜೋಡಿಸಲ್ಪಟ್ಟಿವೆ.

ಸಂಘಗಳ ಕಾರ್ಯ ನಿರ್ವಹಣೆಯ ಬಗ್ಗೆ ಅಧ್ಯಯನದಲ್ಲಿ ತಿಳಿದುಬಂದ ಸಂಗತಿಗಳೆಂದರೆ, ಸಂಘಗಳ ಮುಖ್ಯ ನಿರ್ಧಾರಗಳು ಉಪಸಮಿತಿ ಮತ್ತು ಆಡಳಿತ ಮಂಡಳಿಗಳಲ್ಲಿಯೇ ತೆಗೆದುಕೊಳ್ಳಲಾಗುತ್ತದೆ. ಕೇವಲ ೨ ನೀ.ಬ. ಸಂಘಗಳು ಮಾತ್ರ ಸರ್ವ ಸದಸ್ಯರನ್ನು ಒಳಗೊಂಡ ಮಹಾಸಭೆಗಳನ್ನು ನಡೆಸಿವೆ. ೧೨ ಸಂಘಗಳು ವಿತರಣಾ ನಾಲೆಗಳಲ್ಲಿ ನೀರಿನ ಮಾಪಕಗಳನ್ನು ಅಳವಡಿಸಿಕೊಂಡಿವೆ. ಆ ಸಂಘಗಳು ಮಾತ್ರ ದಿನನಿತ್ಯದ ನೀರನ್ನು ಅಳೆಯುವ ಮಾಪಕಗಳನ್ನು ಹೊಂದಿವೆ. ಸ್ವಯಂಪ್ರೇರಿತ ಶ್ರಮದಾನದಲ್ಲಿ ಎಲ್ಲಾ ಸಂಘಗಳೂ ಹಿಂದುಳಿದಿವೆ. ಪ್ರತಿಶತ ೩೫ ರಿಂದ ೪೦ ರಷ್ಟು ರೈತರು ಮಾತ್ರ ನೀರು ದರ ಪಾವತಿ ಮಾಡಿದ್ದಾರೆ. ಅನೇಕ ಸಂಘಗಳು ಸಹಾಯಕ ಇಂಜಿನೀಯರ್‌ಗಳನ್ನು ಅವಲಂಬಿಸಿರುವುದು ಕಂಡುಬಂದಿದೆ. ಸಂಘಗಳನ್ನು ಸಶಕ್ತಗೊಳಿಸಲು ಸಾಂಸ್ಕೃತಿಕ ಸುಧಾರಣೆಗಳ ಅಗತ್ಯವಿದ್ದು, ಈ ದಿಶೆಯಲ್ಲಿ ನೌಕರಶಾಹಿ ಮತ್ತು ರಾಜಕೀಯ ಇಚ್ಛಾಶಕ್ತಿ ಪ್ರಮುಖ ಪಾತ್ರ ವಹಿಸುತ್ತದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಹೀಗೆ ನೀರಾವರಿ ನಿರ್ವಹಣೆ ಕುರಿತು ಭಾರತದ ವಿವಿಧ ರಾಜ್ಯಗಳ ಬಗೆಗೆ ಅಧ್ಯಯನ ನಡೆದಿದೆ. ಇಲ್ಲಿ ಅಧ್ಯಯನದ ಹಲವು ಮಾದರಿಗಳನ್ನು ಗಮನಿಸಬಹುದು. ಯೋಜನೆಯ ತಾಂತ್ರಿಕ ಕಾರಣಕ್ಕಾಗಿ ಮಾಡುವ ಅಧ್ಯಯನಗಳು ಕೇವಲ ಅಂಕಿ-ಅಂಶಗಳನ್ನೇ ಆತ್ಯಂತಿಕ ಸತ್ಯ ಎಂದು ನಂಬಿದೆ. ಇನ್ನು ಲಾಭ-ನಷ್ಟ ಪರಿಶೀಲಿಸುವ ಆರ್ಥಿಕ ನೆಲೆಯಲ್ಲಿ ಕೆಲವು ಅಧ್ಯಯನಗಳಾಗಿವೆ. ಹಾಗೆ ನೋಡಿದರೆ ಇಸಾರ್ಡ್ ಅಧ್ಯಯನ, ರಾಜೇಂದ್ರಪೋದ್ದಾರ್ ನಡೆಸಿರುವ ಅಧ್ಯಯನ ಮುಂತಾದವುಗಳು ಇದಕ್ಕೆ ಉದಾಹರಣೆ. ಇನ್ನು ದಿನೇಶ್ ಕೆ. ಮರೋಥಿಯಾ ಅವರು ಸಹಭಾಗಿತ್ವ ನಿರ್ವಹಣೆಯನ್ನು ರಾಜಕೀಯ ಫಲಿತಗಳನ್ನು ಆಧರಿಸಿ ಚರ್ಚಿಸಿದ್ದಾರೆ. ನೀರು ಬಳಕೆದಾರರ ಆತ್ಮಕಥನದ ಮಾದರಿಯಲ್ಲಿ ಈವರೆಗೆ ನೀರಾವರಿ ನಿರ್ವಹಣೆಯ ಬಗೆಗೆ ಅಧ್ಯಯನಗಳು ಆದದ್ದು ಕಡಿಮೆ. ಪ್ರಸ್ತುತ ಈ ಪ್ರಬಂಧದಲ್ಲಿ ಅಂತಹ ಮಾದರಿಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ.



ಸಹಭಾಗಿತ್ವ ನೀರಾವರಿ ನಿರ್ವಹಣೆ ಕುರಿತು ಇನ್ನು ಗಮನಿಸಬೇಕಾದ ಅಧ್ಯಯನಗಳೆಂದರೆ, ಕತಾರ್‌ಸಿಂಗ್ ಮತ್ತು ಇತರರು (೧೯೯೬), ಪೂರ್ಣಿಮ.ಕೆ.ಎಸ್. (೨೦೦೧) ರೂಕ್‌ಶಾನ್‌ಬೋಸ್ (೨೦೦೩) ಹಾಗೂ ಪಾರ್ಥಸಾರಥಿ (೨೦೦೬). ಈ ಅಧ್ಯಯನಗಳಲ್ಲಿ ನೀರು ಬಳಕೆದಾರರ ನಿರ್ವಹಣಾ ಸಾಮರ್ಥ್ಯವನ್ನು ಒರೆಗೆ ಹಚ್ಚಲಾಗಿದೆ. ನೀರಾವರಿ ಇಲಾಖೆಯ ಅಧಿಕಾರಿಗಳ ಲೋಪದೋಷಗಳನ್ನು

ಚರ್ಚಿಸಿ, ಬಳಕೆದಾರರ ಸಂಘಗಳ ಹಣಕಾಸಿನ ದುಸ್ಥಿತಿಯನ್ನು ವಿಶ್ಲೇಷಿಸಲಾಗಿದೆ. ಇಂದು ಭಾರತದಲ್ಲಿ ಒಂದು ದೊಡ್ಡ ಘೋಷಣೆಯಾಗಿರುವ ಸಹಭಾಗಿತ್ವ ನೀರಾವರಿ ನಿರ್ವಹಣೆ ವಾಸ್ತವದಲ್ಲಿ ಯಾವುದೇ ಪ್ರಗತಿ ಸಾಧಿಸಿಲ್ಲ ಎನ್ನುವುದನ್ನು ಈ ಅಧ್ಯಯನಗಳು ಅಂಕಿ-ಅಂಶಗಳ ಸಹಿತ ವಿವರಿಸಿವೆ. ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳು ಸಹಭಾಗಿತ್ವ ನೀರಾವರಿ ನಿರ್ವಹಣೆಗೆ ಸ್ಪಂದಿಸುತ್ತಿಲ್ಲ ಎನ್ನುವುದನ್ನು ರುಜುವಾತು ಮಾಡಲಾಗಿದೆ. ಆದರೆ ಈ ಎಲ್ಲಾ ಅಧ್ಯಯನಗಳು ಅಂಕಿ-ಸಂಖ್ಯೆಗಳಿಗೆ ಪ್ರಾಮುಖ್ಯತೆಯನ್ನು ನೀಡಿವೆಯೇ ಹೊರತು ಮಾನವಿಕ ಸಾಮಾಜಿಕ ಸಂಗತಿಗಳನ್ನು ಪರಿಗಣಿಸಿಲ್ಲ.

**೩.೬. ನೀರು ಬಳಕೆದಾರರ ಸಹಕಾರ ಸಂಘಗಳ ಸಮಾಜೋ ಆರ್ಥಿಕ ವಿಶ್ಲೇಷಣೆ**

ರತ್ನರೆಡ್ಡಿ ಮತ್ತು ಪೃಥ್ವಿಕರ್ ರೆಡ್ಡಿ (೨೦೦೬) ಸಹಭಾಗಿತ್ವ ನೀರಾವರಿ ನಿರ್ವಹಣೆ ಎಷ್ಟರ ಮಟ್ಟಿಗೆ ಸಹಭಾಗಿತ್ವ ಎಂದು ಪ್ರಶ್ನಿಸುವ ಮೂಲಕವೇ ಆಂಧ್ರಪ್ರದೇಶದಲ್ಲಿನ ನೀರು ಬಳಕೆದಾರರ ಸಂಘಗಳ ಬಗ್ಗೆ ವಿವರಿಸಿದ್ದಾರೆ. ಜಲಸಂಪನ್ಮೂಲದ ನ್ಯಾಯಯುತ ನಿರ್ವಹಣೆ ಬಗ್ಗೆ ನೀತಿ ಧೋರಣೆಗಳ ರಚನೆಯ ವಿದ್ಯಮಾನ ಜಾಗತಿಕವಾಗಿ ಬೆಳವಣಿಗೆಯಾಗಿರುವುದನ್ನು ಗುರುತಿಸಲಾಗಿದೆ. ನೀರಾವರಿ ನಿರ್ವಹಣೆಯಲ್ಲಿ ಈಗಾಗಲೇ ಫಿಲಿಪ್ಪೈನ್ಸ್, ಮೆಕ್ಸಿಕೋ, ಚಿಲಿ ಮತ್ತು ಆಸ್ಟ್ರೇಲಿಯಾ ದೇಶಗಳು ಕೆಲಮಟ್ಟಿನ ಯಶಸ್ಸು ಸಾಧಿಸಿರುವ ಬಗ್ಗೆ ವಿವರಿಸಿ ಭಾರತದಲ್ಲಿ ಅದರ ಪ್ರಗತಿಯ ಪಥದಲ್ಲಿ ಕಂಡುಬರುತ್ತಿರುವ ಅಡ್ಡಿ ಆತಂಕಗಳನ್ನು ಪಟ್ಟಿ ಮಾಡಲಾಗಿದೆ.

ಆಂಧ್ರಪ್ರದೇಶದ ನೀರಾವರಿ ಕ್ಷೇತ್ರದಲ್ಲಿ ಉಂಟಾಗಿರುವ ಬದಲಾವಣೆಗಳನ್ನು ತಿಳಿಸುತ್ತಾ, ೧೯೯೭ರ ನೀರಾವರಿ ಕಾಯ್ದೆಯಿಂದಾಗಿ ಮೂರು ಹಂತದ ಸಮಿತಿಗಳಿಗೆ ಅಧಿಕಾರ ಹಸ್ತಾಂತರವಾಗಿರುವುದು ಒಂದು ಉತ್ತಮ ಬೆಳವಣಿಗೆಯಾಗಿದ್ದು ಸುಮಾರು ೧೦ ಸಾವಿರಕ್ಕಿಂತ ಹೆಚ್ಚಿನ ನೀರು ಬಳಕೆದಾರರ ಸಂಘಗಳು ರಚಿಸಲ್ಪಟ್ಟಿರುವ ಬಗ್ಗೆ ಮಾಹಿತಿ ಒದಗಿಸಿದ್ದಾರೆ. ಈಗಾಗಲೇ ನೀ.ಬ. ಸಂಘಗಳ ಬಗ್ಗೆ ನಡೆದಿರುವ ಹಲವಾರು ಅಧ್ಯಯನಗಳು ಅವುಗಳ ಯಶಸ್ವಿ ಸಂಗತಿಗಳನ್ನು ಮಾತ್ರ ಎತ್ತಿ ತೋರಿಸಿದ್ದು, ಕೆಲವೇ ಕೆಲವು ಅಧ್ಯಯನಗಳು ಸಹಭಾಗಿತ್ವ ನೀರಾವರಿ ನಿರ್ವಹಣಾ ಕಾರ್ಯಕ್ರಮ ವಾಸ್ತವದಲ್ಲಿ ಅನುಷ್ಠಾನಗೊಳ್ಳಬೇಕಾದರೆ ರಾಜ್ಯಗಳ ನೀರಾವರಿ ಇಲಾಖೆಗಳು ಮತ್ತು ಅಧಿಕಾರಶಾಹಿ ಮನೋಧರ್ಮವನ್ನೆ ಪುನರುಜ್ಜೀವನಗೊಳಿಸುವ ಅವಶ್ಯಕತೆಯನ್ನು ಸಲಹೆ ಮಾಡಲಾಗಿದೆ. ನೀ.ಬ. ಸಂಘಗಳು ಸಂಪೂರ್ಣವಾಗಿ ಸ್ಥಳೀಯ ನಾಯಕರ ನಿಯಂತ್ರಣದಲ್ಲಿರುವ ಬಗ್ಗೆ ಬೆಳಕು ಚೆಲ್ಲಿರುವ ವಿವರಣೆಯಿದೆ. ವೈವಿಧ್ಯಮಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಪರಿಸ್ಥಿತಿಯನ್ನು ಹೊಂದಿರುವ ಭಾರತದಂತಹ ರಾಷ್ಟ್ರದಲ್ಲಿ ನೀ.ಬ. ಸಂಘಗಳ ಸಹಭಾಗಿತ್ವ ನೀರಾವರಿ ನಿರ್ವಹಣೆ ಸುಲಭ ಸಾಧ್ಯವಲ್ಲವೆನ್ನುವ ಪ್ರಾಕಲ್ಪನೆಯ ಆಧಾರದ ಮೇಲೆ ಈ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನದಲ್ಲಿ ವಿಸ್ತೃತ ಮಟ್ಟದಲ್ಲಿ ೨೨ ಜಿಲ್ಲೆಗಳ ೨೨೨ ನೀ.ಬ. ಸಂಘಗಳನ್ನು ಮತ್ತು ಆಳವಾದ ಆಮೂಲಾಗ್ರ ಅಧ್ಯಯನಕ್ಕೆ ರಾಜ್ಯದ

ಮೂರು ಪ್ರದೇಶಗಳಲ್ಲಿ ೬ ನೀ.ಬ. ಸಂಘಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ಪ್ರದೇಶದಿಂದ ಒಂದು ಕಾಲುವೆ ನೀರಾವರಿ ಮತ್ತು ಒಂದು ಕೆರೆ ನೀರಾವರಿಗೆ ಸಂಬಂಧಿಸಿದ ಸಂಘಗಳನ್ನು ಆರಿಸಿಕೊಳ್ಳಲಾಗಿದೆ. ಕಾಲುವೆ ಮೇಲ್ತುದಿ, ಮಧ್ಯಭಾಗ, ಮತ್ತು ಕೊನೆಭಾಗಕ್ಕೆ ಸಂಬಂಧಿಸಿದಂತೆ ವಿವಿಧ ಜಾತಿಗಳಿಂದ ೫೦ ರೈತರನ್ನು ನಮೂನೆಯನ್ನು ಭಾಗಶಃ ಪ್ರಮಾಣಾನುಗುಣ ಅಧ್ಯಯನ ವಿಧಾನ ಬಳಕೆಯಾಗಿದೆ. ಅಂದರೆ ಒಟ್ಟಾರೆ ೩೦೦ ರೈತರನ್ನು ಆಳವಾದ ಸರ್ವೇಕ್ಷಣೆಗೆ ಒಳಪಡಿಸಲಾಗಿದೆ. ನಮೂನೆ ಸರ್ವೇಕ್ಷಣೆಗೆ ಮುನ್ನ ಮಾದರಿ ಗ್ರಾಮಗಳಲ್ಲಿ ಸಹಭಾಗಿತ್ವ ಗ್ರಾಮೀಣ ಸಮೀಕ್ಷೆಯನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನ ವಿಧಾನವನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಕೆ ಮಾಡಿಕೊಳ್ಳಲು ಸಹಾಯಕವಾಗಿದೆ.

ಅಧ್ಯಯನ ಫಲಿತಗಳನ್ನು ಅನೇಕ ಕೋಷ್ಟಕಗಳ ಮೂಲಕ ನೀಡಲಾಗಿದ್ದು, ಈ ಕೋಷ್ಟಕಗಳಲ್ಲಿ ನೀ.ಬ. ಸಂಘಗಳ ಆಡಳಿತ ಮಂಡಳಿಯ ಸದಸ್ಯರ ಸಾಮಾಜಿಕ ಆರ್ಥಿಕ ಸಂರಚನೆಯನ್ನು ವಿಂಗಡಿಸಿ ಪರಿಶಿಷ್ಟರು, ಹಿಂದುಳಿದ ವರ್ಗ ಮತ್ತು ಸಾಮಾನ್ಯ ಜಾತಿ ವರ್ಗದವರ ಪ್ರಾತಿನಿಧ್ಯವನ್ನು ನೀಡಲಾಗಿದೆ. ಪರಿಶಿಷ್ಟರ ಪ್ರಮಾಣ ಕಡಿಮೆಯಿದ್ದು, ಹಿಂದುಳಿದ ವರ್ಗದ ಪ್ರಮಾಣ ಸಾಮಾನ್ಯ ವರ್ಗಕ್ಕಿಂತ ಅಧಿಕವಿರುವುದು ತಿಳಿದು ಬಂದಿದೆ. ಆರ್ಥಿಕ ಸಂಯೋಜನೆಯಲ್ಲಿ ೧ ರಿಂದ ೨.೫ ಹೆಕ್ಟೇರ್ ಭೂಹಿಡುವಳಿ ಹೊಂದಿರುವ ಆಡಳಿತ ಮಂಡಳಿ ಸದಸ್ಯರ ಪ್ರತಿಶತ ಪ್ರಮಾಣ ಹೆಚ್ಚಾಗಿದ್ದು, ಕ್ರಮೇಣ ಅದು ಕಡಿಮೆಯಾಗಿರುವುದು ಕಂಡುಬಂದಿದೆ.

ನೀರು ಬಳಕೆದಾರರ ಸಹಕಾರ ಸಂಘಗಳ ಹಣಕಾಸಿನ ನಿರ್ವಹಣೆಯು ಕಾಲುವೆ ನೀರಾವರಿಯಲ್ಲಿ ವಾರ್ಷಿಕ ೨ ಲಕ್ಷದಿಂದ ೩ ಲಕ್ಷದವರೆಗೆ ಇರುತ್ತದೆ. ಹಣಕಾಸಿನ ಮೂಲವೆಂದರೆ ಶೇ. ೯೦ ರಷ್ಟು ಸರ್ಕಾರದ ಕೊಡುಗೆಯಾಗಿದ್ದು, ನೀರು ದರದ ಪಾಲು ಕೇವಲ ಶೇ. ೨ ರಷ್ಟು ಮಾತ್ರವಾಗಿದೆ. ಈ ನೀರು ದರ ಶೇ. ೫೦ ರಷ್ಟು ಮೇಲ್ತುದಿಯಿಂದ, ಶೇ. ೩೦ರಷ್ಟು ಮಧ್ಯಭಾಗ ಮತ್ತು ಶೇ. ೧೯ ರಷ್ಟು ಕೆಳತುದಿಯಿಂದ ಬರುತ್ತದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ರೈತರ ಕೊಡುಗೆ ಕೇವಲ ಶೇ. ೪ ರಷ್ಟು ಮಾತ್ರವಾಗಿದೆ.

ಕಾಮಗಾರಿಗಳು ಮುಖ್ಯವಾಗಿ ಕಾಲುವೆಗಳ ಸ್ವಚ್ಛತೆ, ದುರಸ್ತಿಗೆ ಸಂಬಂಧಿಸಿರುತ್ತವೆ. ನೀ.ಬ. ಸಂಘಗಳ ಸಭೆಗಳು ಮತ್ತು ಇತರ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ, ನಿಯಮಾನುಸಾರ ವಾರ್ಷಿಕ ಎರಡು ಮಹಾಸಭೆಗಳು ನಡೆಸಬೇಕಾಗಿದ್ದು, ಇಲ್ಲಿಯ ತನಕ ವಾರ್ಷಿಕ ಎರಡು ಮಹಾಸಭೆಗಳು ನಡೆಯದಿರುವುದನ್ನು ಅಧ್ಯಯನದಲ್ಲಿ ಶೋಧಿಸಲಾಗಿದೆ. ಆಡಳಿತ ಮಂಡಳಿಯ ಕಾರ್ಯಕಾರಿ ಸಭೆಗಳು ಕೊನೆಭಾಗದ ಸಂಘಗಳಲ್ಲಿ ಹೆಚ್ಚಾಗಿದ್ದು, ಮೇಲ್ತುದಿಯಲ್ಲಿ ಕಡಿಮೆಯಿದೆ. ಇದರಿಂದ ಕೆಳತುದಿಯಲ್ಲಿ ಹೆಚ್ಚಿನ ಸಮಸ್ಯೆಗಳಿರುವುದು ತಿಳಿದು ಬಂದಿದೆ.

ನಿಧಿಗಳನ್ನು ವಿತರಿಸುವಲ್ಲಿ, ಸಂಘಗಳನ್ನು ತಪಾಸಣೆ ಮಾಡುವಲ್ಲಿ ನೀರು ದರ ಸಂಗ್ರಹಿಸುವಲ್ಲಿ ಮತ್ತು ನೀರು ನಿರ್ವಹಣೆಯಲ್ಲಿ ನೀರಾವರಿ ಇಲಾಖೆಯ ಯಜಮಾನಿಕೆ ಹೆಚ್ಚಾಗಿರುವುದನ್ನು ಗುರುತಿಸಲಾಗಿದೆ. ಬಳಕೆದಾರರ ಸಂಘಗಳಲ್ಲಿ ಕೆರೆ ಬಳಕೆದಾರರ ಸಂಘಗಳು ಉತ್ತಮ ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಲಾಗಿದೆ. ನೀ.ಬ. ಸಂಘಗಳ ಪಾತ್ರದ ಬಗ್ಗೆ ಶೇ. ೪೦ ರಷ್ಟು ಅಧ್ಯಕ್ಷರಿಗೆ ತಿಳಿದಿದೆ. ಸಂಘಗಳಿಗೆ ಇನ್ನಷ್ಟು ಅಧಿಕಾರ ಹಸ್ತಾಂತರವಾಗಬೇಕೆಂದು ಶೇ. ೬೦ ಅಧ್ಯಕ್ಷರ ಒತ್ತಾಯವಾಗಿದೆ.

ಸ್ಥಳೀಯ ಸಮುದಾಯದ ಪಾಲುಗೊಳ್ಳುವಿಕೆ ಅತಿ ಕಡಿಮೆಯಿದ್ದು, ಉತ್ತಮ ನಾಯಕತ್ವದ ಕೊರತೆ ಮತ್ತು ಸಂಘಗಳಿಗೆ ಹೆಚ್ಚಿನ ಅಧಿಕಾರ ನೀಡಿಲ್ಲವೆನ್ನುವ ಅತೃಪ್ತಿ ಬಳಕೆದಾರರಲ್ಲಿದೆ. ಸಂಘಗಳಲ್ಲಿ ಮಹಿಳೆಯರ ಪಾತ್ರ ಅತ್ಯಲ್ಪವಾಗಿದೆ. ಏಕೆಂದರೆ ಮಹಿಳಾ ಮೀಸಲಾತಿಯಿಲ್ಲ. ಸಂಘಗಳ ಬಗ್ಗೆ ತಿಳುವಳಿಕೆ ಕಾಲುವೆಯ ಮೇಲ್ತುದಿಯಲ್ಲಿ ಹೆಚ್ಚಾಗಿದೆ. ಕ್ರಿಯಾತ್ಮಕ ಭಾಗವಹಿಸುವಿಕೆ ಶೇ. ೨೫ ಕ್ಕಿಂತ ಕಡಿಮೆಯಿದೆ. ಶೇ. ೮೦ ಅಧ್ಯಕ್ಷ ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಮತ ಚಲಾವಣೆ ಎಲ್ಲೂ ನಡೆದಿಲ್ಲ. ಅವಿರೋಧ ಆಯ್ಕೆ ಕಾಲುವೆಯ ಆರಂಭದ ವ್ಯಾಪ್ತಿಯ ಸಂಘಗಳಲ್ಲಿ ಅಧಿಕವಾಗಿದ್ದು, ಕೊನೆಭಾಗಕ್ಕೆ ಹೋದಂತೆ ಕಡಿಮೆಯಾಗಿರುವುದು ಕಂಡುಬಂದಿದೆ. ಆಯ್ಕೆ ಪ್ರಕ್ರಿಯೆಯಲ್ಲಿ ಗ್ರಾಮದ ಪ್ರಬಲ ಶಕ್ತಿಗಳು ಮತ್ತು ನೀರಾವರಿ ಅಧಿಕಾರಗಳ ಹಸ್ತಕ್ಷೇಪ ಹೆಚ್ಚಾಗಿರುವುದು ಕಂಡುಬಂದಿದೆ. ರಾಜಕೀಯ ಮಧ್ಯಪ್ರವೇಶವು ಹೆಚ್ಚಿನ ಸಂದರ್ಭಗಳಲ್ಲಿ ಕಂಡುಬಂದಿದೆ. ಸಂಘಗಳಲ್ಲಿ ಪ್ರಜಾಸತ್ತಾತ್ಮಕ ಚಟುವಟಿಕೆಗಳು ಅತಿ ಕಡಿಮೆಯಾಗಿರುವುದು ತಿಳಿದು ಬಂದಿದೆ. ಬದ್ಧತೆ ಮತ್ತು ಮಾಲೀಕತ್ವದ ಕೊರತೆಯಿಂದ ವ್ಯವಸ್ಥೆಯ ನಿರ್ವಹಣೆಯಲ್ಲಿ ರೈತರ ಪಾಲುಗೊಳ್ಳುವಿಕೆ ಕಡಿಮೆಯಾಗಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಕಾಮಗಾರಿಗಳ ವ್ಯವಸ್ಥಾಪನೆಗೆ ರೈತರ ಕೊಡುಗೆ ಶೇ. ೨೦ ಕ್ಕಿಂತ ಕಡಿಮೆಯಿದೆ. ಕಾಲುವೆ ನೀರು ಬಳಕೆದಾರರ ಸಂಘಗಳ ಬಗ್ಗೆ ರೈತರಿಗೆ ತೃಪ್ತಿಯಿಲ್ಲದಿರುವುದನ್ನು ಅಧ್ಯಯನದಲ್ಲಿ ಗೋಚರವಾಗಿದೆ. ಸಂಘಗಳ ರಚನೆಯ ಪರಿಣಾಮ ಮಧ್ಯಭಾಗ ಮತ್ತು ಮೇಲ್ತುದಿ ರೈತರ ಮೇಲೆ ಉತ್ತಮವಾಗಿದೆ. ಈ ಭಾಗಗಳಲ್ಲಿ ಉತ್ಪಾದಕತೆ ಹೆಚ್ಚಾಗಿರುವುದು ತಿಳಿದು ಬಂದಿದೆ.

ಅನುಷ್ಠಾನದ ಸಂದರ್ಭದಲ್ಲಿ ಬಲಿಷ್ಠರ ಪ್ರಭಾವ ಪರಿಣಾಮಗಳು ನೀ.ಬ. ಸಂಘಗಳ ಮೇಲೆ ಹೆಚ್ಚಾಗಿರುವುದು ಈ ಅಧ್ಯಯನ ತಿಳಿಸುತ್ತದೆ. ಮುಂದುವರೆದ ಜಾತಿ ಮತ್ತು ದೊಡ್ಡ ಭೂಮಾಲೀಕರು ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದಾರೆ. ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಮೀಸಲಾತಿಯಿಂದ ತಮಗೆ ದೊರೆಯುವ ಅವಕಾಶಗಳನ್ನು ಅದಕ್ಕಿಂತ ಹಣಕಾಸಿನಲ್ಲಿ ಉತ್ತಮ ಸ್ಥಿತಿಯಲ್ಲಿರುವ ನೀ.ಬ. ಸಂಘಗಳನ್ನು ಬಲಿಷ್ಠರು ಆಯ್ಕೆ ಮಾಡಿಕೊಂಡಿದ್ದಾರೆ. ಇಲ್ಲಿ ಭೂರಹಿತರಿಗೆ, ಭೂರಹಿತ ಮಹಿಳೆಯರಿಗೆ ಮತ್ತು ಮೀನುಗಾರರಿಗೆ ಯಾವುದೇ ಅವಕಾಶವಿಲ್ಲ. ಸಾರ್ವಜನಿಕ ಸ್ವತ್ತು ಎಲ್ಲರ ಅಭಿವೃದ್ಧಿಗೆ ಕಾರಣವಾಗಬೇಕು ಎನ್ನುವುದು ದಿಟವಾದರೂ ಈ ದಿಶೆಯಲ್ಲಿ ಯಾವುದೇ ನ್ಯಾಯಯುತ ನಿಯಮಗಳು ರೂಪಿಸಲ್ಪಡದೇ

ಇರುವ ಕೊರತೆಯನ್ನು ಅಧ್ಯಯನ ಎತ್ತಿ ತೋರಿಸಿದೆ. ಈ ಅಧ್ಯಯನ ವಿಶೇಷ ಸಂಗತಿಯೆಂದರೆ ನೀ.ಬ. ಸಂಘ ಅಧ್ಯಕ್ಷರ ಒಕ್ಕೂಟ ತಮ್ಮ ಅಧಿಕಾರಾವಧಿಯನ್ನು ೨ ವರ್ಷಕ್ಕೆ ಬದಲು ೫ ವರ್ಷಗಳಿಗೆ ಹೆಚ್ಚಿಸಬೇಕು ಮತ್ತು ಸರ್ವ ಸದಸ್ಯರ ಸಭೆಯ ಮೂಲಕ ಕಾರ್ಯಕಾರಿ ಮಂಡಳಿಗೆ ಇಬ್ಬರು ಮಹಿಳೆಯರನ್ನು ಕೋ-ಆಪ್ಟ್ ಮಾಡಿಕೊಳ್ಳಲು ಅವಕಾಶ ನೀಡಬೇಕೆಂದು ಒತ್ತಾಯಪಡಿಸಿದೆ. ನೀರುಗಂಟಿಗಳು ಸಂಪೂರ್ಣವಾಗಿ ಸಂಘಗಳ ನಿಯಂತ್ರಣಕ್ಕೆ ಒಳಪಡಬೇಕೆಂದು ಕೇಳಲಾಗಿದೆ. ಇದರೊಂದಿಗೆ ಸಂಘಗಳನ್ನು ಪ್ರತಿನಿಧಿಸುವ ಇಬ್ಬರಿಗೆ ಮೇಲ್ಮನೆಯಲ್ಲಿ ಅವಕಾಶ ಕಲ್ಪಿಸಬೇಕೆಂಬ ವಿಚಿತ್ರ ಬೇಡಿಕೆಗಳನ್ನು ಸರ್ಕಾರದ ಮುಂದಿಡಲಾಗಿದೆ. ಮೇಲ್ಮನೆಯ ಅವಕಾಶಕ್ಕೆ ಅಲ್ಲಿನ ಮಂತ್ರಿಮಂಡಲ ಈಗಾಗಲೇ ಒಪ್ಪಿಗೆ ನೀಡಿರುವ ಬಗ್ಗೆಯೂ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ. ಒಟ್ಟಾರೆ ನೀ.ಬ. ಸಂಘಗಳು ರಾಜಕೀಯ ಪ್ರಕ್ರಿಯೆಗೆ ಒಳಪಡುವ ಎಲ್ಲ ಸಾಧ್ಯತೆಗಳನ್ನು ಈ ಪ್ರಬಂಧದಲ್ಲಿ ತಿಳಿಸಲಾಗಿದೆ. ಈ ಎಲ್ಲ ಸಂಗತಿಗಳು ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಮನಗಾಣಲು ಸಹಾಯಕವಾಗಬಲ್ಲದು.

ನೀರು ಬಳಕೆದಾರರ ಸಹಕಾರ ಸಂಘಗಳಲ್ಲಿ ರೈತರ ಪಾಲುಗೊಳ್ಳುವಿಕೆ ಕುರಿತು ಅತಿಯಾದ ಆಶಾಭಾವನೆಯನ್ನು ಹೊಂದಲಾಗಿದೆಯೆ ಎನ್ನುವುದರ ಕುರಿತ ಪ್ರಶ್ನೆಗೆ ಎರಡು ರೀತಿಯ ಉತ್ತರಗಳು ಸಿಗುತ್ತವೆ. ಭಾರತದ ಮಟ್ಟಿಗೆ ಕೆಲವು ಸಣ್ಣ ನೀರಾವರಿ ವ್ಯವಸ್ಥೆಗಳಲ್ಲಿ ಬಳಕೆದಾರರ ಅನೌಪಚಾರಿಕ ಸಂಘಗಳೇ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿವೆ. ಆದರೆ ಭಾರಿ ಮತ್ತು ಮಧ್ಯಮ ನೀರಾವರಿಯ ಔಪಚಾರಿಕ ಸಂಘಗಳು ಅಷ್ಟೇನೂ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿಲ್ಲ ಎನ್ನುವುದನ್ನು ಗುಜರಾತ್ ಮತ್ತು ಕರ್ನಾಟಕದ ತಲಾ ಎರಡು ಅಚ್ಚುಕಟ್ಟು ಪ್ರದೇಶಗಳ ಅಧ್ಯಯನಗಳನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ (ಅಶೋಕ್ ಗುಲಾತಿ ಮತ್ತು ಇತರರು, ೨೦೦೫). ಗುಜರಾತ್‌ನ ಮೋಹಿನಿ ನೀರು ಬಳಕೆದಾರರ ಸಹಕಾರ ಸಂಘ ಉತ್ತಮ ಕಾರ್ಯ ನಿರ್ವಹಣೆಗೆ ಒಂದು ನಿದರ್ಶನವಾಗಿದೆ. ಉಳಿದಂತೆ ಅಧ್ಯಯನದ ಇತರ ನೀ.ಬ. ಸಂಘಗಳ ಫಲಿತಾಂಶ ನಿರೀಕ್ಷಿತ ಮಟ್ಟದಲ್ಲಿಲ್ಲ.

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮಗಳಲ್ಲಿ ಅಗತ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಈಗಾಗಲೇ ಅಸ್ತಿತ್ವದಲ್ಲಿರುವ ಅನೌಪಚಾರಿಕ ಸಂಘಟನೆಗಳು ಮತ್ತು ಅವುಗಳ ಸಾಮುದಾಯಿಕ ಕ್ರಿಯೆಗಳನ್ನು ಅವಲೋಕಿಸಿ ಆನಂತರ ಅದೇ ರೀತಿಯಲ್ಲಿ ಔಪಚಾರಿಕ ಸಂಘಗಳ ಸ್ಥಾಪನೆಗೆ ನಿಯಮಗಳನ್ನು ರೂಪಿಸಬೇಕೆಂದು ಸಲಹೆ ಮಾಡಲಾಗಿದೆ. ಅದೇ ರೀತಿ ಏಕರೀತಿಯ ನಿಯಮಗಳನ್ನು ಎಲ್ಲ ಪ್ರದೇಶಗಳಿಗೂ ಸಾರ್ವತ್ರಿಕವಾಗಿ ಅಳವಡಿಸುವುದು ಭಾರತದ ಸಾಮಾಜಿಕ ರಚನೆಯ ಹಿನ್ನೆಲೆಯಲ್ಲಿ ಸೂಕ್ತವಾದುದಲ್ಲ. ಆಯಾ ಪ್ರದೇಶದ ಸಾಮಾಜಿಕ ಸ್ವರೂಪಕ್ಕೆ ಅನುಗುಣವಾಗಿ ನೀತಿ ಧೋರಣೆಗಳನ್ನು ರೂಪಿಸಿ ಜಾರಿಗೊಳಿಸಬೇಕಾದ ಅಗತ್ಯವನ್ನು ವ್ಯಕ್ತಪಡಿಸಲಾಗಿದೆ. ಸ್ಥಳೀಯ ಸಂಘಟನೆಗಳು ಸ್ಥಿರವಾದವುಗಳಲ್ಲ. ಕಾಲ ಬದಲಾದಂತೆ ಸಂಘಟನೆಗಳ ಸ್ವರೂಪ ಮತ್ತು ಕಾರ್ಯಗಳು ಬದಲಾಗುತ್ತಿರುತ್ತವೆ.

ಅನೇಕ ಖಾಸಗಿ ಸಂಘಟನೆಗಳು ಕಾಲ ಬದಲಾದಂತೆ ತಮ್ಮ ಕಾರ್ಯಗಳನ್ನು ಸ್ಥಗಿತಗೊಳಿಸುವ ಸಾಧ್ಯತೆಗಳಿರುತ್ತವೆ. ಆದಾಯ ಮತ್ತು ವೆಚ್ಚಗಳಲ್ಲಿನ ಬದಲಾವಣೆಗಳು ಅಥವಾ ಪಲ್ಲಟಗಳು ಹೆಚ್ಚಾದಂತೆ ಸಂಘಟನೆಗಳ ಕಾರ್ಯ ವೈಖರಿಯಲ್ಲಿ, ಕಾರ್ಯ ದಕ್ಷತೆಯಲ್ಲಿ ಬದಲಾವಣೆಗಳನ್ನು ತರುತ್ತವೆ. ಹೀಗಾಗಿ ಸೂಕ್ತ ಸನ್ನಿವೇಶಕ್ಕೆ ಅನುಗುಣವಾದ ಸಂಘಗಳನ್ನು ಪ್ರಾದೇಶಿಕ ಸಾಮಾಜಿಕ ಸ್ಥಿತಿಗತಿಗೆ ತಕ್ಕಂತೆ ಸ್ಥಾಪನೆ ಮಾಡುವ ಅವಶ್ಯಕತೆಯನ್ನು ಅಧ್ಯಯನಕಾರರು ಸಲಹೆ ಮಾಡಿದ್ದಾರೆ.

ಕಳೆದ ೧೦-೧೫ ವರ್ಷಗಳಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸುಮಾರು ೫೦ ನೀ.ಬ.ಸ. ಸಂಘಗಳನ್ನು ಸ್ಥಾಪಿಸಿದೆ. ಆದರೆ ಯಾವ ಸಂಘವೂ ನಿಯಮಾನುಸಾರ ಕಾರ್ಯನಿರ್ವಹಿಸುತ್ತಿಲ್ಲ (ಚಂದ್ರಶೇಖರ ಬುಗ್ಗಿ ಮತ್ತು ಇತರರು, ೨೦೦೨). ಕೇವಲ ಬಾಳಶೆಟ್ಟಿಹಾಳ್ ಎನ್ನುವ ನೀ.ಬ.ಸ.ಸಂಘ ಮಾತ್ರ ಕೆಲಮಟ್ಟಿನ ಪ್ರಗತಿಯನ್ನು ಸಾಧಿಸುವಲ್ಲಿ ಸಫಲವಾಗಿದೆ. ಆದರೆ ಈ ಸಂಘವೂ ಉದ್ದೇಶಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸುತ್ತಿಲ್ಲ. ಸಂಘಗಳ ಒತ್ತಾಸೆ ಕೇವಲ ಬೆಳೆಗಳು ಮತ್ತು ಅವುಗಳ ಮೂಲ ಪರಿಕರಗಳ ಮೇಲೆ ಕೇಂದ್ರಿತವಾಗಿದ್ದು, ಕಾಲುವೆ ನೀರಾವರಿ ನಿರ್ವಹಣೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿರುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ದೊರೈಸ್ವಾಮಿ ಮತ್ತು ಪೀಟರ್ ಪಿ. ಮಾಲಿಂಗ (೨೦೦೨) ಇವರು ತುಂಗಭದ್ರಾ ನೀರಾವರಿ ವ್ಯವಸ್ಥೆಯಲ್ಲಿ ಫಲಾನುಭವಿಗಳು, ಸರಕಾರ ಮತ್ತು ಸರಕಾರೇತರ ಸಂಸ್ಥೆಗಳ ನೀರಾವರಿ ನಿರ್ವಹಣಾ ಸಾಮರ್ಥ್ಯವನ್ನು ವಿಮರ್ಶೆ ಮಾಡಿದ್ದಾರೆ. ಈ ಮೂರೂ ನೆಲೆಗಳಲ್ಲಿರುವ ದೋಷಗಳನ್ನು ಗುರುತಿಸಿ, ಅವುಗಳ ಪರಿಹಾರಕ್ಕೆ ಸರಕಾರ ಹೆಚ್ಚಿನ ಗಮನಹರಿಸಬೇಕು ಎಂದು ಸಲಹೆ ಮಾಡಿದ್ದಾರೆ.

ಚಂದ್ರಶೇಖರ ಬುಗ್ಗಿ ಮತ್ತು ಇತರರು (೨೦೦೨) ಇದೇ ತುಂಗಭದ್ರಾ ನೀರಾವರಿ ಪ್ರದೇಶದ ವ್ಯಾಪ್ತಿಯ ಢಣೇಸುಗೂರು ನೀರು ಬಳಕೆದಾರರ ಸಹಕಾರ ಸಂಘದ ಕಾರ್ಯನಿರ್ವಹಣೆಯನ್ನು ಆ ಗ್ರಾಮದ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಊಳಿಗಮಾನ್ಯ ವ್ಯವಸ್ಥೆಯ ಕಾರಣದಿಂದ ಯಜಮಾನ ಮತ್ತು ಸೇವಕ ಎನ್ನುವ ಏಣಿಶ್ರೇಣಿ ಕಾರಣದಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆ ನಿರೀಕ್ಷಿತ ಯಶಸ್ಸು ಸಾಧಿಸಿಲ್ಲ ಎನ್ನುವುದನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಇಲ್ಲಿ ಗಮನಿಸಲಾದ ಅಧ್ಯಯನಗಳು ನೀರು ಬಳಕೆದಾರರ ಸಂಘಗಳ ಸಮಾಜೋಆರ್ಥಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ಬಗೆಯ ಅಧ್ಯಯನ ವಿಧಾನಗಳು ನೀರು ಬಳಕೆದಾರರ ಸಾಂಸ್ಕೃತಿಕ ಬದುಕನ್ನು ಪರಿಗಣಿಸಿಲ್ಲ. ಕೇವಲ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳ ಮೇಲೆ ಕೇಂದ್ರೀಕರಿಸಿವೆ. ಭಾರತ ಬಹುಸಂಸ್ಕೃತಿಯ ದೇಶವಾಗಿದ್ದರಿಂದ, ರೈತನ ಹಬ್ಬ-ಹರಿದಿನ ಆಚರಣೆ ಸಂಪ್ರದಾಯಗಳು ಆತನ ನೀರಾವರಿ ಮೇಲೆ ಪ್ರಭಾವಿಸಲು ಸಾಧ್ಯವಿದೆ. ಈ ನೆಲೆಯಲ್ಲಿಯೂ ಅಧ್ಯಯನ ಮಾಡುವ ಅಗತ್ಯವಿದೆ.

## ೩.೭. ನೀರಾವರಿ ನಿರ್ವಹಣೆಯಲ್ಲಿ ಮಹಿಳೆಯ ಪಾತ್ರ

ಅಭಿವೃದ್ಧಿಯ ನೀತಿ ನಿರೂಪಕರು ಮತ್ತು ಯೋಜನಾ ತಜ್ಞರು ನೀರಾವರಿಯ ಯೋಜನೆ ಮತ್ತು ನಿರ್ವಹಣೆಯಲ್ಲಿ ಸಮುದಾಯದ ಪಾಲುಗೊಳ್ಳುವಿಕೆಯನ್ನು ಹೆಚ್ಚಾಗಿ ಪ್ರೋತ್ಸಾಹಿಸುವುದು ಕಂಡುಬರುತ್ತಿದೆ. ಆದರೆ ಈ ವಿಚಾರದಲ್ಲಿ ಮಹಿಳೆಯರ ಭಾಗವಹಿಸುವಿಕೆ ಬಗ್ಗೆ ಹೆಚ್ಚಿನ ಚಿಂತನೆ, ಚರ್ಚೆಗಳು ನಡೆಯದೇ ಇರುವುದು ಒಂದು ಲೋಪವಾಗಿ ಕಂಡುಬರುತ್ತಿದೆ (ಅಹ್ಮದ್, ೧೯೯೯). ಮುಖ್ಯವಾಗಿ ದಕ್ಷಿಣ ಏಷ್ಯಾದಲ್ಲಿ ಮಹಿಳೆಯು ಭೂಮಾಲೀಕತ್ವವನ್ನು ಹೊಂದಿಲ್ಲದೇ ಇರುವುದು, ಅವರು ನೀರಾವರಿ ನಿರ್ವಹಣೆಯಲ್ಲಿ ಭಾಗವಹಿಸುವಿಕೆಗೆ ಒಂದು ತೊಡಕಾಗಿದೆ. ವಾಸ್ತವವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯು ಕೇವಲ ಗೃಹ ಕೆಲಸ ಕಾರ್ಯಗಳಿಗೆ ಮಾತ್ರ ಸೀಮಿತವಾಗಿರದೇ ಕೃಷಿಯಲ್ಲಿ ತನ್ನನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಬೇಸಾಯಕ್ಕೆ ಸಂಬಂಧಿಸಿದಂತೆ ನಿರ್ಧಾರ ತೆಗೆದುಕೊಳ್ಳುವಲ್ಲಿ ಮಹಿಳೆಯರ ಪಾತ್ರವು ಗಮನಾರ್ಹವಾಗಿದೆ. ಕೇವಲ ಭೂಮಾಲೀಕತ್ವ ಇಲ್ಲದ ಒಂದೇ ಕಾರಣಕ್ಕೆ ಮಹಿಳೆಯನ್ನು ಸಹಭಾಗಿತ್ವ ನೀರಾವರಿ ನಿರ್ವಹಣೆಯಿಂದ ಹೊರಗಿಡುವುದು ಹೆಚ್ಚು ಸಮಂಜಸವಾಗಿ ಕಾಣುವುದಿಲ್ಲ ಎಂಬುದನ್ನು ಅಧ್ಯಯನಕಾರರು ಪ್ರಶ್ನಿಸಿದ್ದಾರೆ.

ಈ ಅಧ್ಯಯನದ ಮೊದಲ ಭಾಗದಲ್ಲಿ ಸಮುದಾಯ ಆಧಾರಿತ ನೀರಾವರಿ ನಿರ್ವಹಣೆಯಲ್ಲಿ ಮಹಿಳೆಯರ ಪಾಲುಗೊಳ್ಳುವಿಕೆ ಬಗೆಗಿನ ತಾತ್ವಿಕ ಹಿನ್ನೆಲೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಮೊದಲನೆಯ ಭಾಗದಲ್ಲಿ ಗುಜರಾತ್ ರಾಜ್ಯದಲ್ಲಿನ ಎರಡು ಏತ ನೀರಾವರಿ ಸಹಕಾರ ಸಂಘಗಳಲ್ಲಿ ಮಹಿಳೆಯರ ಪಾತ್ರವನ್ನು, ಎರಡನೆಯ ಭಾಗದಲ್ಲಿ ಜಾಗತಿಕ ನೆಲೆಯಲ್ಲಿ ಮಹಿಳೆಯು ನೀರಾವರಿ ನಿರ್ವಹಣೆಯಲ್ಲಿ ಹೇಗೆ ಭಾಗವಹಿಸಬೇಕೆಂದು ವಿಮರ್ಶಿಸಲಾಗಿದೆ. ಮಹಿಳೆಯರ ಭಾಗವಹಿಸುವಿಕೆಗೆ ಇರುವ ಮೂರು ತಡೆಗಳೆಂದರೆ, ಪ್ರಥಮವಾಗಿ ನೀರಾವರಿ ವ್ಯವಸ್ಥೆ ಬೃಹತ್ ಆದಂತೆ ಮಹಿಳೆಯರ ಭಾಗವಹಿಸುವಿಕೆ ಇಳಿಮುಖವಾಗತೊಡಗಿತು. ನೀರಾವರಿಯು ಹೊಸ ಬಗೆಯ ತಾಂತ್ರಿಕತೆಯಿಂದ ಹೆಚ್ಚು ಹೆಚ್ಚು ಯಾಂತ್ರೀಕರಣಗೊಂಡಿದ್ದು ಮಹಿಳೆಯರ ಪಾಲುಗೊಳ್ಳುವಿಕೆಗೆ ಒಂದು ತಡೆಯಾಯಿತು. ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳು ಅನುಷ್ಠಾನಗೊಂಡಂತೆಲ್ಲ ಕೃಷಿ ಸಚಿವಾಲಯ ಕೇಂದ್ರ ಮತ್ತು ರಾಜ್ಯಗಳಲ್ಲಿ ವಿಭಜನೆಗೊಂಡು, ಕೃಷಿ, ನೀರಾವರಿ ಮತ್ತು ಗ್ರಾಮೀಣಾಭಿವೃದ್ಧಿ ಸಚಿವಾಲಯಗಳಾಗಿದ್ದು, ಈ ಎಲ್ಲಾ ಸಚಿವಾಲಯಗಳ ನಿಯಂತ್ರಣ ಪುರುಷ ಪ್ರಧಾನವಾಗಿದ್ದು ಪುರುಷ ಪ್ರಧಾನವಾದ ನೌಕರಶಾಹಿಗೆ ಹೆಚ್ಚಿನ ಒತ್ತು ನೀಡಿರುವುದು ಕೂಡ ಮಹಿಳೆಯರ ಪಾಲುಗೊಳ್ಳುವಿಕೆಗೆ ಅಡ್ಡಿಯುಂಟು ಮಾಡುತ್ತಿರುವುದು ಎರಡನೆಯ ಸಂಗತಿಯಾಗಿದೆ. ಅಂತಿಮವಾಗಿ ಗೃಹಕೃತ್ಯಕ್ಕೆ ಬಳಕೆಯಾಗುವ ನೀರಿನ ನಿರ್ವಹಣೆ ಮಹಿಳೆಗೆ ಸಂಬಂಧಿಸಿದೆಂದೂ, ಬೇಸಾಯ ಮತ್ತು ಕೈಗಾರಿಕೆಯ ಬಳಕೆಯಾಗುವ ನೀರು ನಿರ್ವಹಣೆ ಪುರುಷರಿಗೆ ಮೀಸಲೆಂದು ಭಾವಿಸಿದ್ದು ಒಂದು ವಿಭಜನಾತ್ಮಕ ಲಿಂಗಭೇದಕ್ಕೆ ಅವಕಾಶ ಕಲ್ಪಿಸಿದೆ.

ಇತ್ತೀಚಿನ ಜಾಗತಿಕ ನೀರಾವರಿ ಸಾಹಿತ್ಯದ ಮೂಲದಲ್ಲಿಯೇ ಇಂತಹ ಲಿಂಗಸಂಬಂಧಿ ವಿಭಜನೆಯನ್ನು ಕಾಣಬಹುದಾಗಿದೆ. ನೈಸರ್ಗಿಕ ಸಂಪನ್ಮೂಲಗಳ ನಿರ್ವಹಣೆಯಲ್ಲಿ ಲಿಂಗ ಸಮಾನತೆ ವಿಷಯವನ್ನು ವಿರಳವಾಗಿ ನೀರಾವರಿ ಸಾಹಿತ್ಯದಲ್ಲಿ ಕಾಣಬಹುದಾದರೂ ಅದನ್ನು ಹೇಗೆ ಸಾಧಿಸ ಬಹುದೆನ್ನುವುದರ ಬಗ್ಗೆ ಹೆಚ್ಚಿನ ವಿವರಣೆಯಿಲ್ಲದಿರುವುದನ್ನು ಅಧ್ಯಯನ ಗಮನಿಸಿದೆ.

ಪ್ರಸ್ತುತ ಅಧ್ಯಯನದಲ್ಲಿ ಗುಜರಾತ್ ರಾಜ್ಯದ ಸದ್ಗುರು ಸರ್ಕಾರೇತರ ಸಂಸ್ಥೆಯ ನೆರವಿನಿಂದ ನಡೆಯುತ್ತಿರುವ ಬಂಚೇಲ ಮತ್ತು ರಾನಿಯರ್ ಹಳ್ಳಿಗಳ ವ್ಯಾಪ್ತಿಯ ಎರಡು ಏತ ನೀರಾವರಿ ಸಹಕಾರ ಸಂಘಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಎರಡೂ ಹಳ್ಳಿಗಳ ವ್ಯಾಪ್ತಿಯಲ್ಲಿ ಅಲ್ಪಸಂಖ್ಯಾತರಾದ ಪಟೇಲರೇ ಸ್ಥಳೀಯ ಮಟ್ಟದ ಸಂಸ್ಥೆಗಳಲ್ಲಿ ಪ್ರಬಲ ಸ್ಥಾನಗಳನ್ನು ಹೊಂದಿದ್ದು ಪ್ರಧಾನ ಪಾತ್ರ ವಹಿಸುತ್ತಾರೆ. ಕ್ಷೇತ್ರಕಾರ್ಯದ ಆರಂಭದಲ್ಲಿ ಮಹಿಳೆ ಮತ್ತು ಪುರುಷರನ್ನು ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಗುಂಪು ಚರ್ಚೆಗೆ ಗುರಿಪಡಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಬಹುತೇಕ ಮಹಿಳೆಯರು ತಮ್ಮ ಗೃಹಕೃತ್ಯ, ಚಟುವಟಿಕೆ, ಸಂತಾನೋತ್ಪತ್ತಿ ಕಾರ್ಯ ಮತ್ತು ಮಕ್ಕಳ ಪಾಲನೆ ಪೋಷಣೆಗೆ ಹೆಚ್ಚಿನ ಮಹತ್ವ ನೀಡುತ್ತಾರೆ. ಈ ಚಟುವಟಿಕೆಗಳು ಯಾವುದೇ ಸಂಭಾವನೆಯಿಂದ ಕೂಡಿಲ್ಲ. ಅನೇಕ ವಯಸ್ಕ ಮಹಿಳೆಯರು ಕೆಲಸ ಮುಂಜಾನೆ ೪ಕ್ಕೆ ಪ್ರಾರಂಭವಾಗಿ ರಾತ್ರಿ ೧೦ವರೆಗೆ ಮುಂದುವರೆದಿರುವುದು ಕಂಡು ಬಂದಿದೆ. ಈ ಎಲ್ಲ ಕಾರ್ಯಗಳ ನಡುವೆ ಕೃಷಿ ಚಟುವಟಿಕೆಗಳಲ್ಲಿಯೂ ಅವರ ಪಾಲುಗೊಳ್ಳುವಿಕೆ ಗಣನೀಯವಾದುದಾಗಿದೆ.

ಮಹಿಳೆಯರು ಏತ ನೀರಾವರಿ ಕಾರ್ಯಕ್ರಮಗಳಲ್ಲಿ ನಿರ್ಮಾಣದ ಹಂತದಿಂದಲೇ ಪಾಲು ಗೊಂಡಿರುವುದು ಸಂದರ್ಶನಗಳ ಮೂಲಕ ತಿಳಿದು ಬಂದಿದೆ. ಏತನೀರಾವರಿ ಸಹಕಾರಿ ಸಂಘಗಳಲ್ಲಿ ಭೂಮಾಲೀಕತ್ವ ಇರುವ ಮಹಿಳೆಯರಿಗೆ ಮಾತ್ರ ಅವಕಾಶವಿದ್ದರೂ ಕೆಲವು ಮಹಿಳೆಯರನ್ನು ನಾಮಕರಣ ಮಾಡಿಕೊಳ್ಳುವ ಪದ್ಧತಿ ಇದ್ದು, ಮಹಿಳೆಯರಿಗೆ ಸಂಘಗಳಲ್ಲಿ ಅನೌಪಚಾರಿಕವಾಗಿ ಭಾಗವಹಿಸುವ ಅವಕಾಶವನ್ನು ಕಲ್ಪಿಸಿರುವುದು ತಿಳಿದು ಬರುತ್ತದೆ. ಆದರೂ ಸಂಘಗಳಲ್ಲಿ ಪುರುಷ ಪ್ರಧಾನ ನಿರ್ಧಾರಗಳೇ ಪ್ರಮುಖವಾಗಿದ್ದು, ಮಹಿಳೆಯರು ತಮಗಿಂತ ಹಿರಿಯ ಪುರುಷರ ಎದುರಿನಲ್ಲಿ ಮಾತನಾಡುವ ಧೈರ್ಯವನ್ನು ಹೊಂದಿರುವುದಿಲ್ಲ. ಸಣ್ಣ ಪ್ರಮಾಣದಲ್ಲಿ ವಿದ್ಯಾವಂತ ಮಹಿಳೆಯರು ಕೆಲಮಟ್ಟಿನ ಸಾಧನೆ ಮಾಡಿರುವುದು ತಿಳಿದು ಬರುತ್ತದೆ. ಹೀಗೆ ಮಹಿಳೆಯ ಪಾಲುಗೊಳ್ಳುವಿಕೆಯಿಂದ ನೀರಾವರಿ ನಿರ್ವಹಣೆಯಲ್ಲಿ ಗುರುತರವಾದ ಬದಲಾವಣೆಗಳನ್ನು ತರಬಹುದು ಮತ್ತು ಮಹಿಳೆಯರಲ್ಲಿ ಒಂದು ಹೊಸ ವಿಶ್ವಾಸ ಮತ್ತು ವರ್ಚಸ್ಸನ್ನು ರೂಪಿಸಲು ಸಾಧ್ಯವಾಗುತ್ತದೆ. ಈ ದಿಶೆಯಲ್ಲಿ ರಾಜ್ಯ, ರಾಷ್ಟ್ರ ಮತ್ತು ಜಾಗತಿಕ ಮಟ್ಟದಲ್ಲಿ ಹೊಸದಾದ ನೀತಿ ಧೋರಣೆಗಳು ಮತ್ತು ಯೋಜನೆಗಳು ಲಿಂಗಸ್ಪಂದಿಯಾಗಿ ಅನುಷ್ಠಾನಗೊಳ್ಳಬೇಕಾದ ಅಗತ್ಯವನ್ನು ಅಧ್ಯಯನಕಾರರು ಬಲವಾಗಿ ಪ್ರತಿಪಾದಿಸುತ್ತಾರೆ.

ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ಮಹಿಳೆಯರ ಪಾತ್ರವನ್ನು ಕುರಿತ ಆಂಧ್ರಪ್ರದೇಶದ ಒಂದು ಅಧ್ಯಯನ (ವಿಜಯಶ್ಯಾಮಲ ಸಿ. ಮತ್ತು ಸೀತಾಪತಿರಾವ್ ಸಿ.-೨೦೦೩) ಅನೇಕ ಸಂಗತಿಗಳನ್ನು ತಿಳಿಸುತ್ತದೆ. ಈ ಅಧ್ಯಯನದಲ್ಲಿ ಆಂಧ್ರಪ್ರದೇಶದ ರೈತರ ನೀರಾವರಿ ವ್ಯವಸ್ಥೆಗಳ ನಿರ್ವಹಣೆಯ ಕಾಯಿದೆ ೧೯೯೭ ಒಂದು ಬೃಹತ್ ಬದಲಾವಣೆಯ ಶಕ್ತಿಯನ್ನೇ ಆರಂಭಿಸಿದೆ ಎಂದು ತಿಳಿಸುತ್ತದೆ. ಈ ಸುಧಾರಣೆಯ ಹಾದಿಯಲ್ಲಿ ಮಹಿಳೆಯನ್ನು ಹೆಚ್ಚಾಗಿ ತೊಡಗಿಸಿಕೊಳ್ಳದೇ ಇರುವ ಬಗ್ಗೆ ಅಸಮಾಧಾನ ವ್ಯಕ್ತವಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಸರಿಸುಮಾರು ಶೇ. ೫೦ರಷ್ಟಿರುವ ಮಹಿಳೆಯರನ್ನು ಇಂತಹ ಸುಧಾರಣಾ ಕಾರ್ಯಕ್ರಮದಲ್ಲಿ ಪರಿಗಣಿಸದೇ ಇರುವುದು ಲಿಂಗತಾರತಮ್ಯಕ್ಕೆ ಅವಕಾಶವಾಗುತ್ತದೆ. ಶೇ. ೫೦ ಕೃಷಿ ಚಟುವಟಿಕೆಗಳಲ್ಲಿ ಮಹಿಳೆಯ ಪಾತ್ರ ಪ್ರಧಾನವಾಗಿರುತ್ತದೆ. ಆದರೆ ನೀರು ಬಳಕೆದಾರರ ಸಂಘಗಳಲ್ಲಿ ಭೂಮಾಲೀಕತ್ವ ಇಲ್ಲದ ಕಾರಣಕ್ಕೆ ಅವಕಾಶಗಳು ನಿರಾಕರಿಸಲ್ಪಡುತ್ತಿರುವುದು ಸರ್ವೇಸಾಮಾನ್ಯವಾದ ಸಂಗತಿಯಾಗಿದೆ.

ಒಟ್ಟಾರೆ ಆಂಧ್ರಪ್ರದೇಶ ರಾಜ್ಯದ ೯೮ ಮಹಿಳೆಯರು ನೀ.ಬ. ಸಂಘಗಳ ಅಧ್ಯಕ್ಷರಾಗಿ ಆಯ್ಕೆಯಾಗಿದ್ದು, ೮೩೦ ಮಹಿಳೆಯರು ನೀ.ಬ. ಸಂಘಗಳ ಸದಸ್ಯರಾಗಿ ಆಯ್ಕೆಯಾಗಿರುವುದು ತಿಳಿದುಬರುತ್ತದೆ. ಈ ಅಧ್ಯಯನದಲ್ಲಿ ಒಟ್ಟು ೩೨ ಮಹಿಳೆಯರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅದರಲ್ಲಿ ೧೪ ಮಹಿಳೆಯರು ನೀ.ಬ. ಸಂಘಗಳ ಅಧ್ಯಕ್ಷರಾಗಿದ್ದು ೧೮ ಮಹಿಳೆಯರು ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದಾರೆ. ಈ ಎಲ್ಲರ ಆಯ್ಕೆಯು ಆಂಧ್ರಪ್ರದೇಶದ ಮೂರು ಪ್ರಾಂತಗಳನ್ನು ಒಳಗೊಂಡಿದೆ. ಮಾಹಿತಿಯನ್ನು ಸಂದರ್ಶಕ ಪ್ರಶ್ನಾವಳಿ ವಿಧಾನದ ಮೂಲಕ ಪಡೆಯಲಾಗಿದೆ. ಮಹಿಳೆ ಮತ್ತು ಪುರುಷರಿಗೆ ಗುಂಪು ಚರ್ಚೆಯನ್ನು ಏರ್ಪಡಿಸಿ ಆ ಮೂಲಕ ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ಮಹಿಳೆಯರ ಪಾತ್ರದ ಬಗ್ಗೆ ವಿವಿಧ ದೃಷ್ಟಿಕೋನಗಳನ್ನು ತಿಳಿದುಕೊಳ್ಳಲಾಗಿದೆ.

ಆಯ್ದ ೩೨ ನಮೂನೆಯಲ್ಲಿ ಶೇ. ೬೦ ಮಹಿಳೆಯರು ೨೫-೫೦ರ ವಯೋಮಾನದ ಗುಂಪಿಗೆ ಸೇರಿದವರಾಗಿದ್ದಾರೆ. ಶೇ. ೫೦ ಮಹಿಳೆಯರು ಮುಂದುವರಿದ ಜಾತಿಗಳಿಗೆ ಸೇರಿದ್ದು, ಉಳಿದ ಶೇ. ೫೦ ರಷ್ಟು ಹಿಂದುಳಿದ ಮತ್ತು ಪರಿಶಿಷ್ಟ ಜಾತಿ ಪಂಗಡಕ್ಕೆ ಸೇರಿದವರಾಗಿದ್ದಾರೆ. ಶೇ. ೫೦ ರಷ್ಟು ಮಹಿಳೆಯರು ಅಧ್ಯಕ್ಷರಾಗಿದ್ದು ಬಹುತೇಕ ಪ್ರಾಥಮಿಕ ಮತ್ತು ಪ್ರೌಢಶಾಲೆಯವರೆಗೆ ಓದಿದವರಾಗಿದ್ದಾರೆ. ಶೇ. ೫೦ರಷ್ಟು ಮಹಿಳೆಯರು ಗೃಹಿಣಿಯರಾಗಿದ್ದು ಅಗತ್ಯವಿದ್ದಾಗ ಕೃಷಿ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಾರೆ. ಉಳಿದ ಪ್ರತಿಶತ ೫೦ ರಲ್ಲಿ ಶೇ. ೪೧ ರಷ್ಟು ಮಹಿಳೆಯರು ಕೃಷಿ ಚಟುವಟಿಕೆಗಳಲ್ಲಿ ದಿನನಿತ್ಯ ಭಾಗವಹಿಸುತ್ತಾರೆ. ಶೇ. ೯ ರಷ್ಟು ಮಹಿಳೆಯರು ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡುಬಂದಿದೆ.

ನೀ.ಬ. ಸಂಘಗಳಿಗೆ ಮಹಿಳೆಯರ ಆಯ್ಕೆಯು ಪ್ರತಿಶತ ೮೫ ರಷ್ಟು ಅವಿರೋಧವಾಗಿದೆ. ಆಡಳಿತ ಮಂಡಳಿಯನ್ನು ಅವಿರೋಧವಾಗಿ ಆಯ್ಕೆ ಮಾಡಿದ ಸಂಘಕ್ಕೆ ರೂ. ೫೦ ಸಾವಿರ ಪ್ರೋತ್ಸಾಹ ಧನವನ್ನು ಸರ್ಕಾರ ಪ್ರಕಟಿಸಿದ ಕಾರಣ ಅವಿರೋಧ ಆಯ್ಕೆಗೆ ವಿಶೇಷ ಅವಕಾಶವಿದೆ. ಇಂತಹ ಆಯ್ಕೆಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ಶಿಫಾರಸ್ಸುಗಳು, ಪ್ರಭಾವ ಮತ್ತು ಒತ್ತಡಗಳು ಕಂಡುಬಂದಿವೆ. ಬಹುತೇಕ ಮಹಿಳೆಯರು ನೀ.ಬ. ಸಂಘಗಳಿಗೆ ಸ್ವಯಂ ಪ್ರೇರಿತವಾಗಿ ಬಂದಿಲ್ಲ. ಬದಲಾಗಿ ಗುತ್ತಿಗೆದಾರರು, ಊರಿನ ಮುಖಂಡರು, ತಮ್ಮ ಹೆಸರಿನಲ್ಲಿ ಜಮೀನಿಲ್ಲದ ಬಲಿಷ್ಟರು ತಮ್ಮ ಹಿತಸಾಧನೆಗಾಗಿ ಅವರಿಗೆ ಆಪ್ತರಾದವರನ್ನು ಈ ಸಂಘಗಳಲ್ಲಿ ಸೇರ್ಪಡೆಗೊಳಿಸಿರುವುದು ಅಧ್ಯಯನದ ಮೂಲಕ ತಿಳಿಯುತ್ತದೆ.

ಉದಾಹರಣೆಗೆ ೧೫ ನೀ.ಬ. ಸಂಘಗಳ ಮಹಿಳಾ ಅಧ್ಯಕ್ಷರಲ್ಲಿ ೧೩ ಮಹಿಳಾ ಅಧ್ಯಕ್ಷರು ತಮ್ಮ ತಂದೆ, ಗಂಡ ಅಥವಾ ಮಗನ ಆಸಕ್ತಿಯ ಕಾರಣಕ್ಕೆ ಭೂಮಾಲೀಕತ್ವ ಹೊಂದಿರುವ ಮಹಿಳೆಯನ್ನು ಸಂಘಗಳಲ್ಲಿ ನೇಮಿಸಲಾಗಿದೆ. ಉಳಿದ ಎರಡು ಮಹಿಳೆಯರು ಸ್ವಯಂ ಪ್ರೇರಿತವಾಗಿ ಚುನಾವಣೆಗೆ ಸ್ಪರ್ಧೆ ಮಾಡಿ ಅಧ್ಯಕ್ಷರಾಗಿ ಆರಿಸಿ ಬಂದಿದ್ದಾರೆ. ಆಡಳಿತ ಮಂಡಳಿ ಸದಸ್ಯರ ನೇಮಕದಲ್ಲಿ ಇದೇ ಸ್ಥಿತಿ ಕಂಡು ಬಂದಿದೆ.

ಸರಿಸುಮಾರು ಎಲ್ಲ ಮಹಿಳಾ ಪದಾಧಿಕಾರಿಗಳಿಗೆ ನೀ.ಬ. ಸಂಘಗಳ ಮುಖ್ಯ ಉದ್ದೇಶಗಳ ಬಗ್ಗೆ ತಿಳುವಳಿಕೆಯಿದೆ. ಆದರೆ ನಿರ್ಧಾರ ತೆಗೆದುಕೊಳ್ಳುವ ಹಂತದಲ್ಲಿ ಇಬ್ಬರು ಅಧ್ಯಕ್ಷರನ್ನು ಹೊರತುಪಡಿಸಿದರೆ ಉಳಿದ ಎಲ್ಲ ಮಹಿಳಾ ಸದಸ್ಯರು ಪುರುಷರನ್ನೇ ಅವಲಂಬಿಸಿರುವುದು ಕಂಡುಬರುತ್ತದೆ. ಸಭೆಗಳಿಗೆ ಶೇ. ೫೭ ರಷ್ಟು ಮಹಿಳಾಧ್ಯಕ್ಷರ ಗೈರುಹಾಜರಿ ಕಂಡುಬಂದರೆ ಆಡಳಿತ ಮಂಡಳಿಗಳಲ್ಲಿ ಅವರ ಗೈರುಹಾಜರಿ ಶೇ.೮೦ ರಷ್ಟಿರುವುದು ಅಧ್ಯಯನದಲ್ಲಿ ತಿಳಿದುಬರುತ್ತದೆ. ಶೇ. ೧೦ ರಷ್ಟು ಮಹಿಳಾ ಸದಸ್ಯರ ಭಾಗವಹಿಸುವಿಕೆಯನ್ನು ಪುರುಷರು ಬಹಿರಂಗವಾಗಿ ತಡೆದಿರುವುದು ತಿಳಿದುಬರುತ್ತದೆ. ಒಬ್ಬ ವಿತರಣಾ ನಾಲೆಯ ಅಧ್ಯಕ್ಷ ಒಂದು ನೀ.ಬ. ಸಂಘದ ಮಹಿಳಾ ಅಧ್ಯಕ್ಷರಿಗೆ ಸಭೆಗಳಿಗೆ ಹಾಜರಾಗುವ ತೊಂದರೆಯನ್ನು ತೆಗೆದುಕೊಳ್ಳಬೇಡಿ ಮತ್ತು ನಿಮ್ಮ ಪತಿಯನ್ನೇ ಸಭೆಗಳಿಗೆ ಕಳುಹಿಸಿಕೊಡಿ ಎಂದು ಸಲಹೆ ಮಾಡಿರುವುದು ದೃಢಪಟ್ಟಿದೆ. ಇಬ್ಬರನ್ನು ಹೊರತುಪಡಿಸಿದಂತೆ ಉಳಿದ ಯಾವುದೇ ಮಹಿಳೆಯರು ಸಂಘದ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿಲ್ಲ. ಎಲ್ಲರೂ ತಮ್ಮ ಪತಿ, ತಂದೆ, ಮಗನಿಗೆ ವಹಿಸಿ ನಾಮಮಾತ್ರ ಶಿರೋಮಣಿಗಳಾಗಿರುವುದು ತಿಳಿಯುತ್ತದೆ. ತರಬೇತಿ ಕಾರ್ಯಕ್ರಮಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಅತ್ಯಂತ ಕಡಿಮೆಯಿರುವುದು, ಹಾಜರಾದರೂ ತಮ್ಮ ಸಂಗಡ ತಮ್ಮ ಪತಿಯನ್ನು ಕರೆದುಕೊಂಡು ಹೋಗುವ ಪ್ರವೃತ್ತಿ ಬಿಂಬಿತವಾಗಿದೆ.

ನಮ್ಮ ಸಾಮಾಜಿಕ ನಿಯಮಗಳು ಮತ್ತು ಮೌಲ್ಯಗಳು ಮಹಿಳಾ ಪಾಲುಗೊಳ್ಳುವಿಕೆಯ ಮೇಲೆ ವ್ಯತಿರಿಕ್ತ ಪರಿಣಾಮಗಳನ್ನು ಬೀರುತ್ತವೆ. ಆಂಧ್ರಪ್ರದೇಶದ ನೀರಾವರಿ ನಿರ್ವಹಣೆ ಕಾಯ್ದೆ ೧೯೯೭

ಮಹಿಳೆಯರಿಗೆ ಸೀ.ಬಿ. ಸಂಘಗಳಲ್ಲಿ ಮೀಸಲಾತಿ ಕಲ್ಪಿಸದೇ ಇರುವುದು ಒಂದು ದೊಡ್ಡ ಲೋಪವಾಗಿರುವ ಬಗ್ಗೆ ಅಧ್ಯಯನಕಾರರು ಆಕ್ರೋಶ ವ್ಯಕ್ತಪಡಿಸಿದ್ದಾರೆ. ಇದೇ ಸಂದರ್ಭದಲ್ಲಿ ಮೀಸಲಾತಿ ನೀಡಿದ್ದರೂ ಅದು ಕೇವಲ ನಾಮಕಾವಸ್ತೆಯಾಗುತ್ತಿದ್ದ ಬಗ್ಗೆ ಆಂತಕವನ್ನು ಸೂಚಿಸಿದ್ದಾರೆ. ಭೂಮಾಲೀಕತ್ವವನ್ನು ಸಂಘದ ಸದಸ್ಯತ್ವಕ್ಕೆ ಒಂದು ಮಾನದಂಡವನ್ನಾಗಿ ಮಾಡಿರುವುದು ಮಹಿಳೆಯರ ಪಾಲುಗೊಳ್ಳುವಿಕೆ ತಡೆಯಾಗುತ್ತದೆ. ಒಟ್ಟಾರೆ ಮಹಿಳೆಯರೂ ಅಭಿವೃದ್ಧಿ ಚಟುವಟಿಕೆಗಳಲ್ಲಿ ಭಾಗವಹಿಸಲು ಅವಕಾಶ ವಾಗುವಂತೆ ನೀತಿ ಧೋರಣೆಗಳನ್ನು ರೂಪಿಸುವ ಅವಶ್ಯಕತೆ ಬಗ್ಗೆ ಅಧ್ಯಯನಕಾರರು ಒಲವು ತೋರುತ್ತಾರೆ. ಮಹಿಳೆಯರ ಭಾಗವಹಿಸುವಿಕೆಗೆ ಅಗತ್ಯವಾದ ಸಾಮರ್ಥ್ಯ ನಿರ್ಮಾಣ, ಕುಶಲತೆಗಳ ಕಲಿಕೆಯನ್ನು ಅವರಿಗೆ ತಲುಪಿಸುವುದು ಪ್ರಥಮ ಆದ್ಯತೆಯಾಗಬೇಕೆಂದು ಸಲಹೆ ಮಾಡಲಾಗಿದೆ.

ಸಂತುಲಿತ ನೀರಿನ ಬಳಕೆಯನ್ನು ಆಧರಿಸಿದ ಆಹಾರ ಉತ್ಪಾದನೆಯಲ್ಲಿ ಮಹಿಳೆಯರ ಪಾತ್ರ ಮುಖ್ಯವಾದದ್ದು. ಆದರೆ ಸಮುದಾಯದ ನಿಯಂತ್ರಣವನ್ನು ಖಾಸಗೀಕರಣಗೊಳಿಸಿದ ಹಾಗೂ ಆಹಾರ ಧಾನ್ಯಗಳನ್ನು ವಾಣಿಜ್ಯ ಬೆಳೆಗಳಿಂದ ಬದಲಿಸಿದ ಪುರುಷಶಾಹಿಯು ಜಲನಿರ್ವಹಣಾ ಕ್ರಿಯಾಸರಣಿ ಮತ್ತು ಜಲಸಂರಕ್ಷಣೆಯಲ್ಲಿ ಪ್ರಕೃತಿ ಹಾಗೂ ಮಹಿಳೆಯರ ಕೆಲಸವನ್ನು ನಿರ್ಲಕ್ಷಿಸಿರುವುದು ಇಂದಿನ ಎಲ್ಲ ಜಲ ಸಂಬಂಧಿ ಸಮಸ್ಯೆಗಳಿಗೆ ಕಾರಣವಾಗಿರುವುದನ್ನು ಮಹಿಳಾವಾದಿ ತಜ್ಞರು ಅನೇಕ ಅಧ್ಯಯನಗಳ ಮೂಲಕ ದೃಢಪಡಿಸಿದ್ದಾರೆ (ವಂದನಶಿವ, ೨೦೦೫). ಜಲಸಂರಕ್ಷಣೆ ತಂತ್ರಜ್ಞಾನವನ್ನು ಆಧರಿಸಿದ ಆಹಾರ ಉತ್ಪಾದನೆಯಲ್ಲಿ ಮಹಿಳೆಯರ ಪಾಲು ಅಮೂಲ್ಯವಾದುದ್ದು. ಉತ್ಪಾದನೆಯ ಪೌಷ್ಟಿಕ ಮೌಲ್ಯವನ್ನು ಪರಿಗಣಿಸದೆ ಹಣವನ್ನು ಮಾತ್ರ ಪರಿಗಣಿಸುವ ವಿಕೃತ ಅಭಿವೃದ್ಧಿ ಮಾದರಿ ಪುಷ್ಟಿಕರ ಧಾನ್ಯಗಳ ಉತ್ಪಾದನೆಯನ್ನು ಛಿದ್ರಗೊಳಿಸಿತು. ವಿಕೃತ ಅಭಿವೃದ್ಧಿಯು ಆಹಾರದ ಮೌಲ್ಯ, ನೀರಿನ ಬಳಕೆ, ಮಹಿಳೆಯರ ಕೆಲಸವನ್ನು ನಿರ್ಲಕ್ಷಿಸಿ ಭೂಮಿಯ ಉತ್ಪಾದಕ ಬಳಕೆಗೆ ಮಾತ್ರ ಆದ್ಯತೆ ನೀಡುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ನೀರಿನ ಬಳಕೆ ಹಾಗೂ ನಿರ್ವಹಣೆ ಕುರಿತ ಹೆಚ್ಚಿನ ಮಾರ್ಗಗಳು ಸಂಕುಚಿತ ಪ್ರವೃತ್ತಿಯವಾಗಿದ್ದು, ಅವು ನೀರಿನ ವೃತ್ತೀಯ ಹರಿಯುವಿಕೆ ಪ್ರವೃತ್ತಿಯನ್ನು ಪರಿಗಣಿಸುವಲ್ಲಿ ವಿಫಲವಾಗಿವೆ. ಇಂತಹ ಪ್ರಕೃತಿ ವಿರೋಧಿ ಮತ್ತು ಸ್ತ್ರೀ ವಿರೋಧಿ ಅಭಿವೃದ್ಧಿ ಕಾರ್ಯಕ್ರಮಗಳು ತಾವು ನೀರನ್ನು ಸೃಷ್ಟಿಸಬಲ್ಲೆವು ಹಾಗೂ ಅದನ್ನು ಕ್ರೋಢೀಕರಿಸಬಲ್ಲೆವು ಎಂದು ನಂಬಿವೆ. ಎಲ್ಲಾ ಜೀವಿಗಳಂತೆ ಮನುಷ್ಯ ಕೂಡಾ ಈ ಜಲವೃತ್ತದ ಭಾಗ, ಸಹಭಾಗಿತ್ವದಿಂದಷ್ಟೇ ಉಳಿವು ಸಾಧ್ಯ ಎಂದು ಗುರುತಿಸುವಲ್ಲಿ ಮಾನವ ವಿಫಲನಾಗಿದ್ದಾನೆ. ನೀರನ್ನು ತೀವ್ರವಾಗಿ ಬಳಸುತ್ತಲೇ ನಾವು ಅದನ್ನು ನಿಯಂತ್ರಿಸುತ್ತಿದ್ದೇವೆ, ಕ್ರೋಢೀಕರಿಸುತ್ತಿದ್ದೇವೆ ಎನ್ನುವ ನಂಬಿಕೆಯಿಂದ ಜಲಚಕ್ರ ನಾಶವಾಗುತ್ತಿರುವುದರ ಕುರಿತು ಆತಂಕ ವ್ಯಕ್ತಪಡಿಸಿದ್ದಾರೆ. ನೀರಿನ ಸ್ವಾಭಾವಿಕ ಚಲನೆಯನ್ನು ಉಲ್ಲಂಘಿಸುವುದರಿಂದ ಭಾರತದ ಬಹುತೇಕ ರಾಜ್ಯಗಳಲ್ಲಿ ಜಲಕ್ಷಾಮ ಉಂಟಾಗಿದೆ.

ಅದೇ ರೀತಿ ಜಲಮೂಲಗಳ ಒತ್ತುವಿಕೆಗೆ ಮೂಲಕಾರಣ ಅದರ ನಿರ್ವಹಣೆಯಲ್ಲಿ ಮಹಿಳೆಯರನ್ನು ನಿರ್ಲಕ್ಷಿಸಿರುವುದೇ ಆಗಿದೆ ಎಂದು ತಮ್ಮ ಅಧ್ಯಯನದಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಇಲ್ಲಿನ ಅಧ್ಯಯನಗಳ ಸಮೀಕ್ಷೆಗೆ ನಾಲ್ಕು ಮುಖ್ಯ ಕಾರಣಗಳಿವೆ. ಒಂದು : ಈ ಕ್ಷೇತ್ರದಲ್ಲಿ ಈವರೆಗೆ ನಡೆದ ಅಧ್ಯಯನಗಳು ಯಾವುವು ಅದರ ಧೋರಣೆ ಏನು ಎಂಬುದನ್ನು ತಿಳಿಯುವುದು. ಎರಡು: ಈವರೆಗಿನ ಅಧ್ಯಯನಗಳ ಮಿತಿಗಳನ್ನು ಗುರುತಿಸುವುದು, ಕರ್ನಾಟಕದ ಸಂದರ್ಭದಲ್ಲಿ ಈ ಮಿತಿಗಳನ್ನು ಮೀರಲು ಇರುವ ಸಾಧ್ಯತೆಗಳನ್ನು ತಿಳಿಯುವುದು. ಮೂರು : ಈ ಅಧ್ಯಯನಗಳು ಯಾವ ಬಗೆಯ ಸಮಾಜವನ್ನು ಚಿತ್ರಿಸುತ್ತಿವೆ. ಅದರ ಸೂಕ್ಷ್ಮತೆಯಲ್ಲಿನ ತೊಡಕುಗಳನ್ನು ಹೇಗೆ ಪರಿಹರಿಸಿಕೊಂಡಿದೆ ಎಂಬುದನ್ನು ಅರಿಯುವುದು. ನಾಲ್ಕು : ಈ ಕ್ಷೇತ್ರದಲ್ಲಿ ನಡೆಯಬಹುದಾದ ಅಧ್ಯಯನಗಳಿಗೆ ಇವು ಒದಗಿಸಬಹುದಾದ ಮುನ್ನೋಟದ ಬಗೆಯನ್ನು ವಿಮರ್ಶಾತ್ಮಕವಾಗಿ ಚರ್ಚಿಸುವುದು.

ಈ ಕಾರಣಗಳನ್ನಿಟ್ಟುಕೊಂಡು ಸಮೀಕ್ಷೆ ಮಾಡಿದಾಗಲೂ ಅದರ ಫಲಿತಗಳೇನು? ಪ್ರಸುತ್ತ ಈ ಅಧ್ಯಯನಕ್ಕೆ ಒದಗಿಸುವ ಒಳನೋಟಗಳಾವುವು? ಎನ್ನುವುದು ಮುಖ್ಯ. ಇಲ್ಲಿನ ಅಧ್ಯಯನಗಳು ಸರ್ಕಾರಿ ಮತ್ತು ಸರ್ಕಾರೇತರ ಉದ್ದೇಶಗಳಿಗಾಗಿ ನಡೆದಿವೆ. ಕೆಲವು ವರದಿಯಾದರೆ, ಇನ್ನು ಕೆಲವು ಮಾಹಿತಿ ಪ್ರಧಾನ ಸಂಗ್ರಹಗಳು. ಇಲ್ಲಿನ ಬಹುತೇಕ ಅಧ್ಯಯನಗಳನ್ನು ಎನ್.ಜಿ.ಓ. ಸಂಸ್ಥೆಗಳು ಮಾಡಿವೆ. ಇದು ಭಾರತದಲ್ಲಿ ನೀರಾವರಿ ವ್ಯವಸ್ಥೆ ಹೇಗಿದೆ ಅನ್ನುವುದನ್ನು 'ವಿದೇಶಿ'ಯರಿಗೆ ಮನವರಿಕೆ ಮಾಡುವ ಗುರಿ ಹೊಂದಿವೆ. ಇದರಿಂದಾಗಿ ವಿದೇಶಿಗರು ನೀರಾವರಿಗಾಗಿ ಸಾಲ ಕೊಡುವ ಅಥವಾ ತಮ್ಮ ದೇಶದ ನೀರು ಆಶ್ರಿತ ಬೆಳೆಯನ್ನು ಭಾರತದಲ್ಲಿ ಅಭಿವೃದ್ಧಿಪಡಿಸುವಂತಹ 'ಆರ್ಥಿಕ'ವಾಗಿ ಉಪಯೋಗಿ ಯೋಜನೆಗಳನ್ನು ರೂಪಿಸಲು ಸಹಕಾರಿಯಾಗುತ್ತದೆ. ಇಂತಹ ಅಧ್ಯಯನಗಳು ಮಾಹಿತಿಯನ್ನು ವೈಭವೀಕರಿಸಿರುವುದೇ ಹೆಚ್ಚು. ಹಾಗಾಗಿ ಅಧ್ಯಯನಕಾರನಿಗೆ ಈ ಎಚ್ಚರ ಇರಬೇಕಾಗುತ್ತದೆ. ಇನ್ನು ನೀರಾವರಿ ಇಲಾಖೆಯವರು ತಮ್ಮ ಇಲಾಖಾ ಅಭಿವೃದ್ಧಿಯನ್ನು ತೋರಿಸಲು ನಡೆಸಿದ ಅಧ್ಯಯನಗಳಿವೆ. ಇವುಗಳು ಸಹ ನಿಷ್ಠವಾಗಿರುವುದು ತಮ್ಮ ಇಲಾಖಾ ಹಿತಾಸಕ್ತಿಗೆ.

ಈ ಬಗೆಯ ಅಧ್ಯಯನಗಳ ನಡುವೆಯೂ ಕೆಲವು ಗಂಭೀರ ಸಂಶೋಧನೆಗಳಿವೆ. ಸ್ವತಃ ರೈತನಾಗಿದ್ದು, ನೀರು ಬಳಕೆದಾರರ ಸಮಸ್ಯೆಗಳ ಸ್ವತಃ ಅರಿವಿದ್ದು, ತಾನು ಆತ್ಮಕಥನ ಮಾದರಿಯಲ್ಲಿ ನೀರು ಬಳಕೆದಾರರ ಸಹಭಾಗಿತ್ವದ ಕುರಿತು ನಡೆಸಿದ ಅಧ್ಯಯನಗಳು ಈ ಸಮೀಕ್ಷೆಯಲ್ಲಿವೆ. ಹೀಗೆ ಹಲವು ದೃಷ್ಟಿಧೋರಣೆಯ ಅಧ್ಯಯನಗಳನ್ನು ಸಮೀಕ್ಷಿಸಿದಾಗಲೂ ಕೆಲವು ಸಾಮಾನ್ಯ ಲಕ್ಷಣಗಳು ಎದುರಿಗೆ ನಿಲ್ಲುತ್ತವೆ. ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳು, ಬೆಳೆಮಾದರಿ, ನೀರು ದರ ಸಂಗ್ರಹದಲ್ಲಿನ ತೊಡಕುಗಳು, ನೀರಾವರಿ ನಿರ್ವಹಣೆಯ ಹಸ್ತಾಂತರದ ಪ್ರಕ್ರಿಯೆ, ಕಾಲುವೆ ಮೇಲ್ತುದಿ, ಕೆಳತುದಿ ರೈತರ ನಡುವಿನ ಬಿಕ್ಕಟ್ಟುಗಳು, ಸಹಭಾಗಿತ್ವ ನೀರಾವರಿ ನಿರ್ವಹಣೆ, ಸಾಮಾಜಿಕ ಮತ್ತು ಆರ್ಥಿಕ ಸಂರಚನೆ, ನೀರಾವರಿಯಲ್ಲಿ

ಮಹಿಳೆಯರ ಪಾತ್ರ, ಇವುಗಳು ಎತ್ತುವ ಪ್ರಶ್ನೆಗಳು ಸಾರ್ವತ್ರಿಕವಾಗಿ ಅನ್ವಯಿಸುವಂತಿದೆ. ಆದರೆ ಮಹಿಳೆ ಎಂದತಕ್ಷಣ ಮಧ್ಯಮವರ್ಗದ ರೈತ ಮಹಿಳೆ, ತಳಸಮುದಾಯದ ರೈತ ಮಹಿಳೆ. ಶ್ರೀಮಂತ ರೈತ ಮಹಿಳೆ, ಗ್ರಾಮೀಣ ರೈತ ಮಹಿಳೆ, ನಗರ ರೈತ ಮಹಿಳೆಗೆ ಹೀಗೆ ಹಲವು ಆಯಾಮಗಳಲ್ಲಿ ಮಹಿಳೆಯನ್ನು ನೋಡಲು ಸಾಧ್ಯವಿದೆ. ಪ್ರತಿ ಆಯಾಮದಲ್ಲೂ ಮಹಿಳೆಯ ಸಮಸ್ಯೆಗಳು ಭಿನ್ನವಾಗಿ ಕಾಣುತ್ತವೆ. ಅಂತೆಯೇ 'ನೀರಾವರಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆಗಳು' ಎಂದಾಗಲೂ ಈ ಸಮಸ್ಯೆಗಳಿಗೆ ಯಾರು ಯಾರು ಕಾರಣ? ಅದರ ಹಿನ್ನೆಲೆ ಏನು? ಎಂದು ಒಳ ವಿವರಗಳನ್ನು ಬಹುತೇಕ ಅಧ್ಯಯನಗಳು ಗಮನಿಸುವುದಿಲ್ಲ. ಹೀಗೆ ಸೂಕ್ಷ್ಮ ವಿವರಗಳ ಮೂಲಕ ಕಟ್ಟುವ ಸೈದ್ಧಾಂತಿಕ ವಿವರಗಳೂ ಪ್ರಾದೇಶಿಕ ಭಿನ್ನತೆಯನ್ನು ಹಿಡಿಯಲು ಸಾಧ್ಯವಾಗುವುದಿಲ್ಲ. ಹೀಗಾಗಿ ಈ ಅಧ್ಯಯನದ ಸಮೀಕ್ಷೆಯಿಂದಾಗಿ ಗುರುತಿಸಿದ ಇಂತಹ ಮಿತಿಗಳನ್ನು ಈ ಅಧ್ಯಯನ ಮೀರಲು ಪ್ರಯತ್ನಿಸಿದೆ.

❑ ❑

# ಅಧ್ಯಾಯ ನಾಲ್ಕು

# ಅಧ್ಯಯನ ಕ್ಷೇತ್ರ

೪.೧. ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನ

೪.೨. ಜಿಲ್ಲೆಯ ಭೌಗೋಳಿಕ ಸಂಗತಿಗಳು

೪.೩. ಜಿಲ್ಲೆಯ ಕೃಷಿ ಮತ್ತು ಸಾಗುವಳಿ ವ್ಯವಸ್ಥೆ

೪.೪. ಜಿಲ್ಲೆಯ ನೀರಾವರಿ ವ್ಯವಸ್ಥೆ

೪.೫. ಅಧ್ಯಯನಕ್ಕೆ ಒಳಪಟ್ಟಂತಹ ನೀರಾವರಿ ಪ್ರದೇಶ

೪.೬. ಜಿಲ್ಲೆಯ ಭವಿಷ್ಯತ್ತಿನ ನೀರಾವರಿ ಯೋಜನೆಗಳು

೪.೭. ಶಿವಮೊಗ್ಗ ಜಿಲ್ಲೆಯ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿ

# ಅಧ್ಯಾಯ ೪

# ಅಧ್ಯಯನ ಕ್ಷೇತ್ರ

## ಪ್ರಸ್ತಾವನೆ

ಪ್ರಸ್ತುತ ಅಧ್ಯಯನವು ನೀರಾವರಿ ನಿರ್ವಹಣೆಯ ಬಗ್ಗೆ ಇರುವುದರಿಂದ ಇದು ಒಂದು ಎಂಫಿರಿಕಲ್ ಸಂಶೋಧನೆಯಾಗಿದೆ. ಈ ನಿದರ್ಶನಾತ್ಮಕ ಅಧ್ಯಯನವು ಒಂದು ಪ್ರದೇಶದ ನೀರು ಬಳಕೆದಾರರ ನಿರ್ವಹಣಾ ಸಾಮರ್ಥ್ಯ ಮತ್ತು ಬಳಕೆದಾರರ ಸಹಕಾರ ಸಂಘಗಳಲ್ಲಿ ಫಲಾನುಭವಿಗಳ ಸಹಭಾಗಿತ್ವವನ್ನು ಕುರಿತು ಅವಲೋಕನ ಮಾಡುತ್ತದೆ. ಈ ಅಧ್ಯಯನವನ್ನು ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಶಿವಮೊಗ್ಗ ಜಿಲ್ಲೆಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಭದ್ರಾ ಕಾಡಾದ ವ್ಯಾಪ್ತಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ಮತ್ತು ಶಿವಮೊಗ್ಗ ತಾಲ್ಲೂಕುಗಳು ಬರುತ್ತವೆ. ಈ ಎರಡೂ ತಾಲ್ಲೂಕುಗಳಲ್ಲಿ ಆಯ್ದ ನೀರು ಬಳಕೆದಾರರ ಸಹಕಾರ ಸಂಘಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಯಾವುದೇ ರೀತಿಯ ಸಂಘ-ಸಂಸ್ಥೆಗಳನ್ನು ಪ್ರಾಯೋಗಿಕವಾಗಿ ಅಧ್ಯಯನ ಮಾಡುವಾಗ ಆ ಪ್ರದೇಶದಲ್ಲಿನ ಸಾಮಾಜಿಕ ಸಂಗತಿಗಳ ಬಗ್ಗೆ ಕೆಲಮಟ್ಟಿನ ಅರಿವು ಅಗತ್ಯವಿರುತ್ತದೆ. ಅಂದರೆ ಒಂದು ಪ್ರದೇಶದಲ್ಲಿರುವ ಸಂಘ ಸಂಸ್ಥೆಗಳು ನಿರ್ವಾತದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಿರುವುದಿಲ್ಲ. ಬದಲಾಗಿ ಆ ಪ್ರದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸಂಗತಿಗಳ ಪ್ರಭಾವ ಸಂಘ-ಸಂಸ್ಥೆಗಳ ಮೇಲೆ ಇದ್ದೇ ಇರುತ್ತದೆ. ಇಂತಹ ಪ್ರಭಾವ ಪರಿಣಾಮಗಳನ್ನು ತಿಳಿದುಕೊಂಡಾಗ ಮಾತ್ರ ಆ ಸಂಘ-ಸಂಸ್ಥೆಗಳ ಕಾರ್ಯವೈಖರಿಯನ್ನು ಪರಿಪೂರ್ಣವಾಗಿ ಅರಿತುಕೊಳ್ಳಲು ಸಾಧ್ಯ.

ಈ ಅಧ್ಯಾಯದಲ್ಲಿ ಒಟ್ಟು ಏಳು ಭಾಗಗಳಿದ್ದು, ಮೊದಲನೆ ಭಾಗದಲ್ಲಿ ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನವನ್ನು ಚರ್ಚಿಸಲಾಗಿದೆ. ಜಿಲ್ಲೆಯ ಭೌಗೋಳಿಕ ಸಂಗತಿಗಳನ್ನು ಎರಡನೆಯ ಭಾಗದಲ್ಲಿ ಚರ್ಚಿಸಲಾಗಿದ್ದು, ಮೂರನೆ ಭಾಗದಲ್ಲಿ ಕೃಷಿ ಮತ್ತು ಸಾಗುವಳಿ ವ್ಯವಸ್ಥೆಯನ್ನು ವಿಶ್ಲೇಷಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಶಿವಮೊಗ್ಗ ಜಿಲ್ಲೆಯ ನೀರಾವರಿ ವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗಿದ್ದು, ಐದನೇ ಭಾಗದಲ್ಲಿ ಅಧ್ಯಯನಕ್ಕೆ ಒಳಪಟ್ಟಂತಹ ನೀರಾವರಿ ಪ್ರದೇಶದ ವಿವರಗಳನ್ನು, ಜಿಲ್ಲೆಯ ಭವಿಷ್ಯತ್ತಿನ ನೀರಾವರಿ ಯೋಜನೆಗಳ ಬಗ್ಗೆ ಆರನೇ ಭಾಗದಲ್ಲಿ ಚರ್ಚಿಸಲಾಗಿದೆ. ಕೊನೆಯ ಏಳನೇ ಭಾಗದಲ್ಲಿ ಶಿವಮೊಗ್ಗ ಜಿಲ್ಲೆಯ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ.

## ೪.೧. ಜಿಲ್ಲೆಯ ಪ್ರಾಕೃತಿಕ ಸಂಪನ್ಮೂಲಗಳು ಮತ್ತು ಹವಾಮಾನ

ಶಿವಮೊಗ್ಗ ಜಿಲ್ಲೆಯನ್ನು ಆಡಳಿತದ ಅನುಕೂಲತೆಗಾಗಿ ಶಿವಮೊಗ್ಗ ಮತ್ತು ಸಾಗರ ಎಂದು ಎರಡು ಉಪವಿಭಾಗಗಳನ್ನಾಗಿ ವಿಭಾಗಿಸಲಾಗಿದೆ. ಶಿವಮೊಗ್ಗ ಉಪವಿಭಾಗದ ವ್ಯಾಪ್ತಿಯಲ್ಲಿ ಶಿವಮೊಗ್ಗ, ಭದ್ರಾವತಿ ಮತ್ತು ತೀರ್ಥಹಳ್ಳಿ ತಾಲ್ಲೂಕುಗಳು ಬರುತ್ತವೆ. ಉಳಿದ ೪ ತಾಲೂಕುಗಳಾದ ಸಾಗರ, ಸೊರಬ, ಹೊಸನಗರ ಮತ್ತು ಶಿಕಾರಿಪುರಗಳು ಸಾಗರ ಉಪವಿಭಾಗದ ವ್ಯಾಪ್ತಿಗೆ ಬರುತ್ತವೆ. ಜಿಲ್ಲೆಯ ೭ ತಾಲೂಕುಗಳಲ್ಲಿ ೭ ತಾಲೂಕು ಪಂಚಾಯ್ತಿಗಳು ಮತ್ತು ೪೦ ಹೋಬಳಿಗಳಿವೆ. ೨೬೦ ಗ್ರಾಮಪಂಚಾಯಿತಿಗಳಿವೆ.

ಶಿವಮೊಗ್ಗ ಜಿಲ್ಲೆಯು ನಿಸರ್ಗದತ್ತ ಸಂಪತ್ತಿನಲ್ಲಿ ಉತ್ತಮ ಸ್ಥಿತಿಯಲ್ಲಿದೆ. ಜಿಲ್ಲೆಯ ಸಸ್ಯ ಸಂಪತ್ತು ಸಮೃದ್ಧವೂ ಮತ್ತು ವೈವಿಧ್ಯಮಯದಿಂದ ಕೂಡಿದೆ. ಜಿಲ್ಲೆಯಲ್ಲಿ ಉತ್ತಮ ಮಳೆಯಾಗುವುದರಿಂದ ಮತ್ತು ಸಹ್ಯಾದ್ರಿಯ ಪರ್ವತ ಶ್ರೇಣಿಗಳಿಂದ ದಟ್ಟವಾದ ಕಾಡು ಹೆಚ್ಚಿನ ಪ್ರದೇಶವನ್ನು ಆವರಿಸಿಕೊಂಡಿದೆ. ಪಶ್ಚಿಮ ಘಟ್ಟ ಪ್ರದೇಶವು ನಿತ್ಯ ಹಸಿರಿನ ಕಾಡನ್ನು ಹೊಂದಿದ್ದು, ಬೆಲೆ ಬಾಳುವ ಅರಣ್ಯ ಪ್ರದೇಶ, ವೃಕ್ಷ ಸಂಪತ್ತನ್ನು ಹೊಂದಿದೆ. ರಾಜ್ಯದ ಒಟ್ಟು ಅರಣ್ಯ ಪ್ರದೇಶದಲ್ಲಿ ಶೇ. ೯.೦೨ರಷ್ಟು ಅರಣ್ಯ ಶಿವಮೊಗ್ಗ ಜಿಲ್ಲೆಯಲ್ಲಿದೆ. ಜಲಸಂಪನ್ಮೂಲವು ಹೇರಳವಾಗಿದೆ. ಜಿಲ್ಲೆಯಲ್ಲಿ ತುಂಗಾ, ಭದ್ರಾ, ಶರಾವತಿ, ಕುಮದ್ವತಿ ಮತ್ತು ವರದಾ ನದಿಗಳು ಹರಿಯುತ್ತದೆ. ಹಾಗಾಗಿ ರಾಜ್ಯದಲ್ಲಿಯೇ ಹೆಚ್ಚು ಕೆರೆಗಳನ್ನು ಹೊಂದಿರುವ ಜಿಲ್ಲೆಯೂ ಇದಾಗಿದೆ. ಒಟ್ಟು ಬಿತ್ತನೆಯಾಗುವ ಪ್ರದೇಶದಲ್ಲಿ ನಿವ್ವಳ ನೀರಾವರಿಯಾಗುವ ಪ್ರದೇಶದಲ್ಲಿ ರಾಜ್ಯದಲ್ಲಿಯೇ ಪ್ರಥಮ ಸ್ಥಾನದಲ್ಲಿದೆ. ಇದರಿಂದ ಜಿಲ್ಲೆಯ ಹೆಚ್ಚಿನ ಪ್ರದೇಶ ನೀರಾವರಿಗೆ ಒಳಪಟ್ಟಿದೆ (೪೯.೧೬%). ಈ ಕಾರಣದಿಂದಲೇ ಜಿಲ್ಲೆಯಲ್ಲಿ ಕೃಷಿ ಆಧಾರಿತ ಆರ್ಥಿಕ ವ್ಯವಸ್ಥೆಯೆ ಪ್ರಧಾನವಾಗಿದೆ. ಜಿಲ್ಲೆಯು ಉನ್ನತ ಗುಣಮಟ್ಟದ ಸಾಕಷ್ಟು ಖನಿಜ ನಿಕ್ಷೇಪವನ್ನು ಹೊಂದಿದೆ. ಕೈಗಾರಿಕೆಗಳಿಗೆ ಭದ್ರಾವತಿ ಹೆಸರುವಾಸಿಯಾಗಿದ್ದು ಜಿಲ್ಲೆಯು ೪ ಬೃಹತ್ ಕೈಗಾರಿಕೆಗಳನ್ನು ಹೊಂದಿದ್ದು ೫ ಮಧ್ಯಮ ಕೈಗಾರಿಕೆಗಳು ಮತ್ತು ೧೨,೦೮೩ ಸಣ್ಣ ಮತ್ತು ಗೃಹಕೈಗಾರಿಕೆಗಳು ಜಿಲ್ಲೆಯಲ್ಲಿವೆ (ಶಿವಮೊಗ್ಗ ಜಿಲ್ಲಾ ಅಂಕಿ-ಅಂಶಗಳ ನೋಟ; ೨೦೦೪-೦೫).

ಶಿವಮೊಗ್ಗ ಜಿಲ್ಲೆಯು ಮಲೆನಾಡು ಮತ್ತು ಅರೆಮಲೆನಾಡು ಪ್ರದೇಶವಾಗಿರುವುದರಿಂದ ಉತ್ತಮ ಹವಾಮಾನ ಪಡೆದಿದೆ. ಮಲೆನಾಡು ಭಾಗದಲ್ಲಿ ವರ್ಷದ ಅರ್ಧಕ್ಕೂ ಹೆಚ್ಚು ದಿನಗಳಲ್ಲಿ ಮೋಡ ಮುಸುಕಿದ ವಾತಾವರಣವಿರುತ್ತದೆ. ಪಶ್ಚಿಮ ಘಟ್ಟ ಪ್ರದೇಶದಲ್ಲಿ ಅಧಿಕ ಮಳೆ ಬಿದ್ದರೆ ಪೂರ್ವಕ್ಕೆ ಹೋದಂತೆಲ್ಲ ಮಳೆ ಕಡಿಮೆಯಾಗುತ್ತದೆ. ಆಗುಂಬೆಯಲ್ಲಿ ವಾರ್ಷಿಕ ೬,೬೦೦ ಮಿ.ಮೀ.ಗೂ ಅಧಿಕ ಮಳೆಯಾಗುವುದರಿಂದ ಇದನ್ನು 'ದಕ್ಷಿಣ ಭಾರತದ ಚಿರಾಪುಂಜಿ' ಎಂದು ಕರೆಯುತ್ತಾರೆ. ಜಿಲ್ಲೆಯಲ್ಲಿ ವಾರ್ಷಿಕ ವಾಡಿಕೆ ಮಳೆಯ ಪ್ರಮಾಣ ೧೮೧೩ ಮಿ.ಮೀ. ಆಗಿದೆ. ೨೦೦೪ರ ಸರಾಸರಿ ಮಳೆ ೧೫೯೯.೬ ಮಿ.ಮೀ. ಆಗಿದೆ (ಶಿವಮೊಗ್ಗ ಜಿಲ್ಲಾ ಅಂಕಿ-ಅಂಶಗಳ ನೋಟ: ೨೦೦೪-೦೫, ಪು. ೧೨).

## ೪.೨. ಜಿಲ್ಲೆಯ ಭೌಗೋಳಿಕ ಸಂಗತಿಗಳು

ಶಿವಮೊಗ್ಗ ಕರ್ನಾಟಕದ ಮಧ್ಯಭಾಗದಲ್ಲಿರುವ ಜಿಲ್ಲೆ. ಈ ಜಿಲ್ಲೆ ಪ್ರಾಕೃತಿಕ ವಿಶಿಷ್ಟತೆಗಳಿಂದಾಗಿ ರಾಜ್ಯದಲ್ಲಿ ಗುರುತಿಸಿಕೊಂಡಿದೆ. ರಾಜ್ಯದ ರಾಜಧಾನಿಯಿಂದ ೨೭೫ ಕಿ.ಮೀ. ದೂರದಲ್ಲಿರುವ ಈ ಜಿಲ್ಲೆ, ಬೆಂಗಳೂರು ವಿಭಾಗದಲ್ಲಿಯ ಪ್ರಮುಖ ಜಿಲ್ಲೆಯಾಗಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೮೪೭೭ ಚ.ಕಿ.ಮೀ.ರಷ್ಟಿದೆ. ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶದಲ್ಲಿ ಶೇ.೪.೪೧ರಷ್ಟು ಪ್ರದೇಶವನ್ನು ಹೊಂದಿರುವ ಈ ಜಿಲ್ಲೆ ವಿಸ್ತೀರ್ಣದ ದೃಷ್ಟಿಯಿಂದ ರಾಜ್ಯದಲ್ಲಿ ೬ನೇ ಸ್ಥಾನದಲ್ಲಿದ್ದು, ವಿಭಾಗದಲ್ಲಿ ಎರಡನೇ ಅತೀ ದೊಡ್ಡ ಜಿಲ್ಲೆಯಾಗಿದೆ. ಜಿಲ್ಲೆಯ ಹೆಚ್ಚಿನ ಭಾಗ ಮಲೆನಾಡು ಭಾಗಕ್ಕೆ ಸೇರಿದೆ. ಜಿಲ್ಲೆಯ ದಕ್ಷಿಣೋತ್ತರವಾಗಿ ಪಶ್ಚಿಮ ಘಟ್ಟಗಳು ಹಬ್ಬಿವೆ. "ಉತ್ತರ ಅಕ್ಷಾಂಶ ೧೩°೨೭' ರಿಂದ ೧೪°೩೯' ಮತ್ತು ಪೂರ್ವ ರೇಖಾಂಶ ೭೪°೩೭' ರಿಂದ ೭೫°೫೨' ಜಿಲ್ಲೆಯ ಕ್ಷೇತ್ರ ವ್ಯಾಪ್ತಿ ಇದ್ದು, ಇದರ ಉದ್ದಳತೆ ಪೂರ್ವದಿಂದ ಪಶ್ಚಿಮಕ್ಕೆ ಅಂದಾಜು ೧೫೨.೯ ಕಿ.ಮೀ. ಉತ್ತರದಿಂದ ದಕ್ಷಿಣಕ್ಕೆ ೧೨೮.೮ ಕಿ.ಮೀ. ಆಗಿದೆ (ಶಿವಮೊಗ್ಗ ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೦೫; ಪು.೭೬). ಜಿಲ್ಲೆಯ ಪೂರ್ವಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿಕ್ಕಮಗಳೂರು, ಪಶ್ಚಿಮಕ್ಕೆ ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆ ಮತ್ತು ಉತ್ತರದಲ್ಲಿ ಉತ್ತರ ಕನ್ನಡ ಮತ್ತು ಹಾವೇರಿ ಜಿಲ್ಲೆಗಳಿವೆ.

ಕೋಷ್ಟಕ ೪.೧ ರ ಪ್ರಕಾರ ಜಿಲ್ಲೆಯ ಭೌಗೋಳಿಕ ಪ್ರದೇಶ ೮.೪೭ ಲಕ್ಷ ಹೆಕ್ಟೇರ್. ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶದಲ್ಲಿ ಶಿವಮೊಗ್ಗ ಜಿಲ್ಲೆಯ ಪಾಲು ಶೇ. ೪.೪೫ ರಷ್ಟಾಗಿದೆ. ಕರ್ನಾಟಕ ರಾಜ್ಯದಲ್ಲಿ ಅತ್ಯಧಿಕ ಅರಣ್ಯ ಪ್ರದೇಶವನ್ನು ಹೊಂದಿರುವ ಜಿಲ್ಲೆಗಳಲ್ಲಿ ಶಿವಮೊಗ್ಗ ಜಿಲ್ಲೆಯು ಎರಡನೆ ಸ್ಥಾನದಲ್ಲಿದೆ. ಜಿಲ್ಲೆಯಲ್ಲಿ ೨,೭೬,೮೫೫ ಹೆಕ್ಟೇರ್‌ರಷ್ಟು ಅರಣ್ಯ ಪ್ರದೇಶವಿದ್ದು, ಉತ್ತರ ಕನ್ನಡ ಜಿಲ್ಲೆಯನ್ನು ಹೊರತು ಪಡಿಸಿದರೆ, ಕರ್ನಾಟಕದ ಯಾವ ಜಿಲ್ಲೆಯಲ್ಲಿಯೂ ಇಷ್ಟೊಂದು ಅರಣ್ಯ ಪ್ರದೇಶವಿಲ್ಲ. ರಾಜ್ಯದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. ೧೬.೧ ರಷ್ಟು ಅರಣ್ಯ ಪ್ರದೇಶವಿದ್ದರೆ ಅದು ಈ ಜಿಲ್ಲೆಯಲ್ಲಿ ಶೇ. ೩೨.೬೫ ರಷ್ಟು ಇದೆ.

### ಭೌಗೋಳಿಕ ಲಕ್ಷಣ ಮತ್ತು ಭೂಮಿಯ ಬಳಕೆ : ೨೦೦೩

**ಕೋಷ್ಟಕ ೪.೧**

| ಕ್ರ.ಸಂ. | ವಿವರ | ಜಿಲ್ಲೆ | ಕರ್ನಾಟಕ |
|---|---|---|---|
| ೦೧. | ಭೌಗೋಳಿಕ ಪ್ರದೇಶ (ಹೆಕ್ಟೇರ್) | ೮,೪೭,೭೮೪ | ೧,೯೦,೪೯,೮೩೬ |
| ೦೨. | ಮಳೆಯ ಪ್ರಮಾಣ (ಮಿ.ಮೀ.) | ೨,೧೬೬ | ೮೧೯ |
| ೦೩. | ಅರಣ್ಯ ಪ್ರದೇಶ (ಹೆಕ್ಟೇರ್) | ೨,೭೬,೮೫೫ | ೩೦,೭೦,೩೩೦ |
| ೦೪. | ವ್ಯವಸಾಯೇತರ ಭೂಮಿ (ಹೆಕ್ಟೇರ್) | ೧,೦೧,೬೦೫ | ೨೧,೧೯,೬೬೦ |
| ೦೫. | ಸಾಗುವಳಿ ಮಾಡದಿರುವ ಇತರೆ ಭೂಮಿ (ಹೆಕ್ಟೇರ್) | ೨,೦೯,೭೫೦ | ೧೬,೭೮,೧೮೫ |
| ೦೬. | ಬೀಳು ಭೂಮಿ (ಹೆಕ್ಟೇರ್) | ೪೧,೭೬೫ | ೨೩,೪೪,೦೪೧ |
| ೦೭. | ಬಿತ್ತನೆಯಾದ ನಿವ್ವಳ ಪ್ರದೇಶ (ಹೆಕ್ಟೇರ್) | ೨,೧೭,೮೦೯ | ೯೮,೩೭,೬೨೦ |
| ೦೮. | ರಾಸಾಯನಿಕ ಗೊಬ್ಬರಗಳ ಬಳಕೆ (ಕೆ.ಜಿ./ಹೆಕ್ಟೇರ್) (೨೦೦೧-೦೨) | ೧೯೧ | ೧೦೭ |
| ೦೯. | ನಿವ್ವಳ ಬಿತ್ತನೆ ಪ್ರದೇಶದಲ್ಲಿ ನೀರಾವರಿಯಾದ ನಿವ್ವಳ ಪ್ರದೇಶದ ಪ್ರಮಾಣ (೨೦೦೨-೦೩) | ೫೪.೭೮ | ೨೪.೯೦ |
| ೧೦. | ಬೆಳೆಯ ತೀವ್ರತೆ (೨೦೦೨-೦೩) | ಶೇ. ೧೦೯ | ಶೇ. ೧೧೭ |

ಮೂಲ :೧. ಕರ್ನಾಟಕ ಅಂಕಿ-ಅಂಶಗಳ ನೋಟ; ೨೦೦೩-೦೪, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

೨. ಶಿವಮೊಗ್ಗ ಜಿಲ್ಲೆಯ ಅಂಕಿ-ಅಂಶಗಳ ನೋಟ; ೨೦೦೪-೦೫, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

೩. ಮಂಥ್ಲೀ ರಿವಿವ್ ಆಫ್ ಕರ್ನಾಟಕ ಎಕಾನಮಿ: ೨೦೦೪, ಸಿ.ಎಂ.ಐ.ಇ. ಬೆಂಗಳೂರು.

ಜಿಲ್ಲೆಯ ಒಟ್ಟು ಪ್ರದೇಶವನ್ನು ಪರಿಗಣಿಸಿದರೆ ಶೇ. ೧೧.೯೮ ರಷ್ಟು ವ್ಯವಸಾಯೇತರ ಭೂಮಿ, ಶೇ. ೩೨.೬೫ ಅರಣ್ಯ ಪ್ರದೇಶ ಮತ್ತು ಶೇ. ೫೫.೩೭ ರಷ್ಟು ವ್ಯವಸಾಯ ಭೂಮಿ ಇದೆ. ಅಂದರೆ ಜಿಲ್ಲೆಯಲ್ಲಿ ವ್ಯವಸಾಯೇತರ ಭೂಮಿಗಿಂತಲೂ ವ್ಯವಸಾಯ ಮಾಡುವ ಭೂಮಿಯ ಪ್ರಮಾಣವು ಅಧಿಕ. ಜಿಲ್ಲೆಯ ಭೌಗೋಳಿಕ ಪ್ರದೇಶದಲ್ಲಿ ಶೇ. ೨ ರಷ್ಟು ಭೂಮಿ ಸಾಗುವಳಿಗೆ ಯೋಗ್ಯವಾದ ಬಂಜರು ಪ್ರದೇಶವಾಗಿದ್ದು, ಈ ಪ್ರದೇಶವನ್ನು ಕೃಷಿಗೆ ಅಳವಡಿಸಿಕೊಳ್ಳಬಹುದಾಗಿದೆ.

## ೪.೩. ಜಿಲ್ಲೆಯ ಕೃಷಿ ಮತ್ತು ಸಾಗುವಳಿ ವ್ಯವಸ್ಥೆ

ರಾಜ್ಯದಲ್ಲಿ ಸರಾಸರಿ ಮಳೆಯ ಪ್ರಮಾಣ ೮೧೯ ಮಿ.ಮೀ. ಆಗಿದ್ದರೆ, ಜಿಲ್ಲೆಯಲ್ಲಿ ೨೧೬೬ ಮಿ.ಮೀ. ಆಗಿದೆ. ಕರ್ನಾಟಕದ ಐದು ಜಿಲ್ಲೆಗಳಲ್ಲಿ ಮಳೆಯ ಪ್ರಮಾಣವು ೨೦೦೦ ಮಿ.ಮೀ. ಕ್ಕಿಂತಲೂ

ಅಧಿಕ. ಅದರಲ್ಲಿ ಶಿವಮೊಗ್ಗ ಜಿಲ್ಲೆಯು ಒಂದು. ಅತ್ಯಧಿಕ ಮಳೆಯು ಬೀಳುವ ಮೊದಲ ಐದು ಜಿಲ್ಲೆಗಳಲ್ಲಿ ಶಿವಮೊಗ್ಗ ಜಿಲ್ಲೆಗೆ ನಾಲ್ಕನೆ ಸ್ಥಾನ. ಕಳೆದ ಒಂದು ದಶಕದಲ್ಲಿ ಮಳೆಯು ಪ್ರಮಾಣವು ೨೨% ರಷ್ಟು ಅಧಿಕವಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿ ಏನು ಅಂದರೆ ಈ ಹಿಂದಿನ ದಶಕದಲ್ಲಿ ರಾಜ್ಯ ಮಟ್ಟದಲ್ಲಿ ಮಳೆ ಬೀಳುವ ಪ್ರಮಾಣ ಕಡಿಮೆಯಾಗುತ್ತಿದೆ. ಆದರೆ ಈ ಜಿಲ್ಲೆಯಲ್ಲಿ ಅದು ಅಧಿಕವಾಗುತ್ತಿದೆ. ಇದು ಜಿಲ್ಲೆಯಲ್ಲಿ ಕೃಷಿಯ ಅಭಿವೃದ್ಧಿಗೆ ಪೂರಕವಾದಂಥ ವಾತಾವರಣವನ್ನು ನಿರ್ಮಾಣವಾಗುತ್ತಿದೆ ಎಂಬ ಅಂಶವನ್ನು ಸೂಚಿಸುತ್ತದೆ.

ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಕೆಲ ಸೌಲಭ್ಯಗಳು ಅಗತ್ಯವೆನಿಸುತ್ತವೆ. ಹಣಕಾಸಿನ ಸೌಲಭ್ಯಗಳೊಂದಿಗೆ ಕೃಷಿ ಸಾಧನಗಳು ಸಹ ಕೃಷಿಯ ಪ್ರಗತಿಗೆ ಪೂರಕವಾಗಿ ಕೆಲಸ ಮಾಡುತ್ತವೆ. ಇತ್ತೀಚೆಗೆ ಸಂಶೋಧನೆಗಳ ಫಲವಾಗಿ ರಾಸಾಯನಿಕ ಗೊಬ್ಬರಗಳ ಬಳಕೆ ಅಧಿಕ ಪ್ರಮಾಣದಲ್ಲಿ ನಡೆಯುತ್ತಿದೆ.

ಕರ್ನಾಟಕ ಸರಕಾರದ ಕೃಷಿ ಇಲಾಖೆಯು ಕರ್ನಾಟಕದ ಜಿಲ್ಲೆಗಳನ್ನು ಅಲ್ಲಿಯ ಕೃಷಿ ಚಟುವಟಿಕೆ, ಹವಾಗುಣ, ಉತ್ಪಾದಕತೆಗಳನ್ನು ಮಾನದಂಡವನ್ನಾಗಿಟ್ಟುಕೊಂಡು ರಾಜ್ಯವನ್ನು ಮೂರು ವಲಯಗಳನ್ನಾಗಿ -'ಅಧಿಕ ಉತ್ಪಾದಕತೆ, ಕಡಿಮೆ ಉತ್ಪಾದಕತೆ, ಹೆಚ್ಚು ಸಾಮರ್ಥ್ಯ ಮತ್ತು ಕಡಿಮೆ ಉತ್ಪಾದಕತೆ ಇರುವ ವಲಯಗಳೆಂದು ವಿಂಗಡಿಸಿದೆ.

ಮೊದಲನೆ ವಲಯವಾದ ಅಧಿಕ ಉತ್ಪಾದಕತೆಯ ವಲಯದಲ್ಲಿ ೧೧ ಜಿಲ್ಲೆಗಳಿದ್ದು, ಅದರಲ್ಲಿ ಶಿವಮೊಗ್ಗ ಜಿಲ್ಲೆಯು ಒಂದು (ನೋಡಿ:ಪ್ರಾ.ಅ.ನಿ.ಉ.ಸ. ವರದಿ ೨೦೦೨; ಪು. ೨೬೩). ಪ್ರಾದೇಶಿಕ ಅಸಮಾನತೆ ನಿವಾರಣೆಯ ಉನ್ನತಾಧಿಕಾರದ ಸಮಿತಿ ಕೃಷಿಗೆ ಪೂರಕವಾದ ಮೂಲಭೂತ ಸೌಕರ್ಯ ಮತ್ತು ಕೃಷಿಯಲ್ಲಿನ ಉತ್ಪಾದಕತೆಗಳನ್ನು ಪರಿಗಣಿಸಿ ಕರ್ನಾಟಕದ ತಾಲೂಕುಗಳನ್ನು ವಿವಿಧ ವಿಭಾಗಗಳನ್ನಾಗಿ ವಿಂಗಡಿಸಿದೆ. ಕರ್ನಾಟಕದ ೩೭ ತಾಲೂಕುಗಳಲ್ಲಿ ಕೃಷಿಯ ಮೂಲಭೂತ ಸೌಕರ್ಯಗಳು ಮತ್ತು ಕೃಷಿಯಲ್ಲಿಯ ಉತ್ಪಾದಕತೆಯು, ರಾಜ್ಯದ ಸರಾಸರಿ ಮಟ್ಟಕ್ಕಿಂತಲೂ ಕಡಿಮೆ ಇದೆ. ಮೂಲಭೂತ ಸೌಲಭ್ಯಗಳು ರಾಜ್ಯದ ಸರಾಸರಿ ಪ್ರಮಾಣಕ್ಕಿಂತಲೂ ಕಡಿಮೆ ಇರುವ ತಾಲೂಕುಗಳ ಸಂಖ್ಯೆ ೩೭ ಆಗಿದ್ದು, ಅದರಲ್ಲಿ ಜಿಲ್ಲೆಯ ತೀರ್ಥಹಳ್ಳಿ ತಾಲೂಕು ಒಂದಾಗಿದೆ. ಜಿಲ್ಲೆಯ ಇತರೆ ತಾಲೂಕುಗಳಲ್ಲಿ ಶಿವಮೊಗ್ಗ, ಶಿಕಾರಿಪುರ, ಭದ್ರಾವತಿ ಕೃಷಿಯ ಮೂಲಭೂತ ಸೌಕರ್ಯ ಮತ್ತು ಉತ್ಪಾದಕತೆಯು ರಾಜ್ಯ ಸರಾಸರಿಗಿಂತಲೂ ಉತ್ತಮ ಮಟ್ಟದಲ್ಲಿದೆ (ಪ್ರಾ.ಅ.ನಿ.ಉ.ಸ. ೨೦೦೨: ಪು. ೨೭೦).

## ಭೂ ಹಿಡುವಳಿಗಳ ಸ್ವರೂಪ

ಕೋಷ್ಟಕ ೪.೨

| ಕ್ರ.ಸಂ. | ವಿವರ | ಹಿಡುವಳಿಗಳ ಸಂಖ್ಯೆ | | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ಶಿವಮೊಗ್ಗ ಜಿಲ್ಲೆ | ಕರ್ನಾಟಕ | ಶಿವಮೊಗ್ಗ ಜಿಲ್ಲೆ | ಕರ್ನಾಟಕ |
| ೦೧. | ಅತಿಸಣ್ಣ ಹಿಡುವಳಿಗಳು | ೧೦೦೦೭೦ | ೪೨೦೬೯೨೮ | ೫೩೫೯೭ | ೧೪೯೨೩೫೨ |
| ೦೨. | ಸಣ್ಣ ಹಿಡುವಳಿಗಳು | ೫೧೫೧೮ | ೧೯೦೯೨೦೩ | ೭೨೧೧೯ | ೨೭೪೧೮೬೬ |
| ೦೩. | ಮಧ್ಯಮ ಹಿಡುವಳಿಗಳು | ೩೩೧೩೨ | ೧೮೨೮೭೮೭ | ೧೧೫೪೯೦ | ೬೭೪೫೯೨೨ |
| ೦೪. | ಅರೆಮಧ್ಯಮ & ಮಧ್ಯಮ ದೊಡ್ಡ ಹಿಡುವಳಿಗಳು | ೧೨೦೪ | ೮೯೪೭೦ | ೧೭೫೫೨ | ೧೩೨೭೨೭೬ |
| ೦೫. | ಒಟ್ಟು ಹಿಡುವಳಿಗಳು | ೧೮೫೯೨೪ | ೮೦೩೪೩೮೮ | ೨೫೮೭೫೮ | ೧೨೩೦೭೪೧೬ |

ಮೂಲ : ಕರ್ನಾಟಕ ಅಂಕಿ-ಅಂಶಗಳ ನೋಟ; ೨೦೦೩-೦೪, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು

ಶಿವಮೊಗ್ಗ ಜಿಲ್ಲೆಯ ಒಟ್ಟು ಹಿಡುವಳಿಗಳ ಸಂಖ್ಯೆ ೧.೮೫ ಲಕ್ಷ. ಜಿಲ್ಲೆಯ ಒಟ್ಟು ಹಿಡುವಳಿಗಳಲ್ಲಿ ಶೇ. ೫೦ ಕ್ಕಿಂತಲೂ ಅಧಿಕ ಭಾಗ ಅತಿ ಸಣ್ಣ ಹಿಡುವಳಿಗಳಾಗಿವೆ. ಆದರೆ ಆ ಹಿಡುವಳಿಗಳ ಹಿಡಿತದಲ್ಲಿರುವ ಪ್ರದೇಶ ಶೇ. ೨೦.೧೭ ರಷ್ಟು ಮಾತ್ರ. ಜಿಲ್ಲೆಯ ಇಡೀ ಭೂಮಾಲೀಕತ್ವವು ಸಣ್ಣ ಮತ್ತು ಮಧ್ಯಮ ಹಿಡುವಳಿದಾರರ ನಿಯಂತ್ರಣದಲ್ಲಿದೆ. ಈ ಹಿಡುವಳಿದಾರರ ಪ್ರಮಾಣವು ಶೇ. ೪೫ ರಷ್ಟಿದ್ದು, ಇವರ ನಿಯಂತ್ರಣದಲ್ಲಿರುವ ಭೂಪ್ರದೇಶದ ವಿಸ್ತೀರ್ಣವು ಶೇ. ೭೨ ರಷ್ಟಾಗಿದೆ. ಬಹುಶಃ ಶಿವಮೊಗ್ಗ ಜಿಲ್ಲೆಯಲ್ಲಿ ಈ ಹಿಂದಿನಿಂದಲೂ ನಡೆದುಕೊಂಡು ಬಂದ ಸಾಮಾಜಿಕ ಚಳುವಳಿಗಳಿಂದಾಗಿ ಭೂಮಿಯು ಅಲ್ಲಿಯ ದೊಡ್ಡ ಹಿಡುವಳಿದಾರರಲ್ಲಿ ಮಡುಗಟ್ಟಿಕೊಂಡಿಲ್ಲದಿರುವುದಕ್ಕೆ ಕಾರಣವಾಗಿರಬಹುದು. ಅಂದರೆ ಕರ್ನಾಟಕದ ಇತರೆ ಭಾಗಗಳಲ್ಲಿ ಕಂಡುಬರುವಂಥ ಭೂಮಿಯ ಅಸಮಾನತೆಯ ಹಂಚಿಕೆಯಲ್ಲಿಯ ವ್ಯತ್ಯಾಸಗಳು ಶಿವಮೊಗ್ಗ ಜಿಲ್ಲೆಯಲ್ಲಿ ಅಷ್ಟೊಂದು ಕಂಡುಬರುವುದಿಲ್ಲ. ರಾಜ್ಯದ ಒಟ್ಟು ಹಿಡುವಳಿಗಳ ಸಂಖ್ಯೆಯಲ್ಲಿ ಶೇ. ೨.೩೧ ರಷ್ಟು ಹಿಡುವಳಿಗಳು ಶಿವಮೊಗ್ಗ ಜಿಲ್ಲೆಯಲ್ಲಿವೆ. ಅಲ್ಲದೆ ರಾಜ್ಯದ ಒಟ್ಟು ಹಿಡುವಳಿಗಳ ವಿಸ್ತೀರ್ಣದಲ್ಲಿ ಶಿವಮೊಗ್ಗ ಜಿಲ್ಲೆಯ ಪಾಲು ಶೇ. ೨.೧೦ ರಷ್ಟು ಮಾತ್ರ.

## ಬೆಳೆ ಪದ್ಧತಿ ಮತ್ತು ಉತ್ಪಾದಕತೆ : ೨೦೦೨-೦೩

**ಕೋಷ್ಟಕ ೪.೩**

| ಕ್ರ.ಸಂ. | ವಿವರ | ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | ಉತ್ಪನ್ನ ಇಳುವಳಿ | ಪ್ರತಿ ಹೆಕ್ಟೇರ್‌ಗೆ |
|---|---|---|---|---|
| ೦೧. | ಒಟ್ಟು ಏಕದಳ ಧಾನ್ಯಗಳು ಮತ್ತು ಉಪತೃಣ ಬೆಳೆಗಳ ಉತ್ಪನ್ನ (ಟನ್‌ಗಳಲ್ಲಿ) | ೧೭೨೨೪೭ | ೩೧೮೦೨೧ | ೧.೮೪ |
| ೦೨. | ಒಟ್ಟು ದ್ವಿದಳ ಧಾನ್ಯಗಳ ಉತ್ಪನ್ನ (ಟನ್‌ಗಳಲ್ಲಿ) | ೫೯೯೨ | ೧೫೨೧ | ೩.೯೪ |
| ೦೩. | ಒಟ್ಟು ಆಹಾರ ಧಾನ್ಯಗಳು | ೧೭೮೨೩೯ | ೩೧೯೫೪೨ | ೧.೭೯ |
| ೦೪. | ಕಬ್ಬು (ಟನ್‌ಗಳಲ್ಲಿ) | ೯೯೬೧ | ೧೩೦೫೮೮೭ | ೧೩೧ |
| ೦೫. | ಅಡಿಕೆ | ೨೮೦೩೯ | —— | —— |
| ೦೬. | ತೆಂಗು | ೬೭೦೦ | —— | —— |

ಮೂಲ : ಕರ್ನಾಟಕ ಅಂಕಿ-ಅಂಶಗಳ ನೋಟ; ೨೦೦೩-೦೪, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು

ಆಹಾರ ಧಾನ್ಯಗಳು ಜಿಲ್ಲೆಯ ಪ್ರಮುಖ ಬೆಳೆಗಳಾಗಿವೆ. ಇದರೊಂದಿಗೆ ತೆಂಗು, ಕಬ್ಬು, ಅಡಿಕೆಗಳು ಶಿವಮೊಗ್ಗ ಜಿಲ್ಲೆಯ ಬೆಳೆ ಪದ್ಧತಿಯಲ್ಲಿ ಪ್ರಧಾನ ಪಾಲನ್ನು ಪಡೆದುಕೊಂಡಿವೆ. ಆಹಾರ ಧಾನ್ಯಗಳನ್ನು ಬೆಳೆಯುವ ವಿಸ್ತೀರ್ಣ ಶೇ. ೯೬ ರಷ್ಟು. ಇದರಲ್ಲಿ ಏಕದಳ ಧಾನ್ಯಗಳು ಮತ್ತು ಉಪತೃಣ ಬೆಳೆಗಳನ್ನು ಬೆಳೆಯಲಾಗುತ್ತದೆ. ಒಟ್ಟು ಏಕದಳ ಧಾನ್ಯಗಳ ಇಳುವರಿಯು ಪ್ರತಿ ಹೆಕ್ಟೇರ್ ೧.೮೪ ಟನ್ ಆಗಿದ್ದು, ಇದು ರಾಜ್ಯ ಸರಾಸರಿಮಟ್ಟ (೧.೨೦ ಟನ್)ಕ್ಕಿಂತಲೂ ಅಧಿಕವಾಗಿದೆ. ಅಲ್ಲದೆ ಈ ಬೆಳೆಗಳಿಗೆ ಸಂಬಂಧಿಸಿದಂತೆ ಬೆಂಗಳೂರು ವಿಭಾಗದಲ್ಲಿಯೇ ಅಧಿಕ ಇಳುವರಿ ಹೊಂದಿರುವ ಪ್ರಥಮ ಜಿಲ್ಲೆ ಶಿವಮೊಗ್ಗವಾಗಿದೆ.

ಜಿಲ್ಲೆಯ ಕಬ್ಬು ಬೆಳೆಯ ಇಳುವರಿ ಪ್ರತಿ ಹೆಕ್ಟೇರ್‌ಗಳಿಗೆ ೧೩೧ ಟನ್‌ಗಳಾಗಿದ್ದು ಬೆಂಗಳೂರು ವಿಭಾಗದ ಏಳು ಜಿಲ್ಲೆಗಳ ಪೈಕಿ ಇದು ಪ್ರಥಮ ಸ್ಥಾನದಲ್ಲಿದೆ. ಒಟ್ಟಾರೆಯಾಗಿ ಜಿಲ್ಲೆಯು ಕೃಷಿ ಉತ್ಪನ್ನಗಳ ದೃಷ್ಟಿಯಿಂದ ಉತ್ತಮ ಸ್ಥಿತಿಯಲ್ಲಿದೆ ಎನ್ನಬಹುದು. ಮೇಲಿನ ಕೋಷ್ಟಕದಲ್ಲಿಯ ಎಲ್ಲ ಬೆಳೆಗಳ ಇಳುವರಿಗಳು ರಾಜ್ಯದ ಸರಾಸರಿ ಮಟ್ಟಕ್ಕಿಂತಲೂ ಉತ್ತಮವಾಗಿವೆ.

## ೪.೪. ಜಿಲ್ಲೆಯ ನೀರಾವರಿ ವ್ಯವಸ್ಥೆ

ಶಿವಮೊಗ್ಗ ಜಿಲ್ಲೆ ಜಲಸಂಪನ್ಮೂಲಗಳ ದೃಷ್ಟಿಯಿಂದ ರಾಜ್ಯದಲ್ಲೆ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಜಿಲ್ಲೆಯಲ್ಲಿ ಭದ್ರಾ ಜಲಾಶಯ, ತುಂಗಾ ಜಲಾಶಯ, ಅಂಜನಾಪುರ ಮತ್ತು ಅಂಬಲಿಗೊಳ ಯೋಜನೆಗಳಿವೆ. ಈ ಜಿಲ್ಲೆಯ ೦.೬೪ ಲಕ್ಷ ಹೆಕ್ಟೇರು ಪ್ರದೇಶವು ಈ ಯೋಜನೆಗಳಿಂದಾಗಿ ನೀರಾವರಿ ಪ್ರದೇಶವಾಗಿದೆ. ಜಿಲ್ಲೆಯ ನಿವ್ವಳ ಬಿತ್ತನೆ ಪ್ರದೇಶದಲ್ಲಿ ಶೇ. ೫೪.೭೮ ರಷ್ಟಿದೆ. ರಾಜ್ಯದ ಸರಾಸರಿ ಮಟ್ಟಕ್ಕೆ (೨೪.೯೦) ಹೋಲಿಸಿದರೆ, ಜಿಲ್ಲೆಯಲ್ಲಿ ನೀರಾವರಿಯಾದ ನಿವ್ವಳ ಪ್ರದೇಶದ ಪ್ರಮಾಣವು ಅಧಿಕವಾಗಿದೆ. ಇಡೀ ರಾಜ್ಯದಲ್ಲಿಯೆ, ನಿವ್ವಳ ಬಿತ್ತನೆ ಪ್ರದೇಶದಲ್ಲಿ, ನೀರಾವರಿಯಾದ ನಿವ್ವಳ ಪ್ರದೇಶವನ್ನು ಅತ್ಯಧಿಕ ಪ್ರಮಾಣದಲ್ಲಿ ಹೊಂದಿರುವ ಪ್ರಥಮ ಜಿಲ್ಲೆ ಎನ್ನುವ ಪಾತ್ರವನ್ನು ತನ್ನದಾಗಿಸಿಕೊಂಡಿದೆ.

### ನೀರಾವರಿ ಪ್ರದೇಶ ಮತ್ತು ನೀರಾವರಿಯ ಮೂಲಗಳು

**ಕೋಷ್ಟಕ ೪.೪**

| ಕ್ರ.ಸಂ. | ವಿವರ | ಶಿವಮೊಗ್ಗ ಜಿಲ್ಲೆ | ಕರ್ನಾಟಕ |
|---|---|---|---|
| ೦೧. | ನಿವ್ವಳ ಬಿತ್ತನೆ ಪ್ರದೇಶ | ೨,೧೭,೮೦೯ | ೯೮,೩೭,೬೨೦ |
| ೦೨. | ನಿವ್ವಳ ನೀರಾವರಿ ಪ್ರದೇಶ | ೧,೧೯,೩೨೮ | ೨೪,೫೦,೪೨೭ |
| ೦೩. | ನಿವ್ವಳ ಬಿತ್ತನೆಯಾದ ಪ್ರದೇಶದಲ್ಲಿ ನೀರಾವರಿಯಾದ ನಿವ್ವಳ ಪ್ರದೇಶದ ಶೇ. ಪ್ರಮಾಣ | ೫೪.೭೮ | ೨೪.೯೦ |
| | ನೀರಾವರಿ ಮೂಲಗಳು | | |
| ೦೪. | ಕಾಲುವೆ | ೪೨೪೪೬ | ೭೭೨೬೭೪ |
| ೦೫. | ಕೆರೆ | ೪೭೫೦೯ | ೧೮೨೯೬೩ |
| ೦೬. | ಬಾವಿ | ೬೪೭೯ | ೪೪೭೭೧೨ |
| ೦೭. | ಕೊಳವೆ ಬಾವಿಗಳು | ೧೧೦೯೫ | ೭೩೬೯೯ |
| ೦೮. | ಏತ ನೀರಾವರಿ | ೪೨೮೮ | ೧೦೦೯೯೦ |
| ೦೯. | ಇತರೆ ಮೂಲಗಳು | ೭೫೧೧ | ೨೦೩೦೯೭ |
| | ಒಟ್ಟು | ೧೧೯೩೨೮ | ೨೪೫೦೪೨೭ |

ಮೂಲ : ಕರ್ನಾಟಕ ಅಂಕಿ-ಅಂಶಗಳ ನೋಟ: ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ೨೦೦೩-೦೪

ಕೋಷ್ಟಕ ೪.೪.ರಲ್ಲಿ ತೋರಿಸಿರುವಂತೆ ಶಿವಮೊಗ್ಗ ಜಿಲ್ಲೆಯ ನೀರಾವರಿ ಪ್ರದೇಶ ಮತ್ತು ನೀರಾವರಿಯ ಮೂಲಗಳನ್ನು ಕರ್ನಾಟಕ ರಾಜ್ಯದೊಂದಿಗೆ ಹೋಲಿಕೆ ಮಾಡಲಾಗಿದೆ. ಜಿಲ್ಲೆಯ ನಿವ್ವಳ ಬಿತ್ತನೆ ಪ್ರದೇಶವು ರಾಜ್ಯದ ನಿವ್ವಳ ಬಿತ್ತನೆ ಪ್ರದೇಶದ ಶೇ. ೨.೨೧ ರಷ್ಟಿದೆ. ರಾಜ್ಯದ ಒಟ್ಟು ನಿವ್ವಳ ನೀರಾವರಿ ಪ್ರದೇಶದಲ್ಲಿ ಜಿಲ್ಲೆಯ ಶೇ.೪.೮೬ ರಷ್ಟು ಪಾಲು ಪಡೆದುಕೊಂಡಿದೆ. ಈ ಜಿಲ್ಲೆ ಶೇಕಡವಾರು ಪ್ರಮಾಣದಲ್ಲಿ ಪ್ರಥಮ ಸ್ಥಾನ ಪಡೆದುಕೊಂಡಿದೆ. ಇದು ರಾಜ್ಯದ ಸರಾಸರಿಗಿಂತ ಎರಡು ಪಟ್ಟು ಹೆಚ್ಚು. ನೀರಾವರಿ ಮೂಲಗಳಲ್ಲಿಯೂ ರಾಜ್ಯಕ್ಕೆ ಹೋಲಿಸಿದರೆ ಜಿಲ್ಲೆಯು ವೈವಿಧ್ಯತೆಯಿಂದ ಕೂಡಿದೆ. ರಾಜ್ಯದ ನೀರಾವರಿ ಮೂಲಗಳಲ್ಲಿ ಕಾಲುವೆ ನೀರಾವರಿ ಪ್ರಧಾನವಾಗಿದ್ದರೂ, ಜಿಲ್ಲೆಯಲ್ಲಿ ಕೆರೆ ನೀರಾವರಿಯು ಮೊದಲ ಸ್ಥಾನವನ್ನು ಪಡೆದುಕೊಂಡಿದೆ. ಹಾಗಾಗಿ ಕಾಲುವೆಗೆ ನಂತರದ ಸ್ಥಾನ ಬರುತ್ತದೆ. ಅದೇ ರೀತಿ ಕೊಳವೆ ಬಾವಿಯಲ್ಲಿಯೂ ಸಹ ಹೆಚ್ಚಿನ ಪಾಲನ್ನು ಕಾಣಬಹುದು.

ಕೋಷ್ಟಕ ೪.೫ ರಲ್ಲಿ ತೋರಿಸುವಂತೆ ಜಿಲ್ಲೆಯಲ್ಲಿ ಒಟ್ಟು ೭ ಮುಖ್ಯವಾದ ನೀರಾವರಿ ಯೋಜನೆಗಳಿದ್ದು, ಅವುಗಳಲ್ಲಿ ೬ ಯೋಜನೆಗಳು ಪೂರ್ಣಗೊಂಡಿದ್ದು ಕೇವಲ ತುಂಗಾ ಮೇಲ್ದಂಡೆ ಯೋಜನೆ ಮಾತ್ರ ಬಾಕಿ ಉಳಿದಿದೆ. ಈ ಯೋಜನೆಯು ಪೂರ್ಣಗೊಳ್ಳುವ ಹಂತದಲ್ಲಿದೆ. ಈಗಾಗಲೇ ಪೂರ್ಣಗೊಂಡಿರುವ ಆರು ಯೋಜನೆಗಳಿಂದ ಒಟ್ಟು ೧೨೯೬೯ ಹೆ. ಪ್ರದೇಶಕ್ಕೆ ನೀರಾವರಿಯಾಗುತ್ತದೆ.

ಕೋಷ್ಟಕ ೪.೬ ರಲ್ಲಿ ಜಿಲ್ಲೆಯ ಸಣ್ಣ ನೀರಾವರಿ ವ್ಯಾಪ್ತಿಗೆ ಬರುವ ಕೆರೆಗಳ ಸಂಖ್ಯೆಯನ್ನು ತಾಲೂಕುವಾರು ಪಟ್ಟಿ ಮಾಡಲಾಗಿದೆ. ಈ ಕೆರೆಗಳಲ್ಲಿ ೨೩೦೩ ಕೆರೆಗಳು ತಾಲೂಕು ಅಭಿವೃದ್ಧಿ ಮಂಡಳಿ ವ್ಯಾಪ್ತಿಗೆ ಬಂದರೆ, ೩೪೧೪ ಕೆರೆಗಳು ಜಿಲ್ಲಾಪಂಚಾಯಿತಿಗಳ ವ್ಯಾಪ್ತಿಗೆ ಬರುತ್ತವೆ. ಉಳಿದ ೩೨೭ ಕೆರೆಗಳು ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ಸೇರುತ್ತವೆ. ಒಟ್ಟು ೬೦೪೪ ಕೆರೆಗಳನ್ನು ಹೊಂದಿರುವ ಶಿವಮೊಗ್ಗ ಜಿಲ್ಲೆಯು ಇತರ ಜಿಲ್ಲೆಗಳಿಗೆ ಹೋಲಿಸಿದರೆ ಜಿಲ್ಲೆಯು ರಾಜ್ಯದ ಶೇ. ೧೬.೪೬ ರಷ್ಟು ಕೆರೆಗಳನ್ನು ಹೊಂದಿದ್ದು ಪ್ರಥಮ ಸ್ಥಾನದಲ್ಲಿದೆ. ಇದು ಇಲ್ಲಿನ ನೀರಾವರಿ ಅಭಿವೃದ್ಧಿಗೆ ಕಾರಣವಾಗಿರುವ ವಿಶಿಷ್ಟ ಸಂಗತಿಯಾಗಿದೆ. ತಾಲೂಕುವಾರು ಕೆರೆಗಳ ಸಂಖ್ಯೆಯನ್ನು ಗಮನಿಸಿದಾಗ ತೀರ್ಥಹಳ್ಳಿ ಮೊದಲ ಸ್ಥಾನದಲ್ಲಿದ್ದು, ಭದ್ರಾವತಿ ಕೊನೆಯ ಸ್ಥಾನದಲ್ಲಿದೆ.

# ಶಿವಮೊಗ್ಗ ಜಿಲ್ಲೆಯ ನೀರಾವರಿ ಯೋಜನೆಗಳ ಸ್ಥಿತಿಗತಿ (೧.೪.೨೦೦೧ ರಂತೆ)

ಕೋಷ್ಟಕ ೪.೫

| ಕ್ರ.ಸಂ. | ಭಾರಿ ಯೋಜನೆ | ಬಳಕೆ (ಟಿ.ಎಂ.ಸಿ.ಗಳು) | | | ಹಣಕಾಸು (ಲಕ್ಷಗಳಲ್ಲಿ) | | | | ಸಾಮರ್ಥ್ಯ (ಹೆಕ್ಟೇರ್‌ಗಳಲ್ಲಿ) | | |
|---|---|---|---|---|---|---|---|---|---|---|---|
| | | ಯೋಜಿತ | ಬಳಕೆ | ಉಳಿಕೆ | ಅಡಳಿತ ಮಂಜೂರು ವೆಚ್ಚ | ಪ್ರಸ್ತುತ ವೆಚ್ಚ | ೩.೨೦೦೧ರ ವರೆಗಿನ ವೆಚ್ಚ | ಉಳಿಕೆ ವೆಚ್ಚ | ಯೋಜಿತ | ೩.೨೦೦೧ ವರೆಗಿನ ನಿರ್ಮಾಣ | ಉಳಿಕೆ |
| ೦೧. | ಭದ್ರಾ ಯೋಜನೆ | ೬೧.೭ | ೬೧.೭ | ೦ | ೩೩೫೩ | ೧೭೯೭೭.೪೧ | ೧೭೯೭೭.೪೧ | ೦ | ೧೦೫೫೭೦ | ೧೦೫೫೭೦ | ೦ |
| ೦೨. | ತುಂಗಾ ಯೋಜನೆ | ೧೧.೫ | ೧೧.೫ | ೦ | ೩೩೧ | ೩೩೧ | ೩೩೧ | ೦ | ೮೭೦೪ | ೮೭೦೪ | ೦ |
| ೦೩. | ಅಂಬ್ಲಿಗೊಳ | ೧.೪ | ೧.೪ | ೦ | ೧೧೬ | ೧೧೬ | ೧೧೬ | ೦ | ೨೯೫೫ | ೨೯೫೫ | ೦ |
| ೦೪. | ಅಂಜನಾಪುರ | ೨.೫ | ೨.೫ | ೦ | ೨೧ | ೨೧ | ೨೧ | ೦ | ೬೭೩೬ | ೬೭೩೬ | ೦ |
| ೦೫. | ಗೋರವಿ | ೩.೧ | ೩.೧ | ೦ | ೦ | ೦ | ೦ | ೦ | ೪೪೬೬ | ೪೪೬೬ | ೦ |
| ೦೬. | ಜಂಭದಹಳ್ಳ | ೦.೭ | ೦.೭ | ೦ | ೧೧೫ | ೧೧೫ | ೧೧೫ | ೦ | ೧೫೩೮ | ೧೫೩೮ | ೦ |
| ೦೭. | ತುಂಗಾ ಮೇಲ್ದಂಡೆ (ಚಾಲನೆಯಲ್ಲಿರುವ ಯೋಜನೆ) | ೧೨.೨೪ | ೦ | ೧೨.೨೪ | ೨೭೧೪೧ | ೯೧೫೩೫ | ೮೮೩.೯೬ | ೯೨೬೫೧.೦೪ | ೯೪೭೦೦ | ೦ | ೯೪೭೦೦ |

ಮೂಲ : ಪ್ರಾದೇಶಿಕ ಅಸಮಾನತೆ ನಿವಾರಣೆಯ ಉನ್ನತಾಧಿಕಾರದ ಸಮಿತಿಯ ಅಂತಿಮ ವರದಿ ೨೦೦೨, ಕರ್ನಾಟಕ ಸರ್ಕಾರ, ಬೆಂಗಳೂರು

## ಶಿವಮೊಗ್ಗ ಜಿಲ್ಲೆಯಲ್ಲಿನ ಸಣ್ಣ ನೀರಾವರಿ ವ್ಯವಸ್ಥೆ (ಕೆರೆಗಳ ಸಂಖ್ಯೆ)

## ತಾಲೂಕುವಾರು ಸ್ಥಿತಿ - ೩೦.೯.೨೦೦೦ದಲ್ಲಿದ್ದಂತೆ

**ಕೋಷ್ಟಕ ೪.೬**

| ಕ್ರ.ಸಂ. | ತಾಲೂಕು | ತಾಲೂಕು ಅಭಿವೃದ್ಧಿ ಮಂಡಳಿ ವ್ಯಾಪ್ತಿಯಲ್ಲಿ ಬರುವ ಕೆರೆಗಳ ಸಂಖ್ಯೆ | ಜಿಲ್ಲಾ ಪಂಚಾಯಿತಿ ವ್ಯಾಪ್ತಿಗೆ ೪.೪೦. ಹೆ. | ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಗೆ ೪೦ ರಿಂದ ಮೇಲ್ಪಟ್ಟು | ಒಟ್ಟು ಕೆರೆಗಳು | ರಾಜ್ಯದ ಒಟ್ಟು ಶೇಕಡವಾರು |
|---|---|---|---|---|---|---|
| ೦೧. | ಶಿವಮೊಗ್ಗ | ೨೦೩ | ೭೦೬ | ೫೫ | ೯೬೪ | ೨.೬೩ |
| ೦೨. | ಭದ್ರಾವತಿ | ೧೬೧ | ೫೭ | ೦೪ | ೨೨೨ | ೦.೬೦ |
| ೦೩. | ತೀರ್ಥಹಳ್ಳಿ | ೫೫೫ | ೭೨೨ | ೦೯ | ೧೨೮೬ | ೩.೫೦ |
| ೦೪. | ಸಾಗರ | ೨೨೦ | ೪೮೨ | ೨೭ | ೭೨೯ | ೧.೯೯ |
| ೦೫. | ಸೊರಬ | ೩೯೭ | ೨೩೭ | ೧೨೦ | ೭೫೪ | ೨.೦೫ |
| ೦೬. | ಶಿಕಾರಿಪುರ | ೩೯೨ | ೬೯೯ | ೧೦೩ | ೧೧೯೪ | ೩.೨೫ |
| ೦೭. | ಹೊಸನಗರ | ೩೭೫ | ೫೧೧ | ೦೯ | ೮೯೫ | ೨.೪೪ |
| | ಜಿಲ್ಲೆಯ ಒಟ್ಟು | ೨೩೦೩ | ೩೪೧೪ | ೩೨೭ | ೬೦೪೪ | ೧೬.೪೪ |

ಮೂಲ : ಪ್ರಾದೇಶಿಕ ಅಸಮಾನತೆ ನಿವಾರಣೆಯ ಉನ್ನತಾಧಿಕಾರದ ಸಮಿತಿಯ ಅಂತಿಮ ವರದಿ ೨೦೦೨, ಕರ್ನಾಟಕ ಸರ್ಕಾರ, ಬೆಂಗಳೂರು

## ೪.೫. ಅಧ್ಯಯನಕ್ಕೆ ಒಳಪಟ್ಟಂತಹ ನೀರಾವರಿ ಪ್ರದೇಶ

ಪ್ರಸ್ತುತ ಅಧ್ಯಯನವನ್ನು ಶಿವಮೊಗ್ಗ ಜಿಲ್ಲೆಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಆದುದರಿಂದ ಅಧ್ಯಯನವು ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳನ್ನು ಮಾತ್ರ ಒಳಗೊಂಡಿದ್ದು, ಮುಖ್ಯವಾಗಿ ಭದ್ರಾ ಮತ್ತು ತುಂಗಾ ಅಣೆಕಟ್ಟಿನ ವ್ಯಾಪ್ತಿಯಲ್ಲಿ ಬರುವ ಒಡಂಬಡಿಕೆ ಒಪ್ಪಂದವಾಗಿರುವ ಆಯ್ದ ೨೫ ನೀರು ಬಳಕೆದಾರರ ಸಹಕಾರ ಸಂಘಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಹಿನ್ನಲೆಯಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಶಿವಮೊಗ್ಗ ಮತ್ತು ಭಧ್ರಾವತಿ ತಾಲ್ಲೂಕುಗಳಲ್ಲಿಯ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳನ್ನು ಅಧ್ಯಯನಕ್ಕೆ ಆಯ್ದುಕೊಂಡಿರುವುದರಿಂದ ೨ ತಾಲ್ಲೂಕುಗಳಿಗೆ ಮಾತ್ರ ಸೀಮಿತವಾಗಿದೆ. ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಈ ಅಧ್ಯಯನ ಬರುತ್ತದೆ. ಅದರಲ್ಲಿಯೂ ಶಿವಮೊಗ್ಗ ಮತ್ತು ಭದ್ರಾವತಿ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಬರುವ ಒಡಂಬಡಿಕೆ ಒಪ್ಪಂದವಾಗಿರುವ ೨೫ ನೀ.ಬ.ಸ. ಸಂಘಗಳನ್ನು ಅಧ್ಯಯನಕ್ಕೆ ಕಾಲುವೆಯ ಮೇಲ್ತುದಿ, ಮಧ್ಯಭಾಗ ಮತ್ತು ಕೆಳತುದಿಗೆ ಸಂಬಂಧಿಸಿದಂತೆ ಸಂಘಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ನಡೆಸಲಾಗಿದೆ.

ಶಿವಮೊಗ್ಗ ಮತ್ತು ಭದ್ರಾವತಿ ತಾಲ್ಲೂಕುಗಳನ್ನು ಸಾಪೇಕ್ಷವಾಗಿ ಅಧ್ಯಯನ ಮಾಡಿದಾಗ ಸರಿಸುಮಾರು ಶಿವಮೊಗ್ಗ ತಾಲ್ಲೂಕು ಎಲ್ಲ ರಂಗಗಳಲ್ಲಿ ಮುಂದುವರಿದ ತಾಲ್ಲೂಕಾಗಿದೆ. ದೊಡ್ಡ ಕೈಗಾರಿಕೆಗಳ ದೃಷ್ಟಿಯಲ್ಲಿ ಭದ್ರಾವತಿ ತಾಲ್ಲೂಕು ಮೊದಲ ಸ್ಥಾನದಲ್ಲಿ ಬರುತ್ತದೆ. ಉಳಿದಂತೆ ಶಿವಮೊಗ್ಗ ಜಿಲ್ಲಾ ಕೇಂದ್ರವಾಗಿರುವುದರಿಂದ ಎಲ್ಲ ರೀತಿಯಲ್ಲಿ ಅಗ್ರಸ್ಥಾನದಲ್ಲಿ ಮೆರೆದಿದೆ. ಅಂದರೆ ಜಿಲ್ಲಾ ಕೇಂದ್ರವಾಗುವುದೇ ಅಭಿವೃದ್ಧಿ ಮತ್ತು ಅನುಕೂಲಗಳನ್ನು ಹೊಂದುವ ಸಲುವಾಗಿ ಎನ್ನುವ ಚಿತ್ರಣ ದೊರೆಯುತ್ತದೆ. ಎಲ್ಲಿ ಅಧಿಕಾರ ಹೆಪ್ಪುಗಟ್ಟಿರುತ್ತದೋ ಆ ಪ್ರದೇಶದಲ್ಲಿ ಅಭಿವೃದ್ಧಿಯೂ ಅಧಿಕವಾಗಿದ್ದು ಉಳಿದ ಪ್ರದೇಶಗಳಿಗೆ ಅದರ ಹರಿವು ವರ್ಗಾವಣೆ ಅಷ್ಟಾಗಿ ಕಂಡುಬರಲಾರದೆಂಬ ಸತ್ಯವನ್ನು ಇದರಿಂದ ಅರಿಯಬಹುದು. ಒಟ್ಟಾರೆ ವಿಕೇಂದ್ರೀಕರಣದ ಪ್ರಕ್ರಿಯೆ ಜಿಲ್ಲಾಕೇಂದ್ರದಲ್ಲಿಯೇ ಮಡುಗಟ್ಟಿಕೊಂಡಿದ್ದು ಉಳಿದ ತಾಲ್ಲೂಕುಗಳಿಗೆ ಹರಿಯದೇ ಇರುವುದು ನಮಗೆ ತಿಳಿಯುತ್ತದೆ.

### ೪.೫.೧. ಭದ್ರಾ ಮತ್ತು ತುಂಗಾ ಜಲಾಶಯ ಯೋಜನೆಗಳ ಹಿನ್ನೆಲೆ

ಭದ್ರಾ ಮತ್ತು ತುಂಗಾ ನದಿಗಳು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಘಟ್ಟದ ಶೃಂಗೇರಿಯ ಸಮೀಪದ 'ವರಾಹ' ಪರ್ವತದ 'ಗಂಗಾ ಮೂಲ' ಎಂಬ ಸ್ಥಳದಲ್ಲಿ ಹುಟ್ಟುತ್ತವೆ. ಭದ್ರಾ ನದಿಯು ಈಶಾನ್ಯಕ್ಕೆ ಹರಿದು ಚಿಕ್ಕಮಗಳೂರು ಜಿಲ್ಲೆಯನ್ನು ಹಾದು ನಂತರ ಶಿವಮೊಗ್ಗ ಜಿಲ್ಲೆಯ ಮೂಲಕ ಕೂಡ್ಲಿ ಎಂಬಲ್ಲಿ ಮತ್ತೆ ತುಂಗಾ ನದಿಯನ್ನು ಸೇರ್ಪಡೆಗೊಂಡು, ತುಂಗಭದ್ರಾ ನದಿಯಾಗಿ ಉತ್ತರಕ್ಕೆ ಹರಿದು ಹೊಸಪೇಟೆಯ ಹತ್ತಿರ ತುಂಗಾಭದ್ರ ಜಲಾಶಯವನ್ನು ಸೇರುತ್ತದೆ. ತುಂಗಾ ಮತ್ತು ಭದ್ರಾ ನದಿಗಳು ಕೃಷ್ಣನದಿ ಪಾತ್ರದ ವ್ಯಾಪ್ತಿಗೆ ಸೇರುತ್ತವೆ. ಅದೇ ರೀತಿಯಾಗಿ ತುಂಗಾ ನದಿಯು ಚಿಕ್ಕಮಗಳೂರು

ಜಿಲ್ಲೆಯಲ್ಲಿಂದ ಉತ್ತರಕ್ಕೆ ಹರಿದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಮೂಲಕ ಶಿವಮೊಗ್ಗ ತಾಲ್ಲೂಕನ್ನು ಹಾದು ಕೂಡ್ಲಿಯ ಎಂಬಲ್ಲಿ ಭದ್ರಾನದಿಯನ್ನು ಕೂಡಿಕೊಳ್ಳುತ್ತದೆ.

ಭದ್ರಾ ಜಲಾಶಯವನ್ನು ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿನ ಲಕ್ಕವಳ್ಳಿ ಎಂಬ ಸ್ಥಳದಲ್ಲಿ ನಿರ್ಮಿಸಲಾಗಿದೆ. ಈ ಸ್ಥಳವು ಶಿವಮೊಗ್ಗ ಜಿಲ್ಲೆಯ ಗಡಿಯಲ್ಲಿದೆ. ಆದುದರಿಂದ ಜಲಾಶಯದಿಂದ ಕೆಲಮಟ್ಟಿಗೆ ಭದ್ರಾ ಬಲದಂಡೆ ನಾಲೆಯಿಂದ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿಗೆ ನೀರಾವರಿಯಾಗುತ್ತದೆ. ಉಳಿದಂತೆ ಹೆಚ್ಚಿನ ಪ್ರಮಾಣದಲ್ಲಿ ಶಿವಮೊಗ್ಗ, ದಾವಣಗೆರೆ ಜಿಲ್ಲೆಗಳಿಗೆ ನೀರಾವರಿ ಕಲ್ಪಿಸುತ್ತದೆ.

ಭದ್ರಾ ನದಿಯು ಈಶಾನ್ಯ ಮತ್ತು ನೈರುತ್ಯ ಮಾರುತಗಳಿಂದ ಮಳೆಯನ್ನು ಪಡೆಯುತ್ತದೆ. ಈಶಾನ್ಯ ಮಾರುತಗಳಿಂದ ಶೇ. ೮೨ ರಷ್ಟು ಮಳೆಯನ್ನು ನದಿ ಪಾತ್ರ ಪಡೆಯುತ್ತದೆ. ಈ ಜಲಾಶಯವು ೧೯೬೮ ಚ.ಕಿ.ಮೀ.ನಷ್ಟು ಜಲಾನಯನ ಪ್ರದೇಶವನ್ನು ಹೊಂದಿದೆ. ಇದೊಂದು ವಿವಿಧುದ್ದೇಶ ಯೋಜನೆಯಾಗಿದ್ದು ೩೯.೨ ಮೆ.ವ್ಯಾ. ವಿದ್ಯುತ್‌ನ್ನು ಉತ್ಪಾದಿಸುವ ಕೇಂದ್ರವಾಗಿದೆ. ಅಣೆಕಟ್ಟಿನ ಒಟ್ಟು ಜಲಸಂಗ್ರಹ ಸಾಮರ್ಥ್ಯ ೭೧.೫ ಟಿ.ಎಂ.ಸಿ. ಆಗಿದ್ದು, ಬಳಕೆ ಮಾಡಬಹುದಾದ ನೀರಿನ ಪ್ರಮಾಣ ೬೩ ಟಿ.ಎಂ.ಸಿ. ಮೂಲ ಉದ್ದೇಶಿತ ನೀರಾವರಿ ಪ್ರದೇಶ ೨.೩೫ ಲಕ್ಷ ಎಕರೆ. ನೀರಾವರಿ ಸಾಧ್ಯವಾಗಿರುವ ಪ್ರದೇಶ ೨ ಲಕ್ಷ ಎಕರೆಗಿಂತ ಕಡಿಮೆ (ಪ್ರಜಾವಾಣಿ ೧೮-೦೮-೨೦೦೫ ಮತ್ತು ನೋಡಿ : ಅನುಬಂಧ-೧).

ಅಣೆಕಟ್ಟಿನ ನಿರ್ಮಾಣ ಕಾರ್ಯವು ೧೯೪೬ ರಲ್ಲಿ ಪ್ರಾರಂಭವಾಗಿ ೧೯೬೨ ರಲ್ಲಿ ಪೂರ್ಣಗೊಂಡಿತು. ಸರ್ಕಾರವು ತನ್ನ ಜಿ.ಓ.ನಂ.ಪಿ.ಡಬ್ಲ್ಯೂ. ೮೩೪-೨೬/ಐಆರ್‌ಎನ್ ೧-೫೪-೬೨ ದಿನಾಂಕ ೧೨ ಜೂನ್-೧೯೫೪ರ ಅಧಿಸೂಚನೆಯಂತೆ ೧೭.೭೫ ಕೋಟಿ ರೂಪಾಯಿ ವೆಚ್ಚದಲ್ಲಿ ಭದ್ರಾ ಜಲಾಶಯ ನಿರ್ಮಾಣಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಿತು. ಅಂತಿಮವಾಗಿ ಯೋಜನೆಯ ಒಟ್ಟು ವೆಚ್ಚ ೫೯ ಕೋಟಿಗಳಾಗಿತ್ತು. ಪ್ರಸ್ತುತ ವೆಚ್ಚ ದಿನಾಂಕ ೦೧.೦೪.೨೦೦೧ ರಂತೆ ೧೭೯.೭೭ ಕೋಟಿ ರೂ.ಗಳಾಗಿದೆ (ಪ್ರಾದೇಶಿಕ ಅಸಮತೋಲನ ನಿವಾರಣೆಯ ಉನ್ನತಾಧಿಕಾರ ಸಮಿತಿ ಅಂತಿಮ ವರದಿ-೨೦೦೨). ಈ ಯೋಜನೆಯಿಂದ ಒಟ್ಟು ೧,೦೫,೫೭೦ ಹೆಕ್ಟೇರ್ ಜಮೀನಿಗೆ ನೀರಾವರಿಯಾಗುತ್ತಿದೆ. ಈ ಜಲಾಶಯ ಯೋಜನೆಯಡಿಯಲ್ಲಿ, ಭದ್ರಾ ಬಲದಂಡೆನಾಲೆ, ಎಡದಂಡೆನಾಲೆ, ಆನವೇರಿ ಶಾಖಾನಾಲೆ, ಮಲೆಬೆನ್ನೂರು ಶಾಖಾನಾಲೆ, ದಾವಣಗೆರೆ ಶಾಖಾನಾಲೆ, ಹರಿಹರ ಶಾಖಾನಾಲೆ ಮತ್ತು ದೇವರ ಬೆಳಕರೆ ಪಿಕಪ್ ಯೋಜನಾ ನಾಲೆಗಳು ಬರುತ್ತವೆ.

## ಭದ್ರಾ ಜಲಾಶಯ ಯೋಜನೆಯಡಿಯಲ್ಲಿ ಬರುವ ನಾಲೆಗಳ ವಿವರ

ಕೋಷ್ಟಕ ೪.೭

| ಭದ್ರಾ ಅಣೆಕಟ್ಟು ಮತ್ತು ಪೂರಕ ನಾಲೆಗಳು | ಕ್ಯೂಸೆಕ್ಸ್ ನೀರು | ಉದ್ದ (ಕಿ.ಮೀ.ಗಳಲ್ಲಿ) | ವಿತರಣಾ ನಾಲೆಗಳ ಸಂಖ್ಯೆ | ನೀರಾವರಿ ಸಾಮರ್ಥ್ಯ (ಹೆಕ್ಟೇರ್‌ಗಳಲ್ಲಿ) |
|---|---|---|---|---|
| ಭದ್ರಾ ಬಲದಂಡೆ ನಾಲೆ | ೨,೬೫೦ | ೧೦೩.೦೦ | ೨೯ | ೧೭,೨೭೪ |
| ಭದ್ರಾ ಎಡದಂಡೆ ನಾಲೆ | ೩೮೦ | ೭೭.೦೦ | ೬೦ | ೮,೩೦೦ |
| ಅನವೇರಿ ಶಾಖಾನಾಲೆ | ೩೦೦ | ೬೭.೦೦ | ೪೦ | ೬,೩೧೯ |
| ಮಲೆಬೆನ್ನೂರು ಶಾಖಾನಾಲೆ | ೬೨೦ | ೪೮.೦೦ | ೪೨ | ೨೩,೭೭೪ |
| ದಾವಣಗೆರೆ ಶಾಖಾನಾಲೆ | ೧,೧೩೦ | ೯೦.೦೦ | ೪೩ | ೪೫,೬೨೩ |
| ದೇವರ ಬೆಳಕೆರೆ ಪಿಕಪ್ ಪ್ರಾಜೆಕ್ಟ್ | ಬಸಿನೀರು | ೫೯.೨೦ | ೬೮ | ೪,೨೮೦ |
| ಒಟ್ಟು | | ೪೪೪.೨೦ | ೨೮೨ | ೧,೦೫,೫೭೦ |

ಮೂಲ : ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ೨೦೦೪-೦೫ನೆಯ ಸಾಲಿನ ವಾರ್ಷಿಕ ವರದಿ, ಶಿವಮೊಗ್ಗ

ಮೇಲಿನ ಕೋಷ್ಟಕದಲ್ಲಿ ಭದ್ರಾ ಜಲಾಶಯ ಯೋಜನೆಯ ವಿವಿಧ ನಾಲೆಗಳಿಂದ ಆಗುವ ನೀರಾವರಿ ಸಾಮರ್ಥ್ಯ, ನೀರಿನ ಪ್ರಮಾಣ, ಕಾಲುವೆಗಳ ಉದ್ದ ಹಾಗೂ ವಿತರಣಾ ನಾಲೆಗಳ ವಿವರಗಳನ್ನು ನೀಡಲಾಗಿದೆ. ದಾವಣಗೆರೆ ಶಾಖಾನಾಲೆ ಮತ್ತು ಮಲೆಬೆನ್ನೂರು ಶಾಖಾ ನೆಲೆಗಳು ಹೆಚ್ಚಿನ ಸಾಗುವಳಿ ಭೂಮಿಗೆ ನೀರನ್ನು ಒದಗಿಸುತ್ತವೆ. ಆದರೆ ಈ ಕಾಲುವೆಗಳಲ್ಲಿ ಹರಿಯುವ ನೀರಿನ ಪ್ರಮಾಣ ಕಡಿಮೆ. ಇದಕ್ಕೆ ಮುಖ್ಯ ಕಾರಣ ಈ ಪ್ರದೇಶದಲ್ಲಿ ಅರೆ ನೀರಾವರಿ ಬೆಳೆಗಳನ್ನು ಹೆಚ್ಚಾಗಿ ಬೆಳೆಯಲಾಗುತ್ತದೆ. ಭದ್ರಾ ಬಲದಂಡೆ ನಾಲೆಯಲ್ಲಿ ಇತರೆ ನಾಲೆಗಳಿಗಿಂತ ಹೆಚ್ಚಿನ ನೀರು ಹರಿಯುತ್ತದೆ. ಆದರೆ ನೀರಾವರಿಗೆ ಒಳಪಟ್ಟ ಪ್ರದೇಶದಲ್ಲಿ ಮೂರನೇ ಸ್ಥಾನದಲ್ಲಿದೆ. ಅಂದರೆ ಈ ಪ್ರದೇಶದಲ್ಲಿ ಭತ್ತ, ಕಬ್ಬು ಮೊದಲಾದ ಅಧಿಕ ನೀರು ಬೇಡುವ ಬೆಳೆಗಳನ್ನು ಬೆಳೆಯಲಾಗುತ್ತದೆ.

ಭದ್ರಾ ಜಲಾಶಯ ಯೋಜನೆ : ಜಿಲ್ಲಾ ಮತ್ತು ತಾಲೂಕುವಾರು ನೀರಾವರಿ ಪ್ರದೇಶ

ಕೋಷ್ಟಕ ೪.೮

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ನೀರಾವರಿ ಸಾಮರ್ಥ್ಯ ಹೆಕ್ಟೇರುಗಳಲ್ಲಿ |
|---|---|---|---|
| ೦೧. | ಶಿವಮೊಗ್ಗ | ಭದ್ರಾವತಿ | ೧೬೨೬೪ |
| | | ಶಿವಮೊಗ್ಗ | ೪೭೪೪ |
| | | ಒಟ್ಟು | ೨೧೦೦೮ |
| ೦೨. | ಚಿಕ್ಕಮಗಳೂರು | ತರೀಕೆರೆ | ೫೦೬೭ |
| ೦೩. | ದಾವಣಗೆರೆ | ಚನ್ನಗಿರಿ | ೧೧,೭೮೩ |
| | | ಹೊನ್ನಾಳಿ | ೮,೮೧೨ |
| | | ಹರಿಹರ | ೨೭,೩೩೮ |
| | | ದಾವಣಗೆರೆ | ೨೭,೮೩೮ |
| | | ಹರಪನಹಳ್ಳಿ | ೩,೭೨೪ |
| | | ಒಟ್ಟು | ೭೯,೪೯೫ |
| | ಒಟ್ಟು ಸಮಗ್ರ | | ೧,೦೫,೫೭೦ |

ಮೂಲ : ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ೨೦೦೪-೦೫ನೆಯ ಸಾಲಿನ ವಾರ್ಷಿಕ ವರದಿ, ಶಿವಮೊಗ್ಗ

ಕೋಷ್ಟಕ ೪.೮ ರಲ್ಲಿ ಭದ್ರಾ ಜಲಾಶಯ ಯೋಜನೆಯಿಂದ ವಿವಿಧ ತಾಲೂಕುಗಳಿಗೆ ಆಗಿರುವ ನೀರಾವರಿ ಪ್ರದೇಶವನ್ನು ಸೂಚಿಸಲಾಗಿದೆ. ಜಿಲ್ಲಾವಾರು ನೀರಾವರಿ ಪ್ರದೇಶವನ್ನು ಗಮನಿಸಿದರೆ ದಾವಣಗೆರೆ ಜಿಲ್ಲೆ ಅತಿ ಹೆಚ್ಚಿನ ನೀರಾವರಿ ಪ್ರದೇಶವನ್ನು ಹೊಂದಿದೆ. ಈ ಜಿಲ್ಲೆಯ ೫ ತಾಲ್ಲೂಕುಗಳು ನೀರಾವರಿಗೆ ಒಳಪಟ್ಟಿವೆ. ದಾವಣಗೆರೆ ತಾಲೂಕು ಗರಿಷ್ಠ ನೀರಾವರಿ ಸೌಲಭ್ಯವನ್ನು ಪಡೆದಿದ್ದು ನಂತರ ಸ್ಥಾನ ಹರಿಹರ ತಾಲ್ಲೂಕಿಗೆ ಸಿಕ್ಕಿದೆ. ಮೂರನೆಯ ಭಾಗದಲ್ಲಿ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನದ್ದಾಗಿದೆ. ತರೀಕೆರೆ, ಶಿವಮೊಗ್ಗ ಮತ್ತು ಹರಪನಹಳ್ಳಿ ತಾಲ್ಲೂಕುಗಳು ಕ್ರಮವಾಗಿ ಕಡಿಮೆ ನೀರಾವರಿ ಪ್ರದೇಶವನ್ನು ಪಡೆದಿವೆ.

**ಒಟ್ಟು ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ವ್ಯಾಪ್ತಿಗೆ ಒಳಪಟ್ಟ ಅಧಿಸೂಚಿತ ಪ್ರದೇಶ ಮತ್ತು ಬೆಳೆಯ ಮಾದರಿ ಶೇಕಡಾವಾರು ಪ್ರಮಾಣ ೨೦೦೪-೦೫**

**ಕೋಷ್ಟಕ ೪.೯**

| ಭದ್ರಾ ಜಲಾಶಯ ಯೋಜನೆ | | ಮುಂಗಾರು | ಶೇ. | ಹಿಂಗಾರು | ಒಟ್ಟು |
|---|---|---|---|---|---|
| ಬೆಳೆಮಾದರಿ | ಕಬ್ಬು | ೧೨೦೦೦ | ೧೧.೩೬ | ..... | |
| | ಭತ್ತ | ೪೦೦೦೦ | ೩೭.೮೮ | ..... | |
| | ತೋಟಗಾರಿಕೆ | ೨೪೩೬ | ೨.೩೦ | ೨೪೩೬ | |
| | ಅರೆನೀರಾವರಿ | ೫೧೧೩೪ | ೪೮.೪೩ | ..... | |
| | ಒಟ್ಟು | ೧೦೫೫೭೦ | ..... | ೨೪೩೬ | ೧೦೮೦೦೬ |
| ತುಂಗಾ ಜಲಾಶಯ ಯೋಜನೆ | | | | | |
| ಬೆಳೆಮಾದರಿ | ಕಬ್ಬು | ೫೩೫ | ೬.೧೪ | ..... | |
| | ಭತ್ತ | ೭೭೮೨ | ೮೯.೪೩ | ..... | |
| | ತೋಟಗಾರಿಕೆ | ೩೮೪ | ೪.೪೨ | ೩೮೪ | |
| | ಅರೆನೀರಾವರಿ | ..... | ..... | ..... | |
| | ಒಟ್ಟು | ೮೭೦೧ | ..... | ೩೮೪ | ೯೦೮೫ |
| ಭದ್ರಾ ಮತ್ತು ತುಂಗಾ ಜಲಾಶಯ ಯೋಜನೆಗಳಲ್ಲಿ ಬೆಳೆ ಮಾದರಿ | | | | | |
| | ಕಬ್ಬು | ೧೨೫೩೫ | ೧೦.೯೬ | ..... | |
| | ಭತ್ತ | ೪೭೭೮೨ | ೪೧.೮೧ | ..... | |
| | ತೋಟಗಾರಿಕೆ | ೨೮೨೦ | ೨.೪೬ | ೨೮೨೦ | |
| | ಅರೆನೀರಾವರಿ | ೫೧೧೩೪ | ೪೪.೭೪ | ..... | |
| | ಒಟ್ಟು | ೧೧೪೨೭೧ | ..... | ೨೮೨೦ | ೧೧೭೦೯೧ |

ಮೂಲ : ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ೨೦೦೪-೦೫ನೆಯ ಸಾಲಿನ ವಾರ್ಷಿಕ ವರದಿ, ಶಿವಮೊಗ್ಗ

ಮೇಲಿನ ಕೋಷ್ಟಕದಲ್ಲಿ ಭದ್ರಾ ಮತ್ತು ತುಂಗಾ ಜಲಾಶಯ ಯೋಜನೆಗಳ ಬೆಳೆ ಮಾದರಿಯನ್ನು ನೀಡಲಾಗಿದೆ. ತುಂಗಾ ಯೋಜನೆಯಲ್ಲಿ ಭತ್ತ ಪ್ರಧಾನ ಬೆಳೆಯಾಗಿದೆ. ನಂತರದ ಸ್ಥಾನದಲ್ಲಿ ಕಬ್ಬು ಮತ್ತು ತೋಟಗಾರಿಕೆ ಬೆಳೆಗಳು ಬರುತ್ತವೆ. ಆದರೆ ಅರೆನೀರಾವರಿ ಬೆಳೆಗಳಿಗೆ ಅವಕಾಶವಿಲ್ಲ. ಇದಕ್ಕೆ

ವ್ಯತಿರಿಕ್ತವಾಗಿ ಭದ್ರಾ ಯೋಜನೆಯಲ್ಲಿ ಅರೆನೀರಾವರಿ ಬೆಳೆಗಳು ಹೆಚ್ಚಿನ ಪ್ರದೇಶವನ್ನು ಹೊಂದಿವೆ. ನಂತರದ ಸ್ಥಾನದಲ್ಲಿ ಭತ್ತ ಮತ್ತು ಕಬ್ಬು ಬೆಳೆಗಳು ಬರುತ್ತವೆ. ತೋಟಗಾರಿಕೆ ಬೆಳೆಗಳನ್ನು ಕಡಿಮೆ ಪ್ರದೇಶದಲ್ಲಿ ಬೆಳೆಯುತ್ತಿರುವುದು ಕಂಡು ಬರುತ್ತದೆ.

ಕೃಷ್ಣಾ ಮೇಲ್ದಂಡೆ ಯೋಜನೆಯ ವ್ಯಾಪ್ತಿಯ ಶಹಾಪುರ ಜಿಲ್ಲೆಯ ಭೀಮರಾಯನಗುಡಿಯಲ್ಲಿರುವ ಕೃಷಿ ವಿಶ್ವವಿದ್ಯಾಲಯದ ವಿಜ್ಞಾನಿಗಳು ಉಪಗ್ರಹ ಆಧಾರಿತ ವ್ಯವಸ್ಥೆಯಿಂದ ಸಂಗ್ರಹಿಸಿದ ಮಾಹಿತಿ. ಮಣ್ಣಿನ ಮಾದರಿ ಪರೀಕ್ಷೆ ಹಾಗೂ ರಾಸಾಯನಿಕ ವಿಶ್ಲೇಷಣೆಯಿಂದ ಕಂಡುಕೊಂಡ ಸಂಗತಿ ಎಂದರೆ, ಜಿಲ್ಲೆಯ ನೀರಾವರಿಗೆ ಒಳಪಟ್ಟ ಪ್ರದೇಶದಲ್ಲಿ ಪ್ರತಿವರ್ಷ ಪ್ರತಿ ಹೆಕ್ಟೇರ್ ಜಮೀನನ್ನು ೯ ಟನ್ ಪ್ರಮಾಣದಷ್ಟು ಲವಣಾಂಶ ಸೇರ್ಪಡೆಯಾಗುತ್ತಿದೆ. ಇದಕ್ಕೆ ಕಾರಣ,

೧. ಅವೈಜ್ಞಾನಿಕ ನೀರಿನ ಬಳಕೆ.

೨. ಅಗತ್ಯಕ್ಕಿಂತ ಅಧಿಕ ರಾಸಾಯನಿಕ ಗೊಬ್ಬರ ಬಳಕೆ.

೩. ಬೆಳೆಯ ಮಾದರಿಯ ಉಲ್ಲಂಘನೆ.

೪. ಅಧಿಕ ನೀರು ಬೇಡುವ ಬೆಳೆಗಳನ್ನು ಬೆಳೆಯುತ್ತಿರುವುದು.

೫. ಭತ್ತವನ್ನು ಬೆಳೆಯಬೇಕೆಂಬ ಹಠಮಾರಿತನ.

೬. ಕಪ್ಪು ಮಣ್ಣು ಅರೆ ನೀರಾವರಿ ಬೆಳೆಗಳಿಗೆ ಸೂಕ್ತವೆಂದು ತಿಳಿದಿದ್ದರೂ ಭತ್ತವನ್ನು ಬೆಳೆಯುವುದು.

ಈ ಬಗ್ಗೆ ಸರ್ಕಾರ ಮತ್ತು ರೈತ ಸಮುದಾಯ ಮರುಚಿಂತನೆ ಮಾಡುವ ಅಗತ್ಯವನ್ನು, ನೀರು ಬಳಕೆದಾರರ ಸಹಕಾರ ಸಂಘಗಳ ಮೂಲಕ ನೀರಿನ ಬಳಕೆಯನ್ನು ನಿಯಂತ್ರಣ ಮಾಡಬೇಕೆಂದು ವರದಿ ತಿಳಿಸುತ್ತದೆ (ಹತ್ತನೇ ಪಂಚವಾರ್ಷಿಕ ಯೋಜನೆ ಕೇಂದ್ರ ಧನಸಹಾಯದ ಪ್ರಸ್ತಾವನೆ ವರದಿ, ಭದ್ರಾ ಕಾಡಾ ೨೦೦೫).

**೪.೫.೨. ತುಂಗಾ ಜಲಾಶಯ ಯೋಜನೆಯ ಅಚ್ಚುಕಟ್ಟು ಪ್ರದೇಶದ ವಿವರ**

ಈ ಅಣೆಕಟ್ಟನ್ನು ಶಿವಮೊಗ್ಗ ನಗರದಿಂದ ನೈರುತ್ಯಕ್ಕೆ ೧೨ ಕಿ.ಮೀ. ದೂರದಲ್ಲಿರುವ ಗಾಜನೂರು ಬಳಿ ನಿರ್ಮಿಸಲಾಗಿದೆ. ಇದರ ನಿರ್ಮಾಣ ಕಾರ್ಯ ೧೯೪೨ ರಲ್ಲಿ ಆರಂಭವಾಗಿ ೧೯೫೫ ರಲ್ಲಿ ಪೂರ್ಣಗೊಂಡಿತು. ೧೯೫೬ ರಲ್ಲಿ ಪ್ರಥಮ ಬಾರಿಗೆ ಜಲಾಶಯದಿಂದ ನೀರನ್ನು ಹರಿಸಲಾಯಿತು. ಕೃಷ್ಣಾ ಜಲವಿವಾದ ನ್ಯಾಯಾಧೀಕರಣದ ಪ್ರಕಾರ ತುಂಗಾ ನದಿಯಿಂದ ೧೧.೫೦ ಟಿ.ಎಂ.ಸಿ.ಯನ್ನು ನೀರಾವರಿಗಾಗಿ ಬಳಕೆ ಮಾಡಿಕೊಳ್ಳಬಹುದಾಗಿದೆ. ತುಂಗಾ ಜಲಾಶಯವು ೨,೨೪೦ ಚ.ಕಿ.ಮೀ.ಗಳಷ್ಟು ಜಲಾನಯನ ಪ್ರದೇಶವನ್ನು ಹೊಂದಿದೆ. ಅಣೆಕಟ್ಟು ನಿರ್ಮಾಣಕ್ಕೆ ಒಟ್ಟು ೩ ಕೋಟಿ ೩೧ ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ (ಪ್ರಾ.ಅ.ನಿ.ಉ.ಸಮಿತಿ ಅಂತಿಮ ವರದಿ-೨೦೦೨ ಮತ್ತು ನೋಡಿ : ಅನುಬಂಧ-೨).

## ತುಂಗಾ ಯೋಜನೆಯ ವ್ಯಾಪ್ತಿಯಲ್ಲಿ ಬರುವ ಕಾಲುವೆಗಳ ವಿವರ

**ಕೋಷ್ಟಕ ೪.೧೦**

| ಕಾಲುವೆ ಹೆಸರು | ಉದ್ದ ಕಿ.ಮೀ. | ಕಾಲುವೆಯಲ್ಲಿ ಬಿಡುವ ನೀರಿನ ಪ್ರಮಾಣ (ಕ್ಯೂಸೆಕ್ಸ್) | ಅಚ್ಚುಕಟ್ಟು ಪ್ರದೇಶ (ಹೆಕ್ಟೇರ್) | ಉಪಕಾಲುವೆಗಳು | |
|---|---|---|---|---|---|
| | | | | ಸಂಖ್ಯೆ | ಉದ್ದಕಿ.ಮೀ. |
| ತುಂಗಾ ಬಲದಂಡೆನಾಲೆ | ೫೨.೬ | ೧೩೫ | ೨೦೨೬ | ೩೮ | ೪೭.೭೧ |
| ತುಂಗಾ ಎಡದಂಡೆನಾಲೆ | ೧೦೦ | ೫೪೦ | ೬೬೭೮ | ೬೨ | ೧೮೯.೯೦ |
| ಒಟ್ಟು | ೧೫೨.೬೦ | ೬೭೫ | ೮೭೦೪ | ೧೦೦ | ೨೩೭.೬೧ |

ಮೂಲ : ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ೨೦೦೪-೦೫ನೆಯ ಸಾಲಿನ ವಾರ್ಷಿಕ ವರದಿ, ಶಿವಮೊಗ್ಗ

ಈ ಯೋಜನೆಯ ಒಟ್ಟು ಅಚ್ಚುಕಟ್ಟು ಪ್ರದೇಶ ೧೯,೦೭೦ ಹೆ. ಸಾಗುವಳಿ ಮಾಡಬಹುದಾದ ಅಚ್ಚುಕಟ್ಟು ಪ್ರದೇಶ ೧೪,೮೫೦ ಹೆ. ಮಂಜೂರಾಗಿರುವ ಅಚ್ಚುಕಟ್ಟು ಪ್ರದೇಶ ೧೧,೦೨೬ ಹೆ. ಆಗಿತ್ತು. ಆದರೆ ಅಂದುಕೊಂಡಂತೆ ಸಾಗುವಳಿ ಮಾಡಬಹುದಾದ ಗರಿಷ್ಠ ಅಚ್ಚುಕಟ್ಟು ಪ್ರದೇಶಕ್ಕೆ ನೀರಾವರಿ ಒದಗಿಸಲು ಈ ಯೋಜನೆಗೆ ಸಾಧ್ಯವಾಗಲಿಲ್ಲ. ಏಕೆಂದರೆ ೧೯೪೬ ರಲ್ಲಿ ಕರ್ನಾಟಕ ಸರ್ಕಾರ ತುಂಗಾ ಅಣೆಕಟ್ಟು ಯೋಜನಾ ಸಮಿತಿಯು ಅಚ್ಚುಕಟ್ಟು ಪ್ರದೇಶವನ್ನು ೨,೩೨೨ ಹೆ. ಕಡಿಮೆ ಮಾಡಿ ಪರಿಷ್ಕರಣೆ ಮಾಡಿತು. ಶಿವಮೊಗ್ಗ ನಗರ ಮತ್ತು ಕೆಲವು ಹಳ್ಳಿಗಳಲ್ಲಿ ಮಲೇರಿಯಾವನ್ನು ತಡೆಗಟ್ಟಲು ಆ ಸುತ್ತಮುತ್ತಲಿನ ಪ್ರದೇಶವನ್ನು ಒಣಭೂಮಿಯನ್ನಾಗಿಡಬೇಕೆಂಬ ಕಾರಣದಿಂದ ಈ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ಆ ಪ್ರಕಾರ ೮,೭೦೪ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿಯನ್ನು ಕಲ್ಪಿಸಲಾಯಿತು. ಈ ಯೋಜನೆಯಲ್ಲಿ ಶಿವಮೊಗ್ಗ ತಾಲ್ಲೂಕು ಮತ್ತು ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕುಗಳು ನೀರಾವರಿ ಪಡೆಯುತ್ತವೆ.

## ಭದ್ರಾ ಮತ್ತು ತುಂಗಾ ಯೋಜನೆಗಳಿಂದ ಶಿವಮೊಗ್ಗ ಜಿಲ್ಲೆಗೆ ನೀರಾವರಿಯಾಗುವ ಪ್ರದೇಶ

**ಕೋಷ್ಟಕ ೪.೧೧**

| ತಾಲ್ಲೂಕು | ಭದ್ರಾ ಜಲಾಶಯದಿಂದ | ತುಂಗಾ ಜಲಾಶಯದಿಂದ | ಗೋಂದಿ ಅಣೆಕಟ್ಟೆಯಿಂದ | ಒಟ್ಟು | ಶೇಕಡ |
|---|---|---|---|---|---|
| ಶಿವಮೊಗ್ಗ | ೪೪೨೩ | ೫೪೨೭ | ...... | ೯೮೫೦ | ೩೧.೭೮ |
| ಭದ್ರಾವತಿ | ೧೬೬೭೫ | ...... | ೪೪೬೬ | ೨೧೧೪೧ | ೬೮.೨೧ |
| ಒಟ್ಟು | ೨೧೦೯೮ | ೫೪೨೭ | ೪೪೬೬ | ೩೦೯೯೧ | ೧೦೦.೦೦ |

ಮೂಲ : ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ೨೦೦೪-೦೫ನೆಯ ಸಾಲಿನ ವಾರ್ಷಿಕ ವರದಿ, ಶಿವಮೊಗ್ಗ

ಕೋಷ್ಟಕ ೪.೧೧ ಗಮನಿಸಿದರೆ ಭದ್ರಾವತಿ ತಾಲೂಕು ಹೆಚ್ಚಿನ ನೀರಾವರಿ ಪ್ರದೇಶವನ್ನು ಹೊಂದಿದೆ. ಶಿವಮೊಗ್ಗ ತಾಲೂಕಿಗೆ ನೀರಾವರಿಯಾಗಿರುವ ಪ್ರದೇಶ ಶೇಕಡ ೨೫ಕ್ಕಿಂತ ಕಡಿಮೆ. ಭದ್ರಾವತಿ ತಾಲೂಕಿಗೆ ತುಂಗಾ ಜಲಾಶಯದಿಂದ ನೀರಾವರಿಯಾಗುವುದಿಲ್ಲ. ಅದೇ ರೀತಿ ಶಿವಮೊಗ್ಗ ತಾಲೂಕಿಗೆ ಗೋಂದಿ ಜಲಾಶಯದಿಂದ ನೀರು ದೊರೆಯುತ್ತಿಲ್ಲ. ಒಟ್ಟಾರೆ ಅಚ್ಚುಕಟ್ಟು ಪ್ರದೇಶದಲ್ಲಿ ಭದ್ರಾವತಿ ತಾಲೂಕು ಗರಿಷ್ಟ ನೀರಾವರಿ ಸೌಲಭ್ಯವನ್ನು ಪಡೆದುಕೊಂಡಿದೆ.

## ೪.೬. ಜಿಲ್ಲೆಯ ಭವಿಷ್ಯತ್ತಿನ ನೀರಾವರಿ ಯೋಜನೆಗಳು

೧. **ತುಂಗಾ ಮೇಲ್ದಂಡೆ ಯೋಜನೆ :** ಈ ಯೋಜನೆಯಿಂದ ಶಿವಮೊಗ್ಗ, ದಾವಣಗೆರೆ ಹಾಗೂ ಹಾವೇರಿ ಜಿಲ್ಲೆಗಳಿಗೆ ೮೦,೪೯೪ ಹೆ. ಪ್ರದೇಶಕ್ಕೆ ೧೨.೨೪ ಟಿ.ಎಂ.ಸಿ. ನೀರನ್ನು ಬಳಕೆ ಮಾಡಲು ಉದ್ದೇಶಿಸಲಾಗಿದೆ. ಇದು ಕರ್ನಾಟಕ ನೀರಾವರಿ ನಿಗಮ ನಿಯಮಿತ ಬೆಂಗಳೂರು ವ್ಯಾಪ್ತಿಗೆ ಒಳಪಟ್ಟಿದ್ದು ಪೂರ್ಣಗೊಳ್ಳುವ ಹಂತವನ್ನು ತಲುಪಿದೆ. (ಜಲ ಸಂಪನ್ಮೂಲ ಇಲಾಖೆಯ ವಾರ್ಷಿಕ ವರದಿ ೨೦೦೪-೦೫) ಮೂಲ ಯೋಜನೆಯಲ್ಲಿ ೯೪೭೦೦ ಹೆಕ್ಟೇರು ಪ್ರದೇಶಕ್ಕೆ ನೀರಾವರಿ ಒದಗಿಸುವ ಗುರಿಯನ್ನು ಹೊಂದಿತ್ತು. ಈಗ ಅದರ ಪ್ರಮಾಣವನ್ನು ೮೦,೪೯೪ ಹೆಕ್ಟೇರ್‌ಗೆ ಸೀಮಿತಗೊಳಿಸಿಕೊಂಡಿದೆ. ಏಕೆಂದರೆ ಮುಳುಗಡೆಯ ಪ್ರದೇಶ ಹೆಚ್ಚಾಗುವುದನ್ನು ತಡೆಗಟ್ಟಲು ಮತ್ತು ಕೆಲವು ತಾಂತ್ರಿಕ ಕಾರಣಗಳಿಂದ ಈ ಕ್ರಮ ಕೈಗೊಳ್ಳಲಾಗಿದೆ. ಈ ಯೋಜನೆ ಪೂರ್ಣ ಅನುಷ್ಠಾನಗೊಂಡಾಗ ಜಿಲ್ಲೆಯಲ್ಲಿ ಮತ್ತಷ್ಟು ಪ್ರದೇಶ ನೀರಾವರಿಗೆ ಸೇರ್ಪಡೆಗೊಳ್ಳುತ್ತದೆ.

೨. **ಭದ್ರಾ ಮೇಲ್ದಂಡೆ ಯೋಜನೆ :** ಬಚಾವತ್ ಎ ಸ್ಕೀಮಿನ ಪ್ರಕಾರ ಭದ್ರಾ ಮೇಲ್ದಂಡೆ ಯೋಜನೆಯ ಮೂಲಕ ರಾಜ್ಯ ಸರ್ಕಾರವು ೪೨ ಟಿ.ಎಂ.ಸಿ. ನೀರನ್ನು ಬಳಕೆ ಮಾಡಿಕೊಳ್ಳಲು ಅವಕಾಶವಿದೆ. ಈ ಯೋಜನೆಯ ಸಾಧಕ-ಬಾಧಕಗಳನ್ನು ಪರಿಶೀಲಿಸುವ ಸಲುವಾಗಿ ೨೦೦೦ ರಲ್ಲಿ ನೀರಾವರಿ ತಜ್ಞರಾದ ಶ್ರೀ ಜಿ.ಎಸ್. ಪರಮಶಿವಯ್ಯ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು. ಆ ಸಮಿತಿಯು ೧೦.೯.೨೦೦೪ ರಂದು ತನ್ನ ಅಂತಿಮ ವರದಿಯನ್ನು ಸಲ್ಲಿಸಿತು. ಆ ವರದಿಯ ಪ್ರಕಾರ ಯಾವುದೇ ಹೆಚ್ಚುವರಿ ವಿದ್ಯುತ್ ಬಳಕೆ ಮಾಡದೆ ಕೇವಲ ಗುರುತ್ವ ಶಕ್ತಿಯಿಂದಲೆ ೯೯ ಟಿ.ಎಂ.ಸಿ. ನೀರನ್ನು ಬಳಕೆ ಮಾಡಿಕೊಳ್ಳಬಹುದೆಂದು ತಿಳಿಸಿದೆ. ಹಾಗಾಗಿ ಈ ಯೋಜನೆಯಿಂದ ಮುಖ್ಯವಾಗಿ ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ, ತುಮಕೂರು ಮತ್ತು ಕೋಲಾರ ಜಿಲ್ಲೆಗಳಿಗೆ ನೀರಾವರಿ ಕಲ್ಪಿಸಬಹುದೆಂದು ಪ್ರಸ್ತಾಪವನ್ನು ಮಂಡಿಸಿತು. ನಂತರ ಕೆ.ಸಿ. ರೆಡ್ಡಿಯವರ ನೇತೃತ್ವದಲ್ಲಿ ಮತ್ತೊಂದು ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯು ಈಗಾಗಲೆ ತನ್ನ ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. ಆ ವರದಿಯ ಪ್ರಕಾರ ಭದ್ರಾ ಮೇಲ್ದಂಡೆ ಯೋಜನೆಯಿಂದ ೪೦.೫೦ ಟಿ.ಎಂ.ಸಿ ನೀರನ್ನು

ಬಳಕೆ ಮಾಡಲಾಗುವುದು. ಮಲೆನಾಡಿನ ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಯ ಜನರು ಈ ಯೋಜನೆಯಿಂದ ಪರಿಸರಕ್ಕೆ ಹಾನಿಯಾಗುತ್ತದೆ ಎಂದು ಅನುಷ್ಠಾನಕ್ಕೆ ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಮತ್ತೊಂದು ಕಡೆ ಚಿತ್ರದುರ್ಗ, ತುಮಕೂರು, ದಾವಣಗೆರೆ ಮತ್ತು ಕೋಲಾರ ಜಿಲ್ಲೆಗಳ ಜನತೆ ಯೋಜನೆಯನ್ನು ಅನುಷ್ಠಾನಕ್ಕೆ ತರುವಂತೆ ಒತ್ತಾಯಿಸುತ್ತಿದ್ದಾರೆ.

ಅಚ್ಚುಕಟ್ಟು ಪ್ರದೇಶದ ಆಚರಣೆ ಮತ್ತು ವ್ಯವಸ್ಥಾಪನೆಯು ಮುಖ್ಯ ಇಂಜಿನಿಯರ್ ತುಂಗಾ ಮೇಲ್ದಂಡೆ ವಲಯ ಶಿವಮೊಗ್ಗ ಇವರ ವಶದಲ್ಲಿದೆ. ವಿಭಾಗ ಮತ್ತು ಉಪವಿಭಾಗಗಳು ಬಿ.ಆರ್. ಪ್ರಾಜೆಕ್ಟ್‌ನ ವೃತ್ತ ಕಛೇರಿಯ ಸಹಯೋಗದಲ್ಲಿ ನಡೆಯುತ್ತವೆ. ನೀರಾವರಿ ನಿರ್ವಹಣೆಯನ್ನು ಭದ್ರಾವತಿಯಲ್ಲಿರುವ ಕಾರ್ಯಪಾಲಕ ಇಂಜಿನಿಯರ್ ವಿಭಾಗ ನೋಡಿಕೊಳ್ಳುತ್ತದೆ. ಮುಖ್ಯ ತೂಬುಗಳ ಕಾರ್ಯಾಚರಣೆಯು ನಂ.೪ ತುಂಗಾ ಅಣೆಕಟ್ಟು ಉಪವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನೀಯರ್ ವಶದಲ್ಲಿದೆ. ಇದು ೪ ಸಹಾಯಕ ಇಂಜಿನೀಯರ್‌ಗಳು ಮತ್ತು ೩ ಕಿರಿಯ ಇಂಜಿನೀಯರ್ ಹಾಗು ಕ್ಷೇತ್ರ ಸಿಬ್ಬಂದಿಯನ್ನು ಹೊಂದಿದೆ. ಹೊರ ಕವಾಟುಗಳ ಆಚರಣೆಯು ಕ್ಷೇತ್ರ ಅಧಿಕಾರಿಗಳ ನಿರ್ದೇಶನದಂತೆ ಮುಂದುವರಿಯುತ್ತಲಿದೆ. ನೀರಿನ ವಿತರಣಾ ಯೋಜನೆಯು ಕೃಷಿ ಇಲಾಖೆಯ ಸಿಬ್ಬಂದಿಯ ಸಹಯೋಗದಿಂದ ಸಿದ್ಧಗೊಳ್ಳುತ್ತದೆ.

### ೪.೭. ಶಿವಮೊಗ್ಗ ಜಿಲ್ಲೆಯ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿ

ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೩.೧೦ರಷ್ಟು ಜನರು ಶಿವಮೊಗ್ಗ ಜಿಲ್ಲೆಯಲ್ಲಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆ ೧೬.೪೨ ಲಕ್ಷ. ಗ್ರಾಮೀಣ ಪ್ರದೇಶದಲ್ಲಿ ಶೇ. ೭೫ ಕ್ಕಿಂತ ಹೆಚ್ಚಿನ ಜನರು ವಾಸವಾಗಿದ್ದಾರೆ. ಜಿಲ್ಲೆಯಲ್ಲಿ ಹಿಂದು, ಮುಸ್ಲಿಂ, ಕ್ರಿಶ್ಚಿಯನ್, ಜೈನ ಮೊದಲಾದ ಧರ್ಮಿಯರು ನೆಲೆಸಿದ್ದಾರೆ. ಶೇ. ೮೫ ರಷ್ಟು ಜನರು ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದಾರೆ. ಉಳಿದಂತೆ ಶೇ. ೧೫ ರಷ್ಟು ಜನತೆ ಮುಸ್ಲಿಂ, ಕ್ರಿಶ್ಚಿಯನ್, ಜೈನ ಮೊದಲಾದ ಧರ್ಮಗಳಿಗೆ ಒಳಪಟ್ಟವರಾಗಿದ್ದಾರೆ.

## ಶಿವಮೊಗ್ಗ ಜಿಲ್ಲೆಯ ಜನಸಂಖ್ಯಾ ವಿಶಿಷ್ಟತೆಗಳು

**ಕೋಷ್ಟಕ ೪.೧೨**

| ಕ್ರ.ಸಂ. | ವಿವರ | ಶಿವಮೊಗ್ಗ ಜಿಲ್ಲೆ | ಕರ್ನಾಟಕ |
|---|---|---|---|
| ೦೧. | ಭೌಗೋಳಿಕ ಪ್ರದೇಶ (ಚ.ಕಿ.ಮೀ.) | ೮,೪೭೭ | ೧,೯೧,೭೯೧ |
| ೦೨. | ಒಟ್ಟು ಜನಸಂಖ್ಯೆ (೨೦೦೧) | ೧೬,೪೨,೫೪೫ | ೫,೨೮,೫೦,೫೬೨ |
| ೦೩. | ಜನಸಂಖ್ಯೆಯ ದಶಕವಾರು ಬೆಳವಣಿಗೆ (೧೯೯೧-೨೦೦೧) | ೧೩.೧೦ | ೧೭.೨೫ |
| ೦೪. | ಪರಿಶಿಷ್ಟ ಜಾತಿಯವರ ಜನಸಂಖ್ಯೆ | ೨,೬೯,೫೧೯ (೧೬.೪೦) | ೮೫,೬೩,೯೩೦ (೧೬.೨೦) |
| ೦೫. | ಪರಿಶಿಷ್ಟ ಪಂಗಡದವರ ಜನಸಂಖ್ಯೆ | ೫೫,೯೯೭ (೩.೪೦) | ೩೪,೬೩,೯೮೬ (೬.೫೫) |
| ೦೬. | ಜನಸಾಂದ್ರತೆ | ೧೯೩ | ೨೭೫ |
| ೦೭. | ಲಿಂಗ ಪರಿಮಾಣ (ಲಿಂಗಾನುಪಾತ) | ೯೭೭ | ೯೬೪ |
| ೦೮. | ಸಾಕ್ಷರತಾ ಪ್ರಮಾಣ | ೭೪,೮೬ | ೬೭.೦೪ |
| ೦೯. | ಮಹಿಳೆಯರ ಸಾಕ್ಷರತಾ ಪ್ರಮಾಣ | ೬೭.೨೪ | ೫೭.೪೫ |
| ೧೦. | ಲಿಂಗಸಂಬಂಧಿ ಸಾಕ್ಷರತಾ ಅಂತರ (ಶೇ.ಅಂಶಗಳಲ್ಲಿ) | ೧೫.೦೮ | ೧೮.೮೪ |

ಮೂಲ : ಕರ್ನಾಟಕ ಅಂಕಿ-ಅಂಶಗಳ ನೋಟ : ೨೦೦೩-೨೦೦೪

ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಪ್ರಮಾಣ ಕ್ರಮವಾಗಿ ಶೇ. ೧೬.೨೦ ಮತ್ತು ಶೇ. ೬.೫೫ ರಷ್ಟು ಆಗಿದೆ. ಅದು ಶಿವಮೊಗ್ಗ ಜಿಲ್ಲೆಯಲ್ಲಿ ಶೇ. ೧೬.೧೪ ಮತ್ತು ಶೇ. ೩.೪೧ ರಷ್ಟಾಗಿದೆ. ರಾಜ್ಯದ ೧೦ ಜಿಲ್ಲೆಗಳಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡದವರ ಜನಸಂಖ್ಯೆ ಶೇ. ೪ಕ್ಕಿಂತಲೂ ಕಡಿಮೆಯಿದೆ (ಕರ್ನಾಟಕ ಅಂಕಿ-ಅಂಶಗಳ ನೋಟ, ಪು.೨೫, ೨೦೦೫). ಈ ಹತ್ತು ಜಿಲ್ಲೆಗಳಲ್ಲಿ ಶಿವಮೊಗ್ಗ ಜಿಲ್ಲೆಯೂ ಒಂದು. ಬೆಂಗಳೂರು ವಿಭಾಗದಲ್ಲಿ ಬೆಂಗಳೂರು ಜಿಲ್ಲೆಯನ್ನು ಹೊರತುಪಡಿಸಿದರೆ, ಪರಿಶಿಷ್ಟರು ಕಡಿಮೆ ಪ್ರಮಾಣದಲ್ಲಿರುವುದು ಶಿವಮೊಗ್ಗ ಜಿಲ್ಲೆಯಲ್ಲಿ ಮಾತ್ರ. ಜನಸಂಖ್ಯೆಯ ದಶಕವಾರು (೧೯೯೧-೨೦೦೧) ಬೆಳವಣಿಗೆಯು ರಾಜ್ಯಮಟ್ಟದಲ್ಲಿ ಶೇ. ೧೭ ರಷ್ಟು ಆಗಿದ್ದಾರೆ. ಜಿಲ್ಲೆಯಲ್ಲಿ ಅದು ಶೇ. ೧೩ ರಷ್ಟಾಗಿದೆ. ಅಂದರೆ ಜಿಲ್ಲೆಯ ಜನಸಂಖ್ಯಾ ಬೆಳವಣಿಗೆಯು ರಾಜ್ಯದ ಸರಾಸರಿಗಿಂತಲೂ ಕಡಿಮೆ ಪ್ರಮಾಣದಲ್ಲಿದೆ. ಪರಿಶಿಷ್ಟರು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ) ಮತ್ತು ಪರಿಶಿಷ್ಟೇತರ ಜನಸಂಖ್ಯೆಯ ಬೆಳವಣಿಗೆಯನ್ನು

ಗಮನಿಸಿದರೆ, ಕಳೆದ ದಶಕದಲ್ಲಿ (೧೯೯೧-೨೦೦೧) ಪರಿಶಿಷ್ಟರ ಜನಸಂಖ್ಯೆಯ ಬೆಳವಣಿಗೆಯು ಪ್ರಮಾಣವು (ಶೇ. ೨೦.೮೦) ಪರಿಶಿಷ್ಟೇತರರ ಜನಸಂಖ್ಯಾ ಬೆಳವಣಿಗೆಗಿಂತಲೂ ಅಧಿಕ.

ಮಲೆನಾಡು ಪ್ರದೇಶದ ಅಭಿವೃದ್ಧಿಗಾಗಿ ರಾಜ್ಯ ಸರಕಾರ ಮಲೆನಾಡು ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಿದೆ. ಮಂಡಳಿಯ ವ್ಯಾಪ್ತಿಯಲ್ಲಿರುವ ಜನಸಂಖ್ಯೆಯಲ್ಲಿ (೭೦೮೫೦೫೨) ಶೇ. ೨೩.೧೮ ರಷ್ಟು ಜನಸಂಖ್ಯೆ ಶಿವಮೊಗ್ಗ ಜಿಲ್ಲೆಯದ್ದಾಗಿದೆ. ಜಿಲ್ಲೆಯ ಜನಸಾಂದ್ರತೆಯು (೧೯೩) ರಾಜ್ಯ ಮಟ್ಟದ ಸರಾಸರಿ (೨೭೫)ಗಿಂತಲೂ ಕಡಿಮೆ. ಜನಸಾಂದ್ರತೆಯ ಪ್ರಮಾಣವು ಜಿಲ್ಲೆಯ ನಗರ ಪ್ರದೇಶಗಳಲ್ಲಿ ಅಧಿಕವಾಗಿದ್ದು, ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಕಡಿಮೆ. ಬೆಂಗಳೂರು ವಿಭಾಗದಲ್ಲಿ ಕಡಿಮೆ ಜನಸಾಂದ್ರತೆಯನ್ನು ಪಡೆದಿರುವ ಜಿಲ್ಲೆಗಳ ಪೈಕಿ ಶಿವಮೊಗ್ಗ ಜಿಲ್ಲೆಗೆ ಎರಡನೆ ಸ್ಥಾನ. ವಿಭಾಗದ ಚಿತ್ರದುರ್ಗ ಜಿಲ್ಲೆಯು ಶಿವಮೊಗ್ಗ ಜಿಲ್ಲೆಗಿಂತಲೂ ಕಡಿಮೆ ಜನಸಾಂದ್ರತೆಯನ್ನು ಹೊಂದಿದೆ.

ಶಿವಮೊಗ್ಗ ಕರ್ನಾಟಕ ರಾಜ್ಯದಲ್ಲಿಯೆ ಅತಿ ಹೆಚ್ಚಿನ ಕೆರೆಗಳನ್ನು ಹೊಂದಿರುವ ಜಿಲ್ಲೆಯಾಗಿದೆ. ಶಿವಮೊಗ್ಗ ಮತ್ತು ಭದ್ರಾವತಿ ತಾಲೂಕುಗಳು ೨.೫ ಲಕ್ಷದಿಂದ ೫ ಲಕ್ಷದವರೆಗಿನ ಜನಸಂಖ್ಯೆ ಹೊಂದಿರುವ ತಾಲೂಕುಗಳು ಗುಂಪಿಗೆ ಬರುತ್ತವೆ. ಉಳಿದ ತಾಲೂಕುಗಳು ೧ ರಿಂದ ೨.೫ ಲಕ್ಷದವರೆಗಿನ ಜನಸಂಖ್ಯೆಯ ವ್ಯಾಪಿಗೆ ಬರುತ್ತವೆ. ಸಂಯೋಜಿತ ಅಭಿವೃದ್ಧಿ ಸೂಚಿಯಲ್ಲಿ ಶಿವಮೊಗ್ಗ ಜಿಲ್ಲೆಯು ೧೯೬೦-೬೧ ರಿಂದ ೧೯೯೮-೯೯ ರವರೆಗೆ ೩ನೆ ಸ್ಥಾನವನ್ನು ಹೊಂದಿದೆ. ಜಿಲ್ಲೆಯ ತಲಾವರಮಾನ - ೧೩೯೭೦ (೧೯೯೮) ರಾಜ್ಯದಲ್ಲಿ ೬ನೇ ಸ್ಥಾನವನ್ನು ಪಡೆದಿದೆ. ೨೦೦೨-೦೩ ರ ಸಾಲಿನ ಚಾಲ್ತಿ ಬೆಲೆಯಲ್ಲಿ ಜಿಲ್ಲೆಯ ಒಟ್ಟು ಆದಾಯ ೩.೪೪೧೦೦೧ ಲಕ್ಷ ರೂ.ಗಳು (ಅಂಕಿ-ಅಂಶಗಳ ನೋಟ; ೨೦೦೪-೦೫). ಇದು ರಾಜ್ಯದ ಶೇ. ೨.೮೭ ರಷ್ಟಾಗುತ್ತದೆ. ಇದೇ ಅವಧಿಯಲ್ಲಿ ಜಿಲ್ಲೆಯ ತಲಾ ಆದಾಯ ೨೦೫೫೦ ಇದ್ದು, ಇದು ರಾಜ್ಯದ ಸರಾಸರಿ ತಲಾವರಮಾನಕ್ಕಿಂತ ೧೭೪೪ ರೂ.ಗಳಷ್ಟು ಕಡಿಮೆಯಾಗುತ್ತದೆ. ಅಂದರೆ ರಾಜ್ಯದಲ್ಲಿ ೧೦ನೇ ಸ್ಥಾನದಲ್ಲಿದೆ.

ಒಂದು ಪ್ರದೇಶದ ಮಹಿಳೆಯರ ಸ್ಥಿತಿಗತಿಗಳನ್ನು ಸೂಚಿಸುವ ಹಲವು ಸೂಚಿಗಳಲ್ಲಿ ಲಿಂಗ ಪ್ರಮಾಣವು ಒಂದಾಗಿದೆ. ಜಿಲ್ಲೆಯಲ್ಲಿ ಪ್ರತಿ ಸಾವಿರ ಪುರುಷರಿಗೆ ೯೭೭ ಜನ ಮಹಿಳೆಯರಿದ್ದಾರೆ. ಅಂದರೆ ಜಿಲ್ಲೆಯಲ್ಲಿ ೧೯೧೦೨ ಮಹಿಳೆಯರು ಕಾಣೆಯಾಗಿದ್ದಾರೆ. ಆದರೂ ಬೆಂಗಳೂರು ವಿಭಾಗದಲ್ಲಿಯೇ ಲಿಂಗ ಪರಿಮಾಣದಲ್ಲಿ ಜಿಲ್ಲೆ ಮೊದಲನೆಯ ಸ್ಥಾನದಲ್ಲಿದೆ. ಜಿಲ್ಲೆಯು ರಾಜ್ಯದಲ್ಲಿ ೯ನೇ ಸ್ಥಾನದಲ್ಲಿದೆ. ಮಹಿಳೆ-ಪುರುಷರ ಪ್ರಮಾಣ ಕುರಿತಂತೆ ಜಿಲ್ಲೆಯ ಸ್ಥಿತಿಯು ರಾಜ್ಯಮಟ್ಟಕ್ಕಿಂತ (೯೬೪) ಉತ್ತಮ ಸ್ಥಿತಿಯಲ್ಲಿದೆ. ಜಿಲ್ಲೆಯ ಎರಡು ತಾಲ್ಲೂಕುಗಳಲ್ಲಿ ಮಹಿಳೆಯರ ಪ್ರಮಾಣ ಪುರುಷರಿಗಿಂತ ಹೆಚ್ಚು.

ಒಂದು ಪ್ರದೇಶದ ಏಳಿಗೆಯಲ್ಲಿ ಸಾಕ್ಷರತೆ ಅತಿಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಏಕೆಂದರೆ ಜನತೆಯ ಧಾರಣಶಕ್ತಿ ಮತ್ತು ಹಕ್ಕುದಾರಿಕೆಯನ್ನು ವರ್ಧಿಸುವಲ್ಲಿ ಸಾಕ್ಷರತೆಯು ಪ್ರಮುಖ ಪಾತ್ರವನ್ನು

ಪಡಿಸುತ್ತದೆ. ಶಿವಮೊಗ್ಗ ಜಿಲ್ಲೆಯು ಸಾಕ್ಷರತಾ ಪ್ರಮಾಣಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿ ಆರನೇ ಸ್ಥಾನದಲ್ಲಿದೆ. ಅಂದರೆ ಶೇ. ೭೪.೮೩ ರಷ್ಟಿದೆ. ಬೆಂಗಳೂರು ವಿಭಾಗದಲ್ಲಿ ಅಧಿಕ ಸಾಕ್ಷರತಾ ಪ್ರಮಾಣ ಪಡೆದಿರುವ ಮೊದಲ ಎರಡು ಜಿಲ್ಲೆಗಳಲ್ಲಿ ಶಿವಮೊಗ್ಗ ಜಿಲ್ಲೆಯು ಒಂದಾಗಿದೆ. ಜಿಲ್ಲೆಯ ಸಾಕ್ಷರತಾ ಪ್ರಮಾಣವು ವಿಭಾಗ, ವಲಯ (ಶೇ.೭೧.೧೫) ಮತ್ತು ರಾಜ್ಯದ ಸರಾಸರಿ ಪ್ರಮಾಣ (ಶೇ. ೬೭.೦೪)ಕ್ಕಿಂತಲೂ ಉತ್ತಮವಾಗಿದೆ. ಇದೇ ಸ್ಥಿತಿಯನ್ನು ಮಹಿಳೆಯರ ಸಾಕ್ಷರತೆಯ ಪ್ರಮಾಣದಲ್ಲಿಯೂ ಕಾಣಬಹುದು. ಸಾಕ್ಷರತೆಯ ಪ್ರಮಾಣದಲ್ಲಿ ಪುರುಷ ಮತ್ತು ಮಹಿಳೆಯರ ನಡುವೆ ಶೇ.೧೫.೦೮ ಅಂಶಗಳಷ್ಟು ಅಂತರವಿದೆ. ಇದು ರಾಜ್ಯಕ್ಕೆ ಹೋಲಿಸಿದರೆ ಜಿಲ್ಲೆ ಉನ್ನತ ಸ್ಥಾನದಲ್ಲಿರುವುದು ಕಂಡುಬರುತ್ತದೆ.

ಜಿಲ್ಲೆಯಲ್ಲಿ ಹಲವಾರು ಮಠಮಾನ್ಯಗಳು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಶಿಕ್ಷಣ ನೀಡುವ ಕಾಯಕದಲ್ಲಿ ಹಲವಾರು ವರ್ಷಗಳಿಂದ ತೊಡಗಿಕೊಂಡಿರುವುದೇ ಸಾಕ್ಷರತೆಯು ಉತ್ತಮ ಹಂತವನ್ನು ತಲುಪಲು ಸಾಧ್ಯವಾಗಿರಬಹುದು. ಒಟ್ಟಾರೆ ಜನಸಂಖ್ಯೆಗೆ ಸಂಬಂಧಿತ ಹಲವಾರು ಸೂಚಿಗಳಲ್ಲಿ ಜಿಲ್ಲೆಯ ಸ್ಥಾನವು ರಾಜ್ಯದ ಸರಾಸರಿ ಮಟ್ಟಕ್ಕಿಂತಲೂ ಉತ್ತಮವಾಗಿದೆ. ಇದೇ ರೀತಿಯಲ್ಲಿ ಸಾಕ್ಷರತೆಗೆ ಸಂಬಂಧಿಸಿದ ಸೂಚಿಗಳಲ್ಲಿ ಸಹ ಶಿವಮೊಗ್ಗ ಜಿಲ್ಲೆ ಕರ್ನಾಟಕದ ಸರಾಸರಿ ಮಟ್ಟಕ್ಕಿಂತಲೂ ಸಾಪೇಕ್ಷವಾಗಿ ಉನ್ನತ ಸ್ಥಿತಿಯಲ್ಲಿದೆ.

ಜನತೆಯ ಏಳಿಗೆಯು ಕೇವಲ ಆರ್ಥಿಕಾಭಿವೃದ್ಧಿಯನ್ನು ಮಾತ್ರ ಅವಲಂಬಿಸದೆ ಮಾನವಾಭಿವೃದ್ಧಿಯನ್ನು ಒಳಗೊಂಡಿರುತ್ತದೆ. ಶಿವಮೊಗ್ಗ ಜಿಲ್ಲೆಯು ಆರ್ಥಿಕ ಅಭಿವೃದ್ಧಿಯಲ್ಲಿ ೧ಂನೇ ಸ್ಥಾನದಲ್ಲಿದೆ. ಮಾನವ ಅಭಿವೃದ್ಧಿಯಲ್ಲಿ ಜಿಲ್ಲೆಯು ಅತ್ಯುತ್ತಮ ಸಾಧನೆಯನ್ನು ಮಾಡಿದೆ. ರಾಜ್ಯದಲ್ಲಿ ಅದರ ಸ್ಥಾನ ೫. ಅಂದರೆ ವರಮಾನ ವರ್ಧನೆಯನ್ನು ಮಾನವ ಅಭಿವೃದ್ಧಿಯನ್ನಾಗಿ ಪರಿವರ್ತಿಸಿಕೊಳ್ಳುವಲ್ಲಿ ಜಿಲ್ಲೆಯು ಉನ್ನತ ಮೇಲ್ಮೆ ಸಾಧಿಸಿರುವುದು ಸ್ಪಷ್ಟವಾಗುತ್ತದೆ (ಮಾನವ ಅಭಿವೃದ್ಧಿ ವರದಿ, ೨೦೦೫, ಪು.೧೮).

ಜಿಲ್ಲೆಯಲ್ಲಿ ಜನತೆಯ ಜೀವನಾಯುಷ್ಯ ಪ್ರಮಾಣವು ರಾಜ್ಯದ ಸರಾಸರಿಗಿಂತ ಅಧಿಕ. ರಾಜ್ಯದಲ್ಲಿ ಜಿಲ್ಲೆಯ ಸ್ಥಾನ ಮೂರು ಆಗಿದೆ. ಸರಾಸರಿ ಜೀವನಾಯಸ್ಸು ೬೭.೪ ವರ್ಷಗಳಾಗಿದ್ದು ಇದರಲ್ಲಿ ಪುರುಷ ಆಯಸ್ಸು ೬೫.೯ ಮಹಿಳೆಯರ ಆಯಸ್ಸು ೬೮.೯ ಆಗಿದೆ.

### ೪.೬.೧. ಪರಿಶಿಷ್ಟರ ಬಡತನದ ವಾತಾವರಣ

ಇಂದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಸ್ಥಿತಿಗತಿ ಮೀಸಲಾತಿಯಿಂದ ಉತ್ತಮಗೊಂಡಿದೆ ಎನ್ನುವ ಪರಿಕಲ್ಪನೆ ಮೇಲ್ನೋಟಕ್ಕೆ ಕಂಡುಬರುತ್ತದೆ. ಆದರೆ ವಾಸ್ತವದಲ್ಲಿ ಇದು ಸಾಧ್ಯವಾಗದೇ ಇರುವುದು ಅವರ ಬಡತನವನ್ನು ಅಧ್ಯಯನ ಮಾಡಿದಾಗ ತಿಳಿಯುತ್ತದೆ. ೧೯೯೬ ರಲ್ಲಿ ಬೆಂಗಳೂರಿನ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆಯ ಸಮೀಕ್ಷೆಯ ಪ್ರಕಾರ ಶಿವಮೊಗ್ಗ

ಜಿಲ್ಲೆಯಲ್ಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಬಡತನದ ಸ್ಥಿತಿಗತಿಗಳನ್ನು ನಗರ ಮತ್ತು ಗ್ರಾಮೀಣ ಪ್ರದೇಶಗಳೊಂದಿಗೆ ತೌಲನಿಕವಾಗಿ ಸಮೀಕ್ಷಿಸಲಾಗಿದೆ.

**ಬಡತನ ರೇಖೆಗಿಂತ ಕೆಳಗಿರುವ ಮತ್ತು ಮೇಲಿರುವ ಪರಿಶಿಷ್ಟರ ಶೇ. ಪ್ರಮಾಣ**

**ಕೋಷ್ಟಕ ೪.೧೩**

| ಕ್ರ.ಸಂ. | ವಿವರ | ಬಿ.ಪಿ.ಎಲ್. | ಎ.ಪಿ.ಎಲ್. |
| --- | --- | --- | --- |
| ೧. | ಪರಿಶಿಷ್ಟ ಜಾತಿ (ಗ್ರಾಮೀಣ) | ೯೩.೮ | ೬.೯೨ |
| ೨. | ಪರಿಶಿಷ್ಟ ವರ್ಗ (ಗ್ರಾಮೀಣ) | ೯೨.೨೯ | ೭.೭೧ |
| ೩. | ಪ.ಜಾ. ಮತ್ತು ಪ.ಪಂ. ಒಟ್ಟು | ೯೨.೯೧ | ೭.೦೯ |
| ೪. | ಪ.ಜಾ. (ನಗರ) | ೭೯.೬೭ | ೨೦.೩೩ |
| ೫. | ಪ.ಪಂ. (ನಗರ) | ೯೦.೦೮ | ೯.೯೨ |
| ೬. | ಪ.ಜಾ. ಮತ್ತು ಪ.ಪಂ. ಒಟ್ಟು | ೮೩.೦೧ | ೧೬.೯೯ |

ಮೂಲ : ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆರ್ಥಿಕ ಸಮೀಕ್ಷೆ, ೧೯೯೬, ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆ, ಬೆಂಗಳೂರು

ಕೋಷ್ಟಕ ೪.೧೩ ರಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಪ.ಜಾತಿ ಮತ್ತು ಪ.ಪಂ.ಗಳ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಮತ್ತು ಬಡತನ ರೇಖೆಗಿಂತ ಮೇಲಿರುವವರ ಶೇಕಡಾವಾರು ಪ್ರಮಾಣ ತಿಳಿಯುತ್ತದೆ. ಗ್ರಾಮೀಣ ಪ್ರದೇಶವನ್ನು ಅವಲೋಕಿಸಿದರೆ ಪ.ಜಾತಿಯವರು ಬಡತನ ರೇಖೆಗಿಂತ ಕೆಳಗಿರುವವರ ಸಂಖ್ಯೆ ಪ.ಪಂ.ಕ್ಕಿಂತ ಸ್ವಲ್ಪ ಹೆಚ್ಚು. ಒಟ್ಟಾರೆ ಬಡತನ ರೇಖೆಗಿಂತ ಕೆಳಗಿರುವವರ ಪ್ರಮಾಣ ಶೇ.೯೨ ಕ್ಕಿಂತ ಅಧಿಕ. ಇದು ಗ್ರಾಮೀಣ ಪ್ರದೇಶದಲ್ಲಿ ಈ ಎರಡೂ ವರ್ಗಗಳ ಅಭಿವೃದ್ಧಿ ಇನ್ನೂ ಕೆಳಹಂತದಲ್ಲಿರುವುದರ ಸಂಕೇತವಾಗಿದೆ.

ನಗರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿಯವರ ಸ್ಥಿತಿ ಉತ್ತಮವಾಗಿದ್ದು, ಪರಿಶಿಷ್ಟ ವರ್ಗದವರ ಪರಿಸ್ಥಿತಿ ಇನ್ನೂ ದುಸ್ಥಿತಿಯಲ್ಲಿರುವುದು ತಿಳಿಯುತ್ತದೆ. ಬಡತನ ರೇಖೆಗಿಂತ ಮೇಲಿರುವವರ ಪ್ರಮಾಣ ಪರಿಶಿಷ್ಟ ಜಾತಿಯಲ್ಲಿ ಹೆಚ್ಚಾಗಿದ್ದು, ಪರಿಶಿಷ್ಟ ವರ್ಗದವರಲ್ಲಿ ಅದು ಕಡಿಮೆಯಿದೆ. ಒಟ್ಟಾರೆ ನಗರ ಮತ್ತು ಗ್ರಾಮೀಣ ಪ್ರದೇಶಗಳನ್ನು ಗಮನಿಸಿದರೆ ನಗರ ಪ್ರದೇಶದಲ್ಲಿ ಪರಿಶಿಷ್ಟರು ಕೆಲಮಟ್ಟಿಗೆ ಉತ್ತಮ ಸ್ಥಿತಿಯಲ್ಲಿದ್ದಾರೆ. ಆದರೆ ಬಡತನದ ತೀವ್ರತೆ ಪರಿಶಿಷ್ಟ ವರ್ಗದವರಲ್ಲಿ ಅಧಿಕವಾಗಿದೆ. ಸರಕಾರಗಳು ಮೀಸಲಾತಿಯ ಮೂಲಕ ಅಂಚಿಗೆ ತಳಲ್ಪಟ್ಟವರಿಗೆ ಅವಕಾಶಗಳನ್ನು ನೀಡಿದ್ದರೂ, ಅವಕಾಶಗಳನ್ನು ಧಾರಣ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗಿಲ್ಲ. ಪರಿಶಿಷ್ಟರ ಏಳಿಗೆಗೆ ಹಲವಾರು ಕಾರ್ಯಕ್ರಮ, ಯೋಜನೆಗಳನ್ನು ರೂಪಿಸಿದ್ದರೂ ಅವುಗಳು ನಿರೀಕ್ಷಿತ ಫಲಿತಗಳನ್ನು ಒದಗಿಸಿಲ್ಲ. ಅನುಷ್ಠಾನದಲ್ಲಿನ ಲೋಪದೋಷಗಳಿಂದ ಬಡತನ ಯಥಾಸ್ಥಿತಿಯಲ್ಲಿದೆ. ಇಂತಹದೇ ಸ್ಥಿತಿ ಇನ್ನುಳಿದ ಬಡಜನರಲ್ಲಿ ಕಂಡುಬರುತ್ತದೆ.

ಜಿಲ್ಲೆಯ ಜಾತಿವಾರು ಜನಸಂಖ್ಯೆ ಹಂಚಿಕೆಯನ್ನು ಗಮನಿಸಿದರೆ ಒಂದೊಂದು ಪ್ರದೇಶ ಒಂದೊಂದು ಪ್ರಧಾನ ಜಾತಿಯನ್ನು ಹೊಂದಿರುವುದು ಕಂಡುಬರುತ್ತದೆ. ಚುನಾವಣಾ ಸಂದರ್ಭದಲ್ಲಿ ಮೀಸಲಾತಿಯನ್ನು ಹೊರತುಪಡಿಸಿದರೆ ಉಳಿದ ಮತಕ್ಷೇತ್ರಗಳಲ್ಲಿ ಜಾತಿವಾರು ಲೆಕ್ಕಾಚಾರದಂತೆ ಅಭ್ಯರ್ಥಿಯ ಆಯ್ಕೆಯಾಗುವುದು ಸಾಮಾನ್ಯ ಸಂಗತಿ. ಇದರಲ್ಲಿ ಪ್ರಧಾನ ಜಾತಿಗೆ ಸೇರಿದವರಿಗೆ ಮನ್ನಣೆ ದೊರೆಯುವ ಸಾಧ್ಯತೆಗಳೇ ಹೆಚ್ಚು. ಜಿಲ್ಲೆಯ ಹೊಸನಗರ, ಸೊರಬ ಮತ್ತು ಸಾಗರ ತಾಲ್ಲೂಕುಗಳಲ್ಲಿ ದೀವರ ಪ್ರಾಬಲ್ಯ ಹೆಚ್ಚಾಗಿರುವುದರಿಂದ ಅದೇ ಜಾತಿಗೆ ಸೇರಿದ ಅಭ್ಯರ್ಥಿಗಳಿಗೆ ಹೆಚ್ಚಿನ ಅವಕಾಶಗಳು ದೊರೆಯುತ್ತವೆ. ಈ ಮೂರು ತಾಲ್ಲೂಕುಗಳಲ್ಲಿ ದೀವರು (ಈಡಿಗ) ಪ್ರಧಾನ ಜಾತಿಗೆ ಸೇರಿದ್ದಾರೆ. ಉಳಿದಂತೆ ನಂತರ ಸ್ಥಾನಗಳಲ್ಲಿ ಲಿಂಗಾಯಿತರು, ಬ್ರಾಹ್ಮಣರು, ಇತರೆ ಹಿಂದುಳಿದ ಜಾತಿಯವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ಕಾರಣದಿಂದಲೆ ಈಗ ಲೋಕಸಭಾ ಅಭ್ಯರ್ಥಿಯೂ ಸಹ ಈಡಿಗ ಜಾತಿಗೆ ಸೇರಿದವರು. ಉಳಿದಂತೆ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಮಲೆನಾಡು ಒಕ್ಕಲಿಗರು, ಶಿಕಾರಿಪುರದಲ್ಲಿ ಲಿಂಗಾಯಿತರು, ಭದ್ರಾವತಿ ತಾಲ್ಲೂಕಿನಲ್ಲಿ ಒಕ್ಕಲಿಗರು ಮತ್ತು ಲಿಂಗಾಯಿತರು, ಶಿವಮೊಗ್ಗ ತಾಲ್ಲೂಕಿನಲ್ಲಿ ಹಿಂದುಳಿದ ಜಾತಿಯವರು ಬಹುಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

ಶಿವಮೊಗ್ಗ ಜಿಲ್ಲೆಯ ಜಾತಿವಾರು ವ್ಯವಸ್ಥೆಯು ಭಾರತೀಯ ಸಮಾಜದ ಸ್ಥಿತಿಗತಿಯನ್ನು ಹೋಲುತ್ತದೆ. ಉಳ್ಳವರು ಮತ್ತು ಇಲ್ಲದವರ ನಡುವೆ ಅಂತರ ಹೆಚ್ಚಾಗಿರುವುದು ಆತಂಕಕ್ಕೆ ಕಾರಣವಾಗಿದೆ. ಇತ್ತೀಚಿಗೆ ಧರ್ಮ ಧರ್ಮಗಳ ನಡುವೆ ಸಂಘರ್ಷಗಳು ಹೆಚ್ಚಾಗಿವೆ. ಅಂಚಿಗೆ ತಳ್ಳಲ್ಪಟ್ಟ ಜನವರ್ಗ ಉನ್ನತ ಶಿಕ್ಷಣ ಪಡೆದುಕೊಂಡು ತಮ್ಮ ಪಾಲಿಗಾಗಿ ಹೋರಾಟ ನಡೆಸುತ್ತಿದ್ದಾರೆ. ಭೂಮಾಲೀಕರು ಮತ್ತು ಭೂರಹಿತರ ನಡುವೆ ವೈಷಮ್ಯ ಹೆಚ್ಚಾಗುತ್ತಿದ್ದು ನಕ್ಸಲ್ ಚಟುವಟಿಕೆಗಳಿಗೆ ದಾರಿಯಾಗುತ್ತಲಿದೆ. ದಲಿತರಲ್ಲಿನ ಎರಡು ಪಂಗಡಗಳು ತಮ್ಮ ತಮ್ಮ ಹಕ್ಕಿಗಾಗಿ ಪೈಪೋಟಿ ನಡೆಸುತ್ತಿವೆ. ಮುಂದುವರಿದ ಜಾತಿ, ಜನಾಂಗಗಳು ಗ್ರಾಮಗಳಲ್ಲಿ ತಮ್ಮ ಪ್ರಾಬಲ್ಯವನ್ನು ಹೊಂದಿವೆ. ಈಗೀಗ ಮೀಸಲಾತಿಯಿಂದ ಕಡೆಗಣಿಸಲ್ಪಟ್ಟ ಜಾತಿ, ವರ್ಗಗಳು ಕೆಲಮಟ್ಟಿಗೆ ತಮ್ಮ ನೆಲೆಗಳನ್ನು ಕಂಡುಕೊಳ್ಳಲು, ತಮ್ಮನ್ನು ಎಲ್ಲಾ ಕ್ಷೇತ್ರಗಳಲ್ಲಿ ಗುರುತಿಸಿಕೊಳ್ಳಲು ಪ್ರಯತ್ನ ಮಾಡುತ್ತಲಿವೆ.

ಇಂದು ಗ್ರಾಮಜೀವನ ಸಾಮುದಾಯಿಕ ಹಿತಾಸಕ್ತಿಗಿಂತ ವೈಯಕ್ತಿಕ ಹಿತಾಸಕ್ತಿ ಕಡೆಗೆ ವಾಲುತ್ತಿರುವುದು ವೇದ್ಯವಾಗುತ್ತದೆ. ಆದರೂ ಜಾತಿ ಜಾತಿಗಳ ನಡುವೆ ಒಂದು ಅವ್ಯಕ್ತ ಬಾಂಧವ್ಯ ಇನ್ನು ಉಳಿದುಕೊಂಡಿರುವುದರಿಂದ ಸಾಮಾಜಿಕ ಸಾಮರಸ್ಯ ಸಾಧ್ಯವಾಗಿದೆ. ಜಿಲ್ಲೆಯಲ್ಲಿ ರೈತಸಂಘದ ಪ್ರಾಬಲ್ಯ ಇತ್ತೀಚಿಗೆ ಮಂಕಾದಂತೆ ಕಂಡುಬಂದರೂ ರೈತರ ಹಿತಾಸಕ್ತಿಗೆ ಧಕ್ಕೆಯಾದಾಗ ಸಂಘವು ಬಹಿರಂಗವಾಗಿ ಹೋರಾಟ ನಡೆಸುವ ಪ್ರವೃತ್ತಿಯನ್ನು ಇನ್ನೂ ಉಳಿಸಿಕೊಂಡಿದೆ.

ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಭದ್ರಾವತಿ ಮತ್ತು ಶಿವಮೊಗ್ಗ ತಾಲ್ಲೂಕುಗಳಲ್ಲಿ ಜನಜೀವನ ಸುಗಮವಾಗಿದ್ದು, ಕೋಮು ಸಾಮರಸ್ಯದ ವಿಷಯದಲ್ಲಿ ಎರಡೂ ತಾಲ್ಲೂಕುಗಳು ಇತರೆ ತಾಲ್ಲೂಕುಗಳಿಗಿಂತ ಭಾವನಾತ್ಮಕವಾಗಿವೆ. ಹಬ್ಬ, ಹರಿದಿನ, ಜಾತ್ರೆ, ಗಣಪತಿ ವಿಸರ್ಜನೆಯ ಸನ್ನಿವೇಶದಲ್ಲಿ ಎರಡೂ

ತಾಲ್ಲೂಕುಗಳಲ್ಲಿ ಬಿಗುವಿನ ವಾತಾವರಣವಿರುತ್ತದೆ. ಕೈಗಾರಿಕಾ ನಗರವಾದ ಭದ್ರಾವತಿ ತಾಲ್ಲೂಕಿನಲ್ಲಿ ಒಕ್ಕಲಿಗ, ಲಿಂಗಾಯಿತ, ಇತರೆ ಹಿಂದುಳಿದ ವರ್ಗದವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಜೊತೆಗೆ ನೆರೆಯ ತಮಿಳುನಾಡು ಮತ್ತು ಆಂಧ್ರದಿಂದ ವಲಸೆ ಬಂದರೂ ಹೊಂದಾಣಿಕೆ ಜೀವನ ನಡೆಸುತ್ತಿರುವುದು ಕಂಡುಬರುತ್ತದೆ. ಶಿವಮೊಗ್ಗ ತಾಲ್ಲೂಕಿನಲ್ಲಿ ಇತರೆ ಹಿಂದುಳಿದ ಜಾತಿಯವರ ಸಂಖ್ಯೆ ಹೆಚ್ಚಾಗಿದ್ದು ಉಳಿದಂತೆ ಒಕ್ಕಲಿಗ, ಲಿಂಗಾಯಿತ, ಪರಿಶಿಷ್ಟರು ಇಲ್ಲಿ ವಾಸವಾಗಿದ್ದಾರೆ. ಈ ಎರಡೂ ತಾಲ್ಲೂಕಿನಲ್ಲಿ ಇತರೆ ತಾಲ್ಲೂಕುಗಳಿಗಿಂತ ಅನ್ಯಭಾಷಿಕರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದಾರೆ. ಭದ್ರಾವತಿ ತಾಲ್ಲೂಕಿನಲ್ಲಿ ಅತಿಸಣ್ಣ ಹಿಡುವಳಿದಾರರ ಸಂಖ್ಯೆ ಇಡೀ ಜಿಲ್ಲೆಯಲ್ಲಿಯೇ ಹೆಚ್ಚಾಗಿದೆ. ಅದೇ ರೀತಿ ಹೆಚ್ಚಿನ ಜನಸಾಂದ್ರತೆಯನ್ನು ಹೊಂದಿದೆ. ಅದೇ ರೀತಿ ಭದ್ರಾವತಿ ತಾಲ್ಲೂಕು ಜಿಲ್ಲೆಯಲ್ಲಿಯೆ ಅತಿಹೆಚ್ಚು ಕಬ್ಬು, ತೆಂಗು ಮತ್ತು ಅಡಿಕೆಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತದೆ. ನೀರಾವರಿ ಪ್ರದೇಶದಲ್ಲಿ ಜಿಲ್ಲೆಯಲ್ಲಿಯೇ ಪ್ರಥಮ ಸ್ಥಾನ ಪಡೆದಿದೆ.

ಶಿವಮೊಗ್ಗ ತಾಲ್ಲೂಕು ಜಿಲ್ಲಾಕೇಂದ್ರವಾಗಿದ್ದು ಶಿಕ್ಷಣ, ವರಮಾನ, ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಇತರೆ ತಾಲ್ಲೂಕುಗಳಿಗಿಂತ ಹೆಚ್ಚಿನ ಅಭಿವೃದ್ಧಿ ಸಾಧಿಸಿದೆ. ಚುನಾವಣಾ ಸನ್ನಿವೇಶದಲ್ಲಿ ತಾಲ್ಲೂಕಿನ ಸರಿಸುಮಾರು ಎಲ್ಲಾ ಜಾತಿಗಳೂ ತಮ್ಮದೇ ಆದ ಪ್ರಭಾವಗಳನ್ನು ಬೀರುತ್ತವೆ. ಇಲ್ಲಿ ಪ್ರಧಾನವಾಗಿ ಲಿಂಗಾಯಿತ, ಒಕ್ಕಲಿಗ, ಕುರುಬ, ಅಲ್ಪಸಂಖ್ಯಾತರು, ಹಿಂದುಳಿದ ವರ್ಗ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳು ಬಹುಸಂಖ್ಯೆಯಲ್ಲಿವೆ. ಸ್ವಾತಂತ್ರ್ಯ ಪೂರ್ವದಲ್ಲಿಯೇ ಅನೇಕ ಸಂಘ-ಸಂಸ್ಥೆಗಳು ಉತ್ತಮ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದು ರಾಜ್ಯದಲ್ಲಿಯೇ ಅತ್ಯುತ್ತಮ ಶಿಕ್ಷಣ ನೀಡುತ್ತಿವೆ. ಹಿಂದಿನಿಂದಲೂ ರಾಜಕೀಯವಾಗಿ ಅತ್ಯಂತ ಪ್ರಭಾವಶಾಲಿ ರಾಜಕಾರಣಿಗಳಿಗೆ ಶಿವಮೊಗ್ಗ ಜಿಲ್ಲೆ ಒಂದು ವೇದಿಕೆಯಾಗಿದೆ. ಇಂದು ಶಿವಮೊಗ್ಗ ಜಿಲ್ಲೆಯ ರಾಜಕೀಯ ವಿದ್ಯಮಾನಗಳು ರಾಜ್ಯದ ರಾಜಕಾರಣವನ್ನೇ ಬದಲಾಯಿಸುವ ನಿರ್ಣಾಯಕ ಸ್ಥಾನದಲ್ಲಿದೆ.

ಶಿವಮೊಗ್ಗ ಜಿಲ್ಲೆಯ ಭೌಗೋಳಿಕವಾಗಿ ಕರ್ನಾಟಕದ ಮಧ್ಯಭಾಗದಲ್ಲಿದ್ದು, ಪಶ್ಚಿಮಘಟ್ಟಗಳ ಅರಣ್ಯಪ್ರದೇಶದಿಂದಾಗಿ ಉತ್ತಮ ಮಳೆಯನ್ನು ಪಡೆಯುತ್ತದೆ. ಜಿಲ್ಲೆಯು ಸಂಪದ್ಭರಿತವಾದ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿದೆ. ಅನೇಕ ನದಿ, ಕಾಲುವೆ, ತೊರೆಗಳು ಹರಿಯುವುದರಿಂದ ಜಿಲ್ಲೆಯು ವಿಪುಲ ಜಲಸಂಪನ್ಮೂಲವನ್ನು ಪಡೆದಿದೆ. ರಾಜ್ಯದಲ್ಲಿ ನಿವ್ವಳ ಬಿತ್ತನೆ ಪ್ರದೇಶದಲ್ಲಿ ನೀರಾವರಿಯಾದ ನಿವ್ವಳ ಪ್ರದೇಶದಲ್ಲಿ ಪ್ರಥಮ ಸ್ಥಾನದಲ್ಲಿದೆ. ಶಿವಮೊಗ್ಗ ಕರ್ನಾಟಕ ರಾಜ್ಯದಲ್ಲಿ ಅತಿಹೆಚ್ಚು ಕೆರೆಗಳನ್ನು ಹೊಂದಿರುವ ಜಿಲ್ಲೆಯಾಗಿದೆ.

ಒಟ್ಟಾರೆ ಶಿವಮೊಗ್ಗ ಜಿಲ್ಲೆಯು ರಾಜ್ಯದ ಇತರೆ ಜಿಲ್ಲೆಗಳಿಗಿಂತ ಅನೇಕ ಸಂಗತಿಗಳಲ್ಲಿ ಅಭಿವೃದ್ಧಿ ಪಥದಲ್ಲಿದೆ. ಇತ್ತೀಚಿನ ನಕ್ಸಲ್ ಚಟುವಟಿಕೆಗಳು ಕೆಲಮಟ್ಟಿಗೆ ಆತಂಕಕ್ಕೆ ಕಾರಣವಾಗಿದ್ದರೂ, ಜನರ ಸಹಜ ಜೀವನಕ್ಕೆ ಯಾವುದೇ ತೊಂದರೆಯಾಗಿಲ್ಲ. ರಾಜಕೀಯವಾಗಿ ಜಾತಿವಾರು ಪೈಪೋಟಿ ಕಂಡುಬಂದರೂ ಸಾಮಾಜಿಕವಾಗಿ ಎಲ್ಲ ಜಾತಿ ಜನರು ಸೌಹಾರ್ದ ಜೀವನ ನಡೆಸುತ್ತಿದ್ದಾರೆ.

## ಅನುಬಂಧಗಳು

## ಭದ್ರಾ ಅಣೆಕಟ್ಟಿನ ಭೌತಿಕ ವಿವರ

ಅನುಬಂಧ-೧

೧. ಯೋಜನೆಯ ಹೆಸರು — ಭದ್ರಾ ಅಣೆಕಟ್ಟು

೨. ಯೋಜನೆಯ ನೆಲೆ — ರೇಖಾಂಶ - ೭೫$^{0}$-೩೮'-೨೦" E

ಅಕ್ಷಾಂಶ - ೧೩$^{0}$-೪೨'-೦೦" N

ಲಕ್ಕವಳ್ಳಿಯ ಹತ್ತಿರ, ತರೀಕೆರೆ ತಾಲ್ಲೂಕು

ಚಿಕ್ಕಮಗಳೂರು ಜಿಲ್ಲೆ

೩. ಉದ್ದೇಶ — ನೀರಾವರಿ ಮತ್ತು ವಿದ್ಯುತ್ ಉತ್ಪಾದನೆ

೪. ಜಲಾನಯನ ಪ್ರದೇಶ — ೧೯೬೮.೪ ಕಿ.ಮೀ.ಗಳು

೫. ಜಲಾನಯನ ಪ್ರದೇಶದಲ್ಲಿ ಸರಾಸರಿ ಮಳೆ

೧. ಕೊಟ್ಟಿಗೆ ಹಾರದಲ್ಲಿ — ೯೧೭೦.೮ ಮಿ.ಮೀ.

೨. ಲಕ್ಕವಳ್ಳಿಯಲ್ಲಿ — ೧೧೬೪.೮ ಮಿ.ಮೀ.

೬. ವಾರ್ಷಿಕ ಮಳೆ ಇಳುವರಿ — ೨೮೩೨ ಕ್ಯೂಬಿಕ್ ಮೀಟರ್

೭. ಅಣೆಕಟ್ಟಿನ ನೆಲೆಯಲ್ಲಿ ನದಿಯ ಅಗಲ — ೯೭.೫೩೬ ಮೀಟರ್

೮. ಅಣೆಕಟ್ಟಿನ ಎತ್ತರ — ೫೬.೬೯ ಮೀಟರ್

೯. ಜಲಾಶಯದ ಸಾಮರ್ಥ್ಯ

ಅ. ಒಟ್ಟು ಸಂಗ್ರಹ — ೨೦೨೫.೮೭ ಕ್ಯೂಬಿಕ್‌ಮೀಟರ್ (೭೧.೫೩ ಟಿ.ಎಂ.ಸಿ)

ಬ. ಬಳಸಬಹುದಾದ ಸಾಮರ್ಥ್ಯ — ೧೭೮೫.೧೫ ಕ್ಯೂ.ಮಿ. (೬೩.೦೩೫ ಟಿ.ಎಂ.ಸಿ.)

೧೦. ಮುಳುಗಡೆ ವಿವರ

| | |
|---|---|
| A. ೧. ಒಣಭೂಮಿ | ೯೧೩.೩೬೦ ಹೆ. |
| ೨. ಖುಷ್ಕಿ | ೨೩೫೨.೮೦ |
| ೩. ತೋಟಗಾರಿಕೆ | ೮.೪೯೮ |
| ೪. ಅರಣ್ಯಭೂಮಿ | ೭೧೭.೪೯೨ |
| ೫. ಸರ್ಕಾರ ಪಾಳುಭೂಮಿ ಇತ್ಯಾದಿ | ೭೨೫೮.೭೪ |
| ಒಟ್ಟು | ೧೧೨೪೦.೯೧೩ ಹೆ |

B. ಮುಳುಗಡೆಯಾದ ಹಳ್ಳಿಗಳ ಸಂಖ್ಯೆ — ೨೮

## ತುಂಗಾ ಅಣೆಕಟ್ಟಿನ ಭೌತಿಕ ವಿವರ

ಅನುಬಂಧ-೨

| | |
|---|---|
| ೧. ಯೋಜನೆಯ ಹೆಸರು | ತುಂಗಾ ಅಣೆಕಟ್ಟು |
| ೨. ಯೋಜನೆಯ ನೆಲೆ | ರೇಖಾಂಶ - ೭೫°-೩೧'-೩೦" E |
| | ಅಕ್ಷಾಂಶ - ೧೩°-೧೫'-೩೦" N |
| | ಗಾಜನೂರು ಸಮೀಪ, ಶಿವಮೊಗ್ಗ ತಾಲೂಕು |
| | ಶಿವಮೊಗ್ಗ ಜಿಲ್ಲೆ |
| ೩. ಉದ್ದೇಶ | ನೀರಾವರಿ |
| ೪. ಜಲಾನಯನ ಪ್ರದೇಶ | ೨೨೪೦ ಚ.ಕಿ.ಮೀ.ಗಳು |
| ೫. ಜಲಾನಯನ ಪ್ರದೇಶದಲ್ಲಿ ಸರಾಸರಿ ಮಳೆ | |
| ೧. ಗಾಜನೂರು | ೯೯೦.೪೦ ಮಿ.ಮೀ. |
| ೨. ಶಿವಮೊಗ್ಗ | ೮೦೦ ಮಿ.ಮೀ. |
| ೬. ವಾರ್ಷಿಕ ಮಳೆಯ ಇಳುವರಿ | ೫೬೭೭.೩೩ ಮಿ.ಮೀ. |
| ೭. ಅಣೆಕಟ್ಟಿನ ನೆಲೆಯಲ್ಲಿ ನದಿಯ ಅಗಲ | ೩೬೫.೭೬ ಮೀಟರ್‌ಗಳು |
| ೮. ಅಣೆಕಟ್ಟಿನ ಎತ್ತರ | ೧೨.೭೫ ಮೀಟರ್ |
| ೯. ಜಲಾಶಯದ ಸಾಮರ್ಥ್ಯ | |
| a) ಒಟ್ಟು | ೩.೨೫ ಕ್ಯೂಬಿಕ್ ಮೀಟರ್ (೧೧.೫೦ ಟಿ.ಎಂ.ಸಿ.) |
| b) ಬಳಸಬಹುದಾದ | ೮.೫೦ ಟಿ.ಎಂ.ಸಿ. |
| ೧೦. ಮುಳುಗಡೆ ವಿವರ | |
| A. ೧. ಒಣಭೂಮಿ | ೨೦೭.೦೦ ಹೆ. |
| ೨. ಖುಷ್ಕಿ | ೪೯೩.೭೦ ಹೆ. |
| ೩. ತೋಟಗಾರಿಕೆ | ೨.೫೦. ಹೆ. |
| ೪. ಅರಣ್ಯ ಮತ್ತು ಸರ್ಕಾರಿ | ೬೩೪.೭೦ ಹೆ. |
| ಒಟ್ಟು | ೧೩೩೮.೯೦ ಹೆ. |
| B. ಮುಳುಗಡೆಯಾದ ಹಳ್ಳಿಗಳ ಸಂಖ್ಯೆ | ೦೩ |

೧೧

## ಅಧ್ಯಾಯ ಐದು

# ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ

೫.೧. ಕಾಡಾಗಳ ಉಗಮ ಮತ್ತು ಹಿನ್ನೆಲೆ

೫.೨. ಭದ್ರಾ ಅಚ್ಚುಕಟ್ಟು ಪ್ರಾಧಿಕಾರದ ಆಡಳಿತಾತ್ಮಕ ರಚನೆ

೫.೩. ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳ ಉದ್ದೇಶ ಮತ್ತು ಕಾರ್ಯಗಳು, ಅಧಿಕಾರ, ಜವಾಬ್ದಾರಿಗಳು ಮತ್ತು ಉತ್ತರದಾಯಿತ್ವ

೫.೪. ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾರ್ಯನಿರ್ವಹಣೆ

೫.೫. ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ ಎದುರಿಸುತ್ತಿರುವ ಸಮಸ್ಯೆಗಳು

೫.೬. ಕಾಡಾದ ಉತ್ತಮ ಕಾರ್ಯನಿರ್ವಹಣೆಗೆ ಕೆಲ ಸಲಹೆ-ಸೂಚನೆಗಳು

## ಅಧ್ಯಾಯ ೫

# ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ

### ಪ್ರಸ್ತಾವನೆ

ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯಲ್ಲಿ ನೀರಿನ ಸಮರ್ಪಕ ಬಳಕೆ, ನೀರಾವರಿ ಸಾಮರ್ಥ್ಯ ಮತ್ತು ನೀರಾವರಿ ಬಳಕೆಯ ನಡುವೆ ಇರುವ ಅಂತರಗಳನ್ನು ಕಡಿಮೆ ಮಾಡುವಲ್ಲಿ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ಕಾಡಾ)ಗಳ ಪಾತ್ರ ಮುಖ್ಯವಾಗಿರುತ್ತದೆ. ಅಲ್ಲದೇ ನೀರು ಬಳಕೆದಾರರ ಸಹಕಾರ ಸಂಘಗಳ ಸ್ಥಾಪನೆ, ಸಂಘಟನೆ ಮತ್ತು ಬಲವರ್ಧನೆಯಲ್ಲಿ ಸಹ ಕಾಡಾಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಒಂದು ನಿಟ್ಟಿನಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳಿಗೆ ಇವು ಮಾರ್ಗದರ್ಶಕವಾಗಿ ಕೆಲಸ ನಿರ್ವಹಿಸಬೇಕಾಗುತ್ತದೆ. ಬಳಕೆದಾರರ ಸಹಕಾರ ಸಂಘಗಳ ಯಶಸ್ಸಿಗೆ ಕಾಡಾಗಳು ಸಹ ಸಹಕಾರ ನೀಡಿ, ಬೆಂಬಲ ನೀಡಬೇಕಾಗುತ್ತದೆ. ತನ್ನ ಜೊತೆಯಲ್ಲಿ ತನ್ನಷ್ಟೆ ಬಲಿಷ್ಟವಾಗಿರುವ ಸಂಸ್ಥೆಗಳಿಗೆ ನೆರವು ನೀಡುವಲ್ಲಿ ಮೂಲ ಸಂಸ್ಥೆ ಕಾಡಾ ಸಹ ಬಲಿಷ್ಟ, ದಕ್ಷತೆ, ಪಾರದರ್ಶಕವಾಗಿರಬೇಕಾಗುತ್ತದೆ. ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯಕ್ಷಮತೆಯ ಮೇಲೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳು ಸಹ ಪ್ರಭಾವ ಬೀರುತ್ತವೆ. ಭದ್ರಾ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರದ ಕಾರ್ಯನಿರ್ವಹಣೆ ಮತ್ತು ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯಕ್ಷಮತೆ ನಡುವೆ ಸಂಬಂಧ ಇರುವುದರಿಂದ ಕಾಡಾ ಕುರಿತಾದ ಈ ಅಧ್ಯಾಯವು ಅತ್ಯಗತ್ಯ ಮತ್ತು ಪ್ರಮುಖವೆಂದು ಭಾವಿಸಲಾಗಿದೆ. ಅಲ್ಲದೇ ಮುಂದಿನ ಅಧ್ಯಾಯಗಳಲ್ಲಿ ಇವೆರಡರ ನಡುವಿನ ಸಹಕಾರ, ನೆರವು, ಸಂಬಂಧಗಳ ಕುರಿತಾದ ಚರ್ಚೆಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಕ್ಷೇತ್ರವಾದ ನೀರು ಬಳಕೆದಾರರ ಸಹಕಾರ ಸಂಘಗಳ ಮೇಲೆ ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರವು ಸಹ ತನ್ನ ಪರಿಣಾಮವನ್ನು ಬೀರುವುದರಿಂದ ಪ್ರಸ್ತುತ ಈ ಅಧ್ಯಾಯದಲ್ಲಿ ಭದ್ರಾ ಅಚ್ಚುಕಟ್ಟು ಪ್ರಾಧಿಕಾರದ ರಚನೆ, ಅದರ ಸಂರಚನೆ, ಅಧಿಕಾರ, ಕಾರ್ಯಗಳು, ಜವಾಬ್ದಾರಿಗಳು, ಉತ್ತರದಾಯಿತ್ವಗಳ ಕುರಿತಾದ ಕೆಲ ಸಂಗತಿಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ.

ಈ ನಾಲ್ಕನೇ ಅಧ್ಯಾಯವನ್ನು ಆರು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲ ಭಾಗದಲ್ಲಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ ಅಸ್ತಿತ್ವದ ಹಿನ್ನೆಲೆ ಕುರಿತಂತೆ ಕೆಲವು ಸಂಗತಿಗಳನ್ನು ಚರ್ಚಿಸಲಾಗಿದೆ. ಭದ್ರಾ ಅಚ್ಚುಕಟ್ಟು ಪ್ರಾಧಿಕಾರದ ಆಡಳಿತಾತ್ಮಕ ರಚನೆಯನ್ನು ಎರಡನೇ ಭಾಗದಲ್ಲಿ ವಿವರಿಸಲಾಗಿದೆ. ಪ್ರಾಧಿಕಾರದ ಅಧಿಕಾರ, ಕಾರ್ಯಗಳು, ಜವಾಬ್ದಾರಿಗಳು ಮತ್ತು ಉತ್ತರದಾಯಿತ್ವಗಳನ್ನು ಮೂರನೇ ಭಾಗದಲ್ಲಿ, ಅದರ ಕಾರ್ಯಾಚರಣೆಗಳನ್ನು ನಾಲ್ಕನೇ ಭಾಗದಲ್ಲಿ ಗುರುತಿಸಲಾಗಿದೆ. ಐದು ಮತ್ತು ಆರನೇ ಭಾಗಗಳಲ್ಲಿ ಕ್ರಮವಾಗಿ, ಭದ್ರಾ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಅದು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅಗತ್ಯವಾದ ಕ್ರಮಗಳ ಕುರಿತಾದ ಕೆಲ ಸಂಗತಿಗಳನ್ನು ಚರ್ಚಿಸಲಾಗಿದೆ.

## ೪.೧. ಕಾಡಾಗಳ ಉಗಮ ಮತ್ತು ಹಿನ್ನೆಲೆ

ಸ್ವಾತಂತ್ರ್ಯಾನಂತರದ ಮೊದಲ ಅವಧಿಯಲ್ಲಿ ಒಟ್ಟಾರೆ ದೇಶದ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ರೂಪಿಸಲಾಯಿತು. ಆ ಅವಧಿಯಲ್ಲಿ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲಗಳ ಗರಿಷ್ಠ ಬಳಕೆಗೆ ಒತ್ತನ್ನು ನೀಡಲಾಯಿತು. ಅದೇ ಸಂದರ್ಭದಲ್ಲಿ ಕೃಷಿರಂಗದ ಜೊತೆಯಲ್ಲಿ ಕೈಗಾರಿಕಾ ವಲಯವನ್ನು ವಿಸ್ತರಿಸಬೇಕಾದ ಅಗತ್ಯವಿತ್ತು. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಮೊದಲ ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿ, ಕೈಗಾರಿಕೆ, ಬೃಹತ್ ನೀರಾವರಿ ಯೋಜನೆಗಳಿಗೆ ಆದ್ಯತೆಯನ್ನು ನೀಡಲಾಯಿತು. ಇದರಿಂದ ಇರುವ ಸಂಪನ್ಮೂಲಗಳ ಗರಿಷ್ಠ ಬಳಕೆಯ ಕುರಿತಂತೆ ಪ್ರಯತ್ನಗಳು ನಡೆದವು. ವರ್ಷಗಳು ಕಳೆದಂತೆ, ಅಭಿವೃದ್ಧಿಗಾಗಿ ನಿರ್ಮಿಸಲಾದ ಯೋಜನೆಗಳ ವ್ಯವಸ್ಥಿತ ನಿರ್ವಹಣೆಯು ಸಹ ಅನಿವಾರ್ಯ ಎಂಬ ಅಂಶ ಬಳಕೆಗೆ ಬಂದಿತು. ಇದಕ್ಕೆ ನೀರಾವರಿ ಯೋಜನೆಗಳು ಸಹ ಹೊರತಾಗಿರಲಿಲ್ಲ. ಕೃಷಿವಲಯ ಪ್ರಗತಿಗಾಗಿ ದೊಡ್ಡ ದೊಡ್ಡ ಅಣೆಕಟ್ಟುಗಳನ್ನು ನಿರ್ಮಿಸಲಾಯಿತು. ಇವುಗಳಿಂದ ವಿಶಾಲ ಒಣಭೂಮಿಗಳಿಗೆ ನೀರನ್ನು ಒದಗಿಸಲಾಯಿತು. ಇದೇ ಸಂದರ್ಭದಲ್ಲಿ ಲಭ್ಯವಿರುವ ನೀರಿನ ಪ್ರಮಾಣದ ನ್ಯಾಯಯುತ ಬಳಕೆ ಮತ್ತು ನಿರ್ವಹಣೆಗೆ ಪ್ರತ್ಯೇಕ ಆಡಳಿತ ವ್ಯವಸ್ಥೆಯೊಂದರ ಅಗತ್ಯವನ್ನು ಮನಗಾಣಲಾಯಿತು. ಲಭ್ಯವಿರುವ ನೀರಿನ ಸದ್ಬಳಕೆ ಮತ್ತು ಅಚ್ಚುಕಟ್ಟು ಪ್ರದೇಶಗಳಲ್ಲಿಯ ಸಮಸ್ಯೆಗಳನ್ನು ನಿವಾರಿಸುವ ಸಲುವಾಗಿ ಕ್ರಿ.ಶ. ೧೯೭೪ ರಲ್ಲಿ ಸಮಗ್ರ ಅಚ್ಚುಕಟ್ಟು ಅಭಿವೃದ್ಧಿಗಾಗಿ ಕೇಂದ್ರ ಸರಕಾರದಿಂದ ಮನ್ನಣೆ ಪಡೆದ ಸಂಘಟನಾ ಸಂಸ್ಥೆಯಾದ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಅಸ್ತಿತ್ವದಲ್ಲಿ ಬಂದಿತು.

೧೯೭೨ ರಲ್ಲಿ ಎರಡನೇ ನೀರಾವರಿ ಆಯೋಗ ಸಲ್ಲಿಸಿದ ವರದಿ ಮತ್ತು ೧೯೭೩ ರಲ್ಲಿ ಎಲ್ಲ ರಾಜ್ಯಗಳ ನೀರಾವರಿ ಸಚಿವರ ಸಮ್ಮೇಳನದ ಗೊತ್ತುವಳಿ ಹಾಗೂ ಅದೇ ವರ್ಷದಲ್ಲಿ ಕೇಂದ್ರ ಯೋಜನಾ ಆಯೋಗದ ಶಿಫಾರಸ್ಸುಗಳು ಸಹ ೧೯೭೪ ರಲ್ಲಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳು (ಕಾಡಾ) ಅಸ್ತಿತ್ವದಲ್ಲಿ ಬರಲು ಬೆಂಬಲವಾಗಿ ನಿಂತವು (ದಿನಕರ ವಿ.ಎಸ್., ೧೯೯೬). ಕೇಂದ್ರ ಸರಕಾರ ೧೯೭೪

ರಲ್ಲಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳನ್ನು ರಚಿಸಿದ ನಂತರ ಅದೇ ಅವಧಿಯಲ್ಲಿಯೇ ಮಹಾರಾಷ್ಟ್ರ, ಗುಜರಾತ್ ಮುಂತಾದ ರಾಜ್ಯಗಳು ತಮ್ಮ ಪ್ರತ್ಯೇಕ ಕಾಯಿದೆಗಳ ಮೂಲಕ ತಮ್ಮ ತಮ್ಮ ನೀರಾವರಿ ಯೋಜನೆಗಳಿಗೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳನ್ನು ರಚಿಸಿಕೊಂಡವು. ಕೇಂದ್ರ ಸರಕಾರ ೧೯೭೪ ರಿಂದಲೇ ನೀರಾವರಿ ಯೋಜನೆಗಳಿಗೆ ರಾಜ್ಯ ಸರಕಾರಗಳಿಗೆ ನೇರವಾಗಿ ಇಂತಿಷ್ಟು ಹಣವೆಂದು ನೀಡುತ್ತಿತ್ತು. ಈ ಹಣದ ಬಳಕೆಯಿಂದ ನೀರಾವರಿ ಇಲಾಖೆಯು ರಾಜ್ಯದ ಅಚ್ಚುಕಟ್ಟು ಪ್ರದೇಶಗಳಲ್ಲಿ ಅಭಿವೃದ್ಧಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿತ್ತು. ಕರ್ನಾಟಕದಲ್ಲಿ ೧೯೭೯-೮೦ ರಲ್ಲಿ ಕರ್ನಾಟಕ ಕಾಡಾ ಕಾಯ್ದೆಯನ್ನು ಜಾರಿಗೆ ತರಲಾಯಿತು. ರಾಜ್ಯದಲ್ಲಿ ತುಂಗಭದ್ರಾ ಯೋಜನೆ, ಕಾವೇರಿ ಪಾತ್ರದ ಯೋಜನೆ ಮತ್ತು ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಗಳಲ್ಲಿ ಮೊದಲು ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರವನ್ನು ೧೯೭೪ ರಲ್ಲಿ ರಚಿಸಲಾಯಿತು. ನಂತರ ೧೯೭೭ ರಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆ, ೧೯೭೯ ರಲ್ಲಿ ಭದ್ರಾ ಜಲಾಶಯ ಯೋಜನೆ ಮತ್ತು ೨೦೦೦ ರಲ್ಲಿ ನೀರಾವರಿ ಯೋಜನಾ ವಲಯದಲ್ಲಿ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರಗಳು ಅಸ್ತಿತ್ವದಲ್ಲಿ ಬಂದವು. ೧೯೭೪ ರಲ್ಲಿ ದೇಶದಲ್ಲಿ ಕಾಡಾಗಳು ಅಸ್ತಿತ್ವದಲ್ಲಿ ಬಂದ ನಂತರ, ಇತ್ತೀಚಿನವರೆಗೆ ಅದರ ರೂಪುರೇಷೆಗಳಲ್ಲಿ ಹೆಚ್ಚಿನ ಬದಲಾವಣೆಗಳೇನು ಗೋಚರಿಸಿಲ್ಲ. ಆದರೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳು ನೀರಿನ ನಿರ್ವಹಣೆಯ ಕಾರ್ಯವನ್ನು ಸಹ ನೆರವೇರಿಸುತ್ತಿದ್ದರಿಂದ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳನ್ನು ಏಪ್ರಿಲ್ ೧, ೨೦೦೪ ರಿಂದ (CADWM - Command Area Development & Water Management Programme) ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಮತ್ತು ನೀರು ನಿರ್ವಹಣೆ ಯೋಜನೆಗಳೆಂದು ಮರುನಾಮಕರಣ ಮಾಡಲಾಗಿದೆ. ಆದಾಗ್ಯೂ ಕಾಡಾ ಎಂಬ ಹೆಸರೇ ಹೆಚ್ಚು ಪ್ರಚಲಿತದಲ್ಲಿ ಇದೆ. ಈ ಪ್ರಾಧಿಕಾರಗಳು ಅಸ್ತಿತ್ವದಲ್ಲಿ ಬಂದ ನಂತರ, ಈವರೆಗೆ ನೀರಾವರಿ ಇಲಾಖೆಗೆ ಅಚ್ಚುಕಟ್ಟು ಪ್ರದೇಶದ ಅಭಿವೃದ್ಧಿಗಾಗಿ ವಹಿಸಲಾಗಿದ್ದ ಕೆಲಸ-ಕಾರ್ಯಗಳು ಮತ್ತು ಹಣಕಾಸನ್ನು ಕಾಡಾಗಳಿಗೆ ವರ್ಗಾಯಿಸಲಾಯಿತು. ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ಒಟ್ಟು ಆರು ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳು ಅಸ್ತಿತ್ವದಲ್ಲಿದ್ದು ಕಾರ್ಯನಿರ್ವಹಿಸುತ್ತಿವೆ (ಪಾಟೀಲ್ ಎಸ್.ಟಿ. ೨೦೦೫).

### ೫.೨. ಭದ್ರಾ ಅಚ್ಚುಕಟ್ಟು ಪ್ರಾಧಿಕಾರದ ಆಡಳಿತಾತ್ಮಕ ರಚನೆ

ಕರ್ನಾಟಕದಲ್ಲಿ ೧೯೭೪ ರಿಂದ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳು ಕಾರ್ಯಾಚರಣೆಗೆ ಬಂದವು. ಭದ್ರಾ ಜಲಾಶಯವು ೧೯೫೭ ರಲ್ಲಿ ಪೂರ್ಣಗೊಂಡಿತು. ಅದರ ಅಚ್ಚುಕಟ್ಟು ಪ್ರದೇಶದ ಅಭಿವೃದ್ಧಿ ಕಾರ್ಯಗಳು ೧೯೭೯ ರವರೆಗೂ ಮುಂದುವರೆದು ೧೯೭೯-೮೦ ರಲ್ಲಿ ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರವು ಅಸ್ತಿತ್ವದಲ್ಲಿ ಬಂದಿತು. ಈ ಪ್ರಾಧಿಕಾರದ ಅಡಿಯಲ್ಲಿ ೧,೧೮,೭೩೭ ಹೆಕ್ಟೇರ್ ಅಚ್ಚುಕಟ್ಟು ಪ್ರದೇಶ ಇದೆ. ಇದರ ವ್ಯಾಪ್ತಿಯು ಶಿವಮೊಗ್ಗ, ಭದ್ರಾವತಿ, ತರೀಕೆರೆ, ದಾವಣಗೆರೆ,

ಹರಿಹರ, ಚನ್ನಗಿರಿ, ಹೊನ್ನಾಳಿ, ಹರಪನಹಳ್ಳಿ ತಾಲೂಕುಗಳನ್ನು ಒಳಗೊಂಡಂತೆ ಮೂರು ಜಿಲ್ಲೆಗಳಿಗೆ - ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು - ವಿಸ್ತರಿಸಿದೆ. ಅಲ್ಲದೇ ಈ ಕಾಡಾದ ಅಡಿಯಲ್ಲಿ ಭದ್ರಾ, ತುಂಗಾ, ಗೋಂದಿ ಆಣೆಕಟ್ಟುಗಳು ಬರುತ್ತವೆ.

ಭದ್ರಾ ಜಲಾಶಯವು ೧೯೫೬-೫೭ ರಲ್ಲಿ ಪೂರ್ಣಗೊಂಡಿದ್ದು ಅಚ್ಚುಕಟ್ಟು ಪ್ರದೇಶವನ್ನು ಹಂತ ಹಂತವಾಗಿ ಅಭಿವೃದ್ಧಿಪಡಿಸಲಾಗುತ್ತಿದೆ. ಈ ಕಾರಣಕ್ಕೆ ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರವನ್ನು ೧೯೭೯-೮೦ ರಲ್ಲಿ ಕರ್ನಾಟಕ ವಿಧಾನ ಮಂಡಲವು ಅಂಗೀಕರಿಸಿದ ಕಾಯಿದೆಯಂತೆ ರಚಿಸಲಾಗಿದೆ. ಪ್ರಾಧಿಕಾರದ ವ್ಯಾಪ್ತಿಗೆ ಭದ್ರಾ, ತುಂಗಾ, ಗೋಂದಿ ಹಾಗೂ ದೇವರಬೆಳಕೆರೆ ಯೋಜನೆಗಳು ಒಳಪಟ್ಟಿವೆ. ಪ್ರಾಧಿಕಾರವು ಅಚ್ಚುಕಟ್ಟು ಪ್ರದೇಶದ ಸಮಗ್ರ ಅಭಿವೃದ್ಧಿ ಕಾರ್ಯಕ್ರಮಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದೆ. ಅಂದರೆ ನೀರಾವರಿಗೆ ಬೇಕಾದ ನೀರಿನ ಸಮಾನ ಹಾಗೂ ಸಮರ್ಪಕ ವಿತರಣೆ, ಬೆಳೆ ಪದ್ಧತಿಯ ನಿಯಂತ್ರಣ, ನೀರಾವರಿ ಕಾಲುವೆಗಳ ನಿರ್ಮಾಣ, ಅಚ್ಚುಕಟ್ಟು ರಸ್ತೆಗಳ ನಿರ್ಮಾಣ, ವಾರಾಬಂದಿ ಕಾರ್ಯಕ್ರಮದ ಅನುಷ್ಠಾನ, ಹೊಲಗಾಲುವೆ ನಿರ್ಮಾಣ, ಭೂಸುಸ್ಥಿತೀಕರಣ ಮುಂತಾದವುಗಳನ್ನು ಯೋಜನೆ ನಿಯಂತ್ರಿಸುತ್ತದೆ. ಭೂಮಿಯ ಫಲವತ್ತತೆಯನ್ನು ಕಾಪಾಡಿಕೊಂಡು ಬರಲು ಹಾಗೂ ಉತ್ತಮ ಬೀಜ, ರಸಗೊಬ್ಬರ, ಕೀಟನಾಶಕ ಔಷಧಿಗಳು ಮುಂತಾದವುಗಳು ಸಮಯಕ್ಕೆ ಸರಿಯಾಗಿ ಸಾಕಷ್ಟು ಪ್ರಮಾಣದಲ್ಲಿ ಒದಗುವಂತೆ ನೋಡಿಕೊಳ್ಳಲು ಮತ್ತು ಬ್ಯಾಂಕ್ ಹಾಗೂ ಸಹಕಾರ ಸಂಘಗಳಿಂದ ರೈತರಿಗೆ ಸಕಾಲಕ್ಕೆ ಅಗತ್ಯವಿದ್ದಷ್ಟು ಮುಂಚಿತವಾಗಿ ಕೃಷಿ ಚಟುವಟಿಕೆಗಾಗಿ ಬೆಳೆ ಸಾಲ ಸಿಗುವಂತೆ ನೋಡಿಕೊಳ್ಳಲು, ಕೆಲವೊಂದು ಪರಿಣಾಮಕಾರಿ ಕ್ರಮಗಳನ್ನು ಸಂಬಂಧಿಸಿದ ಇಲಾಖೆಗಳು ಕೈಗೊಂಡಿರುವುದನ್ನು ಪ್ರಾಧಿಕಾರ ಖಚಿತಪಡಿಸಿಕೊಳ್ಳುತ್ತದೆ.

ಅಚ್ಚುಕಟ್ಟು ಪ್ರದೇಶದಲ್ಲಿ ಆಹಾರ ಧಾನ್ಯಗಳು, ಎಣ್ಣೆ ಬೀಜಗಳು, ಬೇಳೆಕಾಳುಗಳು ಮತ್ತು ಇತರೆ ಬೆಳೆಗಳ ಉತ್ಪನ್ನಗಳು ಹಾಗೂ ಉತ್ಪಾದಕತೆಯನ್ನು ನಿರ್ಧಾರಿತ ಗುರಿಯ ಪ್ರಮಾಣದಲ್ಲಿ ಉತ್ಪಾದಿಸುವುದಕ್ಕಾಗಿ ಜಲಸಂಪನ್ಮೂಲ, ಕೃಷಿ, ಸಹಕಾರ, ತೋಟಗಾರಿಕೆ, ರೇಷ್ಮೆ, ಮೀನುಗಾರಿಕೆ, ಕೃಷಿ, ಪಶುಸಂಗೋಪನೆ ಹಾಗೂ ಪಶು ವೈದ್ಯಕೀಯ ಸೇವೆಗಳಂತಹ ಇಲಾಖೆಗಳ ಕಾರ್ಯಕ್ರಮದಲ್ಲಿ ಸಮನ್ವಯತೆಯನ್ನು ತರಲು ಪ್ರಾಧಿಕಾರವು ಸಮನ್ವಯಕಾರಕ ಕ್ರಮವನ್ನು ಕೈಗೊಳ್ಳುತ್ತಿದೆ (ಭದ್ರಾ ಕಾಡಾ ವಾರ್ಷಿಕ ವರದಿ, ೨೦೦೪-೦೫).

ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರಗಳು ತಮ್ಮದೇ ಆದ ಆಡಳಿತಾತ್ಮಕ ರಚನೆಯನ್ನು ಹೊಂದಿವೆ. ಇದರ ವ್ಯಾಪ್ತಿಗೆ ಅನುಗುಣವಾಗಿ ಕಾಡಾಗಳ ಸದಸ್ಯರ ಸಂಖ್ಯೆ ಇರುತ್ತದೆ. ಇವುಗಳಲ್ಲಿ ಮುಖ್ಯವಾಗಿ ಸರಕಾರದ ವಿವಿಧ ಇಲಾಖೆಯ ಅಧಿಕಾರಿಗಳು, ಕಾಡಾದ ವ್ಯಾಪ್ತಿಯಲ್ಲಿಯ ಜಿಲ್ಲೆಯ ಜಿಲ್ಲಾಧಿಕಾರಿಗಳು, ಕಾರ್ಯನಿರ್ವಾಹಕ ಅಧಿಕಾರಿಗಳು ಇನ್ನಿತರರು ಇದರ ಸದಸ್ಯರಾಗಿರುತ್ತಾರೆ. ಅಧ್ಯಯನ ಕ್ಷೇತ್ರವಾದ

ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದಲ್ಲಿ ಅಧ್ಯಕ್ಷರನ್ನು ಒಳಗೊಂಡಂತೆ ಒಟ್ಟು ೨೬ ಜನ ಸದಸ್ಯರಿರುತ್ತಾರೆ. ಇದರಲ್ಲಿ ೧೫ ಜನ ಸರಕಾರದ ವಿವಿಧ ಇಲಾಖೆಗಳು, ಬ್ಯಾಂಕು, ಜಿಲ್ಲಾ ಪಂಚಾಯಿತಿ, ಜಿಲ್ಲಾಧಿಕಾರಿಗಳನ್ನು ಒಳಗೊಂಡ ಅಧಿಕಾರಿ ವರ್ಗದ ಸದಸ್ಯರಿರುತ್ತಾರೆ. ಒಬ್ಬ ಅಧಿಕಾರಿಯು ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಆಡಳಿತಾಧಿಕಾರಿಯಾಗಿರುತ್ತಾರೆ. ಈ ೧೬ ಜನ ಸದಸ್ಯರು ಖಾಯಂ ಸದಸ್ಯರಾಗಿರುತ್ತಾರೆ. ಉಳಿದ ಹತ್ತು ಜನರನ್ನು ಸರಕಾರ ನಾಮನಿರ್ದೇಶನ ಸದಸ್ಯರನ್ನಾಗಿ ನೇಮಕ ಮಾಡುತ್ತದೆ. ಅದರಲ್ಲಿ ಒಬ್ಬರನ್ನು ಸರಕಾರವೇ ಅಧ್ಯಕ್ಷರನ್ನಾಗಿ ನೇಮಕ ಮಾಡುತ್ತದೆ.

ಭದ್ರಾ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ ಒಟ್ಟು ೧೦ ಜನ ನಾಮನಿರ್ದೇಶನ ಸದಸ್ಯರಲ್ಲಿ ಕಾಡಾ ವ್ಯಾಪ್ತಿಯ ಒಬ್ಬ ಕುಶಲಕರ್ಮಿ, ಕೃಷಿಕಾರ್ಮಿಕ, ಒಬ್ಬ ಸಣ್ಣರೈತ ಮತ್ತು ಪರಿಶಿಷ್ಟ ಜಾತಿ ಅಥವಾ ವರ್ಗದವರನ್ನು ಕಡ್ಡಾಯವಾಗಿ ನಾಮನಿರ್ದೇಶನ ಮಾಡಬೇಕೆಂಬ ನಿಯಮವಿದೆ. ಹೀಗೆ ನೇಮಿಸಲ್ಪಟ್ಟ ಸದಸ್ಯರ ಅಧಿಕಾರ ಅವಧಿಯು ಮೂರು ವರ್ಷಗಳದ್ದಾಗಿರುತ್ತದೆ. ಒಂದು ವೇಳೆ ಸರಕಾರ ಇಚ್ಛಿಸಿದರೆ, ಅವರ ಅಧಿಕಾರವನ್ನು ಮತ್ತೊಂದು ಅವಧಿಗೆ ವಿಸ್ತರಿಸಲು ಕಾಯಿದೆಯಲ್ಲಿ ಅವಕಾಶ ಇದೆ. ಕಾಡಾಗಳ ಆಡಳಿತಾಧಿಕಾರಿಗಳು ಸಾಮಾನ್ಯವಾಗಿ ಭಾರತದ ಆಡಳಿತ ಸೇವೆಯ ಮಟ್ಟದ ಅಧಿಕಾರಿಗಳಾಗಿರುತ್ತಾರೆ. ಇವರು ರಾಜ್ಯ ಸರಕಾರದ ಕಾರ್ಯದರ್ಶಿಗಿಂತ ಮೇಲ್ದರ್ಜೆಯ ಅಧಿಕಾರಿಗಳಾಗಿರಬೇಕು. ಆಡಳಿತಾಧಿಕಾರಿ ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಾಗಿದ್ದು, ಇವರು ಎಲ್ಲಾ ರೀತಿಯ ಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಕಾಡಾದ ಸದಸ್ಯರು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರೂ ಸಭೆ ನಡೆಸಬೇಕು. ಸಭೆಯ ನಿರ್ಣಯಗಳು ಬಹುಮತದ ಆಧಾರದ ಮೇಲೆ ಅಂಗೀಕೃತಗೊಳ್ಳುತ್ತವೆ. ಕಾಡಾದ ಸಭೆಗಳನ್ನು ನಡೆಸಲು ಕನಿಷ್ಟ ೫ ಸದಸ್ಯರ ಕೋರಂ ಇರಬೇಕಾಗುತ್ತದೆ. ನೀರಾವರಿ, ತಾಂತ್ರಿಕ ತಜ್ಞರು ಅಗತ್ಯವೆನಿಸಿದರೆ ಸಭೆಗಳಲ್ಲಿ ಭಾಗವಹಿಸುವ ಅಧಿಕಾರ ಇರುತ್ತದೆ. ಆದರೆ ನಿರ್ಧಾರ ತೆಗೆದುಕೊಳ್ಳುವಲ್ಲಿ ಇವರಿಗೆ ಮತದಾನದ ಹಕ್ಕು ಇರುವುದಿಲ್ಲ (ಕಾಡಾ ಕಾಯಿದೆ-೧೯೮೦).

ಮೂರು ತಿಂಗಳಿಗೊಮ್ಮೆ ನಡೆಯುವ ಕಾಡಾ ಸಭೆಯಲ್ಲಿ ಅಚ್ಚುಕಟ್ಟು ಪ್ರದೇಶದಲ್ಲಿ ಕೈಗೊಳ್ಳಬಹುದಾದ ಅಭಿವೃದ್ಧಿ ಕೆಲಸ ಕಾರ್ಯಗಳ ಕುರಿತಂತೆ ಚರ್ಚಿಸಿ ತೀರ್ಮಾನಗಳನ್ನು ಕೈಗೊಂಡು, ಕ್ರಿಯಾ ಯೋಜನೆಯನ್ನು ಸರಕಾರದ ಜಲಸಂಪನ್ಮೂಲ ಇಲಾಖೆಗೆ ಕಳುಹಿಸಿ ಕೊಡಲಾಗುತ್ತದೆ. ಸರಕಾರದ ಮಟ್ಟದಲ್ಲಿ ಚರ್ಚೆಗಳು ನಡೆದು, ಕಾಡಾಕ್ಕೆ ಅಭಿವೃದ್ಧಿ ಕೆಲಸ ಕಾರ್ಯಗಳಿಗಾಗಿ ಹಣಕಾಸನ್ನು ಬಿಡುಗಡೆ ಮಾಡಲಾಗುತ್ತದೆ. ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳಿಗೆ ಮೂರು ಮೂಲಗಳಿಂದ ಹಣಕಾಸು ಒದಗಿಸಲ್ಪಡುತ್ತದೆ. ಮೊದಲನೆಯದಾಗಿ ಗುರುತಿಸಲ್ಪಟ್ಟ ಮುಖ್ಯ ಬಾಬ್ತುಗಳಿಗೆ ರಾಜ್ಯಗಳ ಅನುದಾನ ಗಳೊಂದಿಗೆ ಕೇಂದ್ರ ಹಣಕಾಸಿನ ನೆರವು. ಇದು ಮುಖ್ಯವಾಗಿ ಅನುದಾನ, ಸಾಲ ಮತ್ತು ವಿಶೇಷ ಸಾಲಗಳನ್ನು ಒಳಗೊಂಡಿರುತ್ತದೆ. ಈ ಅನುದಾನ ಮತ್ತು ಸಾಲಗಳು ಪ್ರಮುಖವಾಗಿ ಭೂ ಮೇಲ್ಮೈ

ಅಭಿವೃದ್ಧಿಗಾಗಿ ರೈತರಿಗೆ ನೀಡಲಾಗುತ್ತದೆ. ಎರಡನೆಯದಾಗಿ ರಾಜ್ಯದ ಆಯವ್ಯಯದಿಂದ ಹಣಕಾಸು ಕಾಡಾಗಳಿಗೆ ಬರುತ್ತದೆ. ಮೂರನೇ ಮೂಲವೆಂದರೆ ನಾಬಾರ್ಡ್‌ನಂತಹ ಹಣಕಾಸಿನ ಸಂಸ್ಥೆಗಳಿಂದ ಬರುವ ಸಾಂಸ್ಥಿಕ ಹಣಕಾಸು. ದೊರೆತ ಅನುದಾನ ಮತ್ತು ಸಾಲಗಳ ದೊರೆಯುವಿಕೆಯ ಹಿನ್ನೆಲೆಯಲ್ಲಿ ಕಾಡಾ ಪ್ರಾಧಿಕಾರವು ಅಗತ್ಯ ಕೆಲಸ ಕಾರ್ಯಗಳನ್ನು ಮಾಡುತ್ತದೆ.

ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಕ್ಕಾಗಿ ಪ್ರತ್ಯೇಕ ಇಲಾಖೆ ಇರುವುದಿಲ್ಲ. ಸರಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಕಾಡಾದಲ್ಲಿ ಕೆಲಸ ನಿರ್ವಹಿಸುತ್ತಿರುತ್ತಾರೆ. ಕೃಷಿ, ಜಲಸಂಪನ್ಮೂಲ, ಸಹಕಾರ ಇಲಾಖೆ ಹಾಗೂ ಇತರೆ ಇಲಾಖೆಗಳ ಅಧಿಕಾರಿ ಮತ್ತು ಸಿಬ್ಬಂದಿ ವರ್ಗ ಇದರಲ್ಲಿ ದಿನನಿತ್ಯದ ಕೆಲಸ- ಕಾರ್ಯಗಳನ್ನು ಅನುಷ್ಠಾನದಲ್ಲಿ ತರುತ್ತಿರುತ್ತಾರೆ.

ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಕ್ಕೆ ಸಲಹೆ-ಸೂಚನೆಗಳನ್ನು ನೀಡಲು ನೀರಾವರಿ ಸಲಹಾ ಸಮಿತಿ ಇರುತ್ತದೆ. ಇದರಲ್ಲಿ ಒಟ್ಟು ೪೩ ಸದಸ್ಯರಿರುತ್ತಾರೆ. ಈ ಸಲಹಾ ಸಮಿತಿಯು ನೀರಾವರಿ ನಿರ್ವಹಣೆ ಕುರಿತಂತೆ ಕಾಡಾಕ್ಕೆ ಅಗತ್ಯ ಸಲಹೆ-ಸೂಚನೆಗಳನ್ನು ನೀಡುತ್ತಿರುತ್ತದೆ. ಇವರ ಸಲಹೆ-ಸೂಚನೆಗಳನ್ನು ಪರಿಗಣಿಸುವ ಹಾಗೂ ಅಂತಿಮ ತೀರ್ಮಾನಗಳನ್ನು ಕೈಗೊಳ್ಳುವ ಅಧಿಕಾರ ಕಾಡಾಕ್ಕೆ ಮಾತ್ರ ಇರುತ್ತದೆ. ಕಾಡಾದ ಸದಸ್ಯರು ಕೈಗೊಂಡ ತೀರ್ಮಾನಗಳೇ ಅಂತಿಮವಾಗಿರುತ್ತವೆ. ಕೆಲವು ಸಂದರ್ಭದಲ್ಲಿ ಸರಕಾರವೇ ಕೆಲವು ಮಾರ್ಗದರ್ಶನ ಮತ್ತು ಸಲಹೆ-ಸೂಚನೆ, ನಿರ್ದೇಶನಗಳನ್ನು ಕಾಡಾಗಳಿಗೆ ನೀಡಬಹುದಾಗಿರುತ್ತದೆ. ಹೀಗೆ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳು ತಮ್ಮ ಚೌಕಟ್ಟಿನ ಒಳಗಡೆಯೇ ಕೆಲಸ-ಕಾರ್ಯಗಳನ್ನು ನಿರ್ವಹಿಸುತ್ತವೆ.

### ೫.೩. ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಗಳ ಉದ್ದೇಶ ಮತ್ತು ಕಾರ್ಯಗಳು, ಅಧಿಕಾರ, ಜವಾಬ್ದಾರಿಗಳು ಮತ್ತು ಉತ್ತರದಾಯಿತ್ವ

ಅಚ್ಚುಕಟ್ಟು ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿ ಈ ಪ್ರಾಧಿಕಾರಗಳ ಪ್ರಮುಖ ಉದ್ದೇಶವಾಗಿದೆ. ಆಯಾ ಪ್ರಾಧಿಕಾರಗಳು ತಮ್ಮ ವ್ಯಾಪ್ತಿಯಲ್ಲಿಯ ರೈತರ ಮತ್ತು ಸಾಗುವಳಿ ಪ್ರದೇಶವನ್ನು ಅಭಿವೃದ್ಧಿ ಪಡೆಸುವ ಗುರಿಯನ್ನು ಹೊಂದಿರುತ್ತವೆ. ಪ್ರಾಧಿಕಾರದ ಇತರೆ ಉದ್ದೇಶಗಳು ಈ ರೀತಿಯಾಗಿವೆ. ೧. ಅಚ್ಚುಕಟ್ಟು ಪ್ರದೇಶದ ವ್ಯಾಪಕ ಅಭಿವೃದ್ಧಿಗಾಗಿ ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ಅವುಗಳನ್ನು ಕಾರ್ಯಗತಗೊಳಿಸುವುದು. ೨. ವ್ಯವಸಾಯಕ್ಕೆ ಬೇಕಾದ ಎಲ್ಲ ಸಾಮಗ್ರಿ ಮತ್ತು ಸೇವೆಗಳು ಸಮಯಕ್ಕೆ ಸರಿಯಾಗಿ ಒದಗುವ ಬಗ್ಗೆ ಪರಿಶೀಲಿಸುವುದು ಹಾಗೂ ಖಚಿತಪಡಿಸಿಕೊಳ್ಳುವುದು. ೩. ಅನ್ವಯಿಕ ಪ್ರಯೋಗ ಮತ್ತು ಪರಿಣಾಮಕಾರಿ ವಿಸ್ತರಣಾ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದು. ೪. ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವುದು ಮತ್ತು ನೀರಿನ ಲಭ್ಯತೆಗೆ ಅನುಸಾರ ಯುಕ್ತವಾದ ಬೆಳೆಯನ್ನು

ಬೆಳೆಯುವಂತೆ ನಿಗದಿಪಡಿಸುವುದು. ೫. ಅಚ್ಚುಕಟ್ಟು ಪ್ರದೇಶ ವ್ಯಾಪ್ತಿಗೆ ಬರುವ ಎಲ್ಲಾ ಜಮೀನುಗಳಿಗೂ ಸಾಕಷ್ಟು ಪ್ರಮಾಣದಲ್ಲಿ ಸಕಾಲಕ್ಕೆ ನೀರು ಸರಬರಾಜು ಆಗುವಂತೆ ನೋಡಿಕೊಳ್ಳುವುದು. ೬. ನೀರಾವರಿಗಾಗಿ ಜಮೀನುಗಳ ವಿವರಗಳನ್ನು ಘೋಷಿಸಿ, ಅಧಿಸೂಚನೆ ಹೊರಡಿಸುವುದು ಹಾಗೂ ಯಾವ ಜಮೀನಿಗೆ ನೀರನ್ನು ಸರಬರಾಜು ಮಾಡಲು ಸಾಧ್ಯವಿಲ್ಲವೋ ಅಂತಹ ಜಮೀನುಗಳ ಬಗ್ಗೆ ಅಧಿಸೂಚನೆ ಹೊರಡಿಸಿ, ನೀರಾವರಿ ವ್ಯಾಪ್ತಿಯಿಂದ ಹೊರಗಿಡುವುದು. ೭. ಜೌಗು, ಸವಳು ಮತ್ತು ಕ್ಷಾರತೆ ಹಾಗೂ ಆಮ್ಲತೆಯಿಂದ ನಿರುಪಯುಕ್ತವಾದ ಜಮೀನುಗಳ ಸುಧಾರಣೆಗೆ ಕ್ರಮ ಕೈಗೊಳ್ಳುವುದು ಹಾಗೂ ಹೊಲಗಾಲುವೆಗಳನ್ನು ನಿರ್ಮಾಣ ಮಾಡುವುದು. ೮. ಭೂ ಮೇಲ್ಮೈ ಮತ್ತು ಅಂತರ್ಜಲ ನೀರಿನ ಸಂಯೋಜಿತ ಬಳಕೆಯನ್ನು ಪ್ರೋತ್ಸಾಹಿಸುವುದು ಹಾಗೂ ಈ ಬಗ್ಗೆ ಉತ್ತೇಜನಕಾರಿ ಕ್ರಮಗಳನ್ನು ಕೈಗೊಳ್ಳುವುದು. ೯. ಅಚ್ಚುಕಟ್ಟು ಪ್ರದೇಶದಲ್ಲಿ ಗ್ರಾಮಾಂತರ ಬೆಳವಣಿಗೆ ಕೇಂದ್ರಗಳ ಸುಸಂಘಟಿತ ಅಭಿವೃದ್ಧಿಗಾಗಿ ಸಮಗ್ರ ಕ್ರಮಗಳನ್ನು ಕೈಗೊಳ್ಳುವುದು. ೧೦. ರೈತರು ಸಾಲವನ್ನು ಹಾಗೂ ಇತರೆ ಸೇವೆಗಳನ್ನು ಸಕಾಲಕ್ಕೆ ಪಡೆಯುವಂತಾಗಲು ಅಚ್ಚುಕಟ್ಟು ಪ್ರದೇಶದ ಗ್ರಾಮಾಂತರ ಸ್ಥಳಗಳಲ್ಲಿ ಕೃಷಿ ಸಂಬಂಧಿತ ಸಹಕಾರ ಸಂಘಗಳನ್ನು ಹೊಸದಾಗಿ ಸ್ಥಾಪಿಸುವುದು ಹಾಗೂ ಈಗಾಗಲೇ ಇರುವ ಸಂಘಗಳಿಗೆ ಬೆಂಬಲ ನೀಡಿ, ಅವುಗಳನ್ನು ಅಭಿವೃದ್ಧಿ ಪಡಿಸುವುದು. ೧೧. ದಕ್ಷ ರೀತಿಯಲ್ಲಿ ನೀರಿನ ವಿತರಣೆ ಹಾಗೂ ಭೂ ಮತ್ತು ಜಲ ನಿರ್ವಹಣೆಗಾಗಿ ವಿಕೇಂದ್ರೀಕೃತ ಹಾಗೂ ಸ್ವನಿಯಂತ್ರಿತ ನಿರ್ವಹಣಾ ವ್ಯವಸ್ಥೆಯನ್ನು ಉತ್ತೇಜಿಸುವುದಕ್ಕಾಗಿ ಅಚ್ಚುಕಟ್ಟು ಪ್ರದೇಶದಲ್ಲಿನ ನೀರು ಬಳಕೆದಾರರ ಸಹಕಾರ ಸಂಘಗಳನ್ನು ಸ್ಥಾಪಿಸಿ ಅವುಗಳು ಸದೃಢವಾಗಿ ಹಾಗೂ ಸಮರ್ಪಕವಾಗಿ ಕಾರ್ಯ ನಿರ್ವಹಿಸುವಂತಾಗಲು ಅನುಕೂಲ ಮಾಡಿಕೊಡುವುದು ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಉದ್ದೇಶ ಮತ್ತು ಕಾರ್ಯಗಳಾಗಿವೆ.

ಈ ಮೇಲಿನ ಕಾರ್ಯಗಳೊಂದಿಗೆ, ಬೇಸಾಯಕ್ಕೆ ಬೇಕಾಗುವ ಎಲ್ಲಾ ಸಾಮಗ್ರಿ ಮತ್ತು ಸೇವೆಗಳು ಸಮಯಕ್ಕೆ ಸರಿಯಾಗಿ ರೈತರಿಗೆ ಒದಗಿಸುವ ಬಗ್ಗೆ ಪರಿಶೀಲಿಸುವುದು ಮತ್ತು ಖಚಿತಪಡಿಸುವುದು, ರೈತರಿಗೆ ಅನುಕೂಲವಾಗುವ ಮಾರುಕಟ್ಟೆ, ಸಂಸ್ಕರಣೆ ಮತ್ತು ದಾಸ್ತಾನು ಮಳಿಗೆಗಳ ಸ್ಥಾಪನೆ ಹಾಗೂ ಅವಶ್ಯ ಸಂವಹನ ವ್ಯವಸ್ಥೆಯನ್ನು ಕಲ್ಪಿಸುವುದು ಸಹ ಅಚ್ಚುಕಟ್ಟು ಪ್ರಾಧಿಕಾರದ ಕಾರ್ಯ ಆಗಿರುತ್ತದೆ (ಭದ್ರಾ ಕಾಡಾ ವಾರ್ಷಿಕ ವರದಿ, ೨೦೦೪-೦೫).

ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರಕ್ಕೆ ತನ್ನ ಅಚ್ಚುಕಟ್ಟು ಪ್ರದೇಶದ ಅಭಿವೃದ್ಧಿಗಾಗಿ ಕೆಲವು ಅಧಿಕಾರಗಳನ್ನು ನೀಡಲಾಗಿದೆ. ತನ್ನ ವ್ಯಾಪ್ತಿಯಲ್ಲಿಯ ಅಚ್ಚುಕಟ್ಟು ಪ್ರದೇಶಕ್ಕೆ ಅಗತ್ಯವಾದ ಯೋಜನೆಗಳನ್ನು ರೂಪಿಸಿ, ಅವುಗಳನ್ನು ಅನುಷ್ಠಾನದಲ್ಲಿ ತರುವ ಅಧಿಕಾರ ಪ್ರಾಧಿಕಾರಕ್ಕಿದೆ. ತನ್ನ ವ್ಯಾಪ್ತಿಗೆ ಬರುವ ವಿವಿಧ ಇಲಾಖೆಗಳ ಸಂಯೋಜನೆ, ಅವುಗಳಿಂದ ಅಗತ್ಯ ಕೆಲಸ-ಕಾರ್ಯಗಳನ್ನು ತೆಗೆದುಕೊಳ್ಳುವ ಹಕ್ಕನ್ನು ಭದ್ರಾ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರವು ಹೊಂದಿದೆ. ತನ್ನ ಆಡಳಿತಕ್ಕೆ

ಅನುಗುಣವಾಗಿ ಅಗತ್ಯವಾದ ತಾತ್ಕಾಲಿಕ ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವ ಮತ್ತು ಅವರನ್ನು ಸೇವೆಯಿಂದ ಮುಕ್ತಗೊಳಿಸುವ ಹಕ್ಕನ್ನೂ ಸಹ ಇದಕ್ಕೆ ನೀಡಲಾಗಿದೆ.

ಪ್ರಾಧಿಕಾರಕ್ಕೆ ತನ್ನ ವ್ಯಾಪ್ತಿಯಲ್ಲಿನ ಸಾಗುವಳಿ ಭೂಮಿಯಲ್ಲಿ ಯಾವುದೇ ರೀತಿಯ ಕಾಮಗಾರಿಯನ್ನು ಮಾಡಬಹುದಾದ ಅಧಿಕಾರವನ್ನು ನೀಡಲಾಗಿದೆ. ಅಗತ್ಯವೆನಿಸಿದರೆ ಹೆಚ್ಚುವರಿ ಭೂಮಿಯನ್ನು ವಶಪಡಿಸಿಕೊಳ್ಳುವ ಹಾಗೂ ಭೂಮಿಯನ್ನು ತನ್ನ ವ್ಯಾಪ್ತಿಯಿಂದ ಹೊರಗಡೆ ಇಡುವ ಅಧಿಕಾರವನ್ನು ಭದ್ರಾ ಕಾಡಾ ಹೊಂದಿದೆ. ತಾನು ನಿರ್ಧಾರ ಮಾಡಿದ ಬೆಳೆ ಮಾದರಿಯನ್ನು ಅಳವಡಿಸುವಂತೆ ರೈತರ ಮೇಲೆ ಒತ್ತಾಯ ಮಾಡುವ ಮತ್ತು ಬೆಳೆ ಮಾದರಿಯನ್ನು ಉಲ್ಲಂಘಿಸಿದವರ ವಿರುದ್ಧ ಕ್ರಮ ತೆಗೆದುಕೊಳ್ಳುವ ಅಧಿಕಾರ ಸಹ ಕಾಡಾ ಹೊಂದಿದೆ. ವಾರಾಬಂದಿ ಮೂಲಕ ಕಾಲುವೆಯ ಮೇಲ್ತುದಿ ಮತ್ತು ಕೆಳತುದಿಯ ರೈತರಿಗೆ ನ್ಯಾಯಬದ್ಧವಾದ ನೀರನ್ನು ಒದಗಿಸುವ ಅಧಿಕಾರ ಕಾಡಾಕ್ಕೆ ಪ್ರಾಪ್ತವಾಗಿದೆ. ರೈತರು ಕಾಲುವೆಯ ನೀರನ್ನು ಅಕ್ರಮವಾಗಿ ಎತ್ತುವಳಿ ಮಾಡಿದರೆ ಮತ್ತು ಅನಧಿಕೃತ ಭೂಮಿಗೆ ನೀರನ್ನು ಹರಿಸಿಕೊಂಡರೆ ಅಂಥ ರೈತರಿಗೆ ದಂಡವನ್ನು ವಿಧಿಸುವ ಅಧಿಕಾರ ಇದಕ್ಕೆ ಇದೆ. ರೈತರು ಅಚ್ಚುಕಟ್ಟು ಪ್ರದೇಶದ ಯಾವುದೇ ಕಾಲುವೆ ಅಥವಾ ತೂಬುಗಳಿಗೆ ಹಾನಿಯನ್ನುಂಟು ಮಾಡಿದರೆ ಅವರ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳುವ ಅಧಿಕಾರವನ್ನು ಪ್ರಾಧಿಕಾರಕ್ಕೆ ನೀಡಲಾಗಿದೆ. ನೀರಿನ ಮಾರ್ಗದಲ್ಲಿ ಅಡ್ಡಗೋಡೆಗಳನ್ನು ನಿರ್ಮಿಸಿ, ನೀರಿನ ಹರಿಯುವಿಕೆಗೆ ತಡೆಯನ್ನೊಡ್ಡಿದರೆ ಹಾಗೂ ನೀರನ್ನು ಮಲಿನಗೊಳಿಸುವವರ ವಿರುದ್ಧವೂ ಕೂಡ ಕಾಡಾ ಕಾನೂನು ಕ್ರಮವನ್ನು ಕೈಗೊಳ್ಳಬಹುದಾಗಿದೆ. ತನ್ನ ಅಗತ್ಯಕ್ಕೆ ಅನುಗುಣವಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ಹಣಕಾಸಿನ ನೆರವನ್ನು ಪಡೆಯುವ ಹಾಗೂ ಹೆಚ್ಚುವರಿ ಆರ್ಥಿಕ ಸಂಪನ್ಮೂಲಗಳ ಅಗತ್ಯವಿದ್ದಾಗ ಹಣಕಾಸಿನ ಸಂಸ್ಥೆಗಳಿಂದ ಸಾಲ ಪಡೆಯುವ ಅಧಿಕಾರವನ್ನು ಕಾಡಾಕ್ಕೆ ನೀಡಲಾಗಿದೆ.

ತನ್ನ ವ್ಯಾಪ್ತಿಯ ರೈತರು ಬಯಸಿದರೆ, ಅಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳನ್ನು ಸ್ಥಾಪಿಸಿ, ಅವುಗಳನ್ನು ಸದೃಢಗೊಳಿಸುವ ಹಕ್ಕು ಪ್ರಾಧಿಕಾರಕ್ಕೆ ಇದೆ. ಇಂಥ ಸಂಘಗಳು ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಜಂಟಿ ತಪಾಸಣೆ ಮಾಡುವ ಅಧಿಕಾರವನ್ನು ಪ್ರಾಧಿಕಾರಕ್ಕೆ ನೀಡಲಾಗಿದೆ. ನೀರು ಬಳಕೆದಾರರ ಸಹಕಾರ ಸಂಘಗಳು ಹಣಕಾಸಿನ ದುರ್ಬಳಕೆ ಮಾಡಿಕೊಂಡರೆ ಅವುಗಳ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಹಕ್ಕು ಕಾಡಾಕ್ಕೆ ಪ್ರಾಪ್ತವಾಗಿದೆ. ಹಾಗೂ ಈ ರೀತಿಯ ಸಂಘಗಳು ಅವ್ಯವಹಾರದಲ್ಲಿ ತೊಡಗಿದರೆ ಅವುಗಳನ್ನು ಸಮಾಪನ (ಸೂಪರ್‌ಸೀಡ್) ಮಾಡುವ ಮತ್ತು ಅವುಗಳಿಗೆ ಆಡಳಿತಾಧಿಕಾರಿಗಳನ್ನು ನೇಮಿಸುವ ಅಧಿಕಾರವನ್ನು ಪ್ರಾಧಿಕಾರಕ್ಕೆ ನೀಡಲಾಗಿದೆ. ಬಳಕೆದಾರರ ಸಹಕಾರ ಸಂಘಗಳ ಎಲ್ಲ ಲೆಕ್ಕಪತ್ರಗಳನ್ನು ತಪಾಸಣೆ ಮಾಡುವ ಹಕ್ಕನ್ನು ಕಾಡಾ ಪಡೆದಿದೆ.

ಕಾಡಾವು ತನ್ನ ನಿಯಂತ್ರಣದಲ್ಲಿರುವ ಸಿಬ್ಬಂದಿ ಮತ್ತು ಅಧಿಕಾರಿ ವರ್ಗದವರ ಮೇಲೆ ಮೇಲ್ವಿಚಾರಣೆ ಮಾಡುವ ಜವಾಬ್ದಾರಿಯನ್ನು ಹೊಂದಿರುತ್ತದೆ. ದೊರೆತ ಹಣಕಾಸನ್ನು ಸದ್ವಿನಿಯೋಗ ಗೊಳಿಸುವ, ಕಾಮಗಾರಿಗಳ ಗುಣಮಟ್ಟವನ್ನು ಕಾಪಾಡುವ, ಅಚ್ಚುಕಟ್ಟು ಪ್ರದೇಶದ ಎಲ್ಲ ಕಾಲುವೆ, ನಾಲೆ, ತೂಬುಗಳ ಸುಸ್ಥಿರತೆಯನ್ನು ನೋಡಿಕೊಳ್ಳುವ, ವಾರ್ಷಿಕ ಲೆಕ್ಕ ಪರಿಶೋಧನೆ ಮಾಡಿ, ವರದಿಯನ್ನು ಸರಕಾರಕ್ಕೆ ಸಲ್ಲಿಸುವ, ವಾರ್ಷಿಕ ವರದಿಗಳನ್ನು ಸಿದ್ಧಪಡಿಸಿ, ಪ್ರಕಟಿಸುವ ಜವಾಬ್ದಾರಿಗಳನ್ನು ಕಾಡಾ ನಿರ್ವಹಿಸಬೇಕಾಗುತ್ತದೆ. ಇದಲ್ಲದೇ ನೀರು ಬಳಕೆದಾರರ ಸಹಕಾರ ಸಂಘಗಳು ಸುಗಮವಾಗಿ ಕಾರ್ಯ ನಿರ್ವಹಿಸುವಂತೆ ಮಾಡುವ, ಅವುಗಳಿಗೆ ಅಗತ್ಯ ಮಾಹಿತಿ ಒದಗಿಸುವ, ತರಬೇತಿ ನೀಡುವ ಹೊಣೆಯನ್ನು ಕಾಡಾ ಹೊತ್ತಿರುತ್ತದೆ. ಬೆಳೆ ಮಾದರಿಯನ್ನು ಅನುಷ್ಠಾನಗೊಳಿಸುವ, ವಾರಾಬಂದಿಯನ್ನು ಪಾಲಿಸುವಂತೆ ನೋಡಿಕೊಳ್ಳುವ, ಮುಂಗಾರು ಮತ್ತು ಹಿಂಗಾರು ಹಂಗಾಮಿನ ವೇಳಾಪಟ್ಟಿಯನ್ನು ಸಿದ್ಧಪಡಿಸುವ, ನೀರಿನ ಪ್ರಮಾಣವನ್ನು ನಿಗದಿಪಡಿಸುವ ಹೊಣೆಗಾರಿಕೆಯನ್ನು ಕಾಡಾಗಳಿಗೆ ನೀಡಲಾಗಿದೆ. ಅನಧಿಕೃತ ಮತ್ತು ಅಕ್ರಮ ನೀರು ಬಳಕೆಯನ್ನು ತಡೆಗಟ್ಟುವ ಜವಾಬ್ದಾರಿ ಕಾಡಾದ್ದಾಗಿದೆ. ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರವು ಸರಕಾರಕ್ಕೆ ಮತ್ತು ಮಾಹಿತಿ ಹಕ್ಕು ಅಧಿನಿಯಮದ ಪ್ರಕಾರ ಸಾರ್ವಜನಿಕರಿಗೆ, ರೈತರಿಗೆ, ನೀರು ಬಳಕೆದಾರರ ಸಂಘಗಳಿಗೆ ಉತ್ತರದಾಯಿತ್ವವಾಗಿರುತ್ತದೆ (ಕಾಡಾ ಕಾಯ್ದೆ- ೧೯೮೦).

## ೫.೪. ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾರ್ಯನಿರ್ವಹಣೆ

೧೯೭೪-೮೦ರಲ್ಲಿ ಕರ್ನಾಟಕದ ವಿಧಾನಮಂಡಲವು ಅಂಗೀಕರಿಸಿದ ಕಾಡಾ ಕಾಯಿದೆ ಅಡಿಯಲ್ಲಿ ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಅಸ್ತಿತ್ವಕ್ಕೆ ಬಂದಿತು. ಇದು ಭದ್ರಾ ಅಚ್ಚುಕಟ್ಟು ಪ್ರದೇಶದ ಸರ್ವತೋಮುಖ ಅಭಿವೃದ್ಧಿಗಾಗಿ ಸ್ಥಾಪನೆಗೊಂಡಿದೆ. ಈ ಪ್ರಾಧಿಕಾರದ ವ್ಯಾಪ್ತಿಗೆ ಭದ್ರಾ, ತುಂಗಾ, ಗೊಂದಿ ಹಾಗೂ ದೇವರ ಬೆಳಕೆರೆ ಯೋಜನೆಗಳು ಒಳಪಟ್ಟಿವೆ. ಈ ಯೋಜನೆಗಳ ಜೊತೆಗೆ ಇನ್ನು ೨೮ ಜಲಾಶಯಗಳನ್ನು, ಅಣೆಕಟ್ಟುಗಳನ್ನು, ಕೆರೆಗಳನ್ನು ಭದ್ರಾ ಕಾಡಾ ವ್ಯಾಪ್ತಿಗೆ ಸೇರಿಸಲಾಗಿದೆ. ಪ್ರಾಧಿಕಾರವು ಒಟ್ಟು ೧.೧೮.೭೩೭ ಹೆಕ್ಟೇರ್ ಸಾಗುವಳಿ ಭೂಮಿಗೆ ನೀರಾವರಿ ಒದಗಿಸುವ ಜವಾಬ್ದಾರಿಯನ್ನು ಹೊಂದಿದೆ. ಭದ್ರಾ ಮತ್ತು ತುಂಗಾ ಯೋಜನೆಗಳು ನೀರಾವರಿ ಜಮೀನುಗೆ ನೀರನ್ನು ಒದಗಿಸುವ ಜವಾಬ್ದಾರಿಯನ್ನು ಹೊಂದಿದೆ. ಭದ್ರಾ ಮತ್ತು ತುಂಗಾ ಯೋಜನೆಗಳು ಬೃಹತ್ ನೀರಾವರಿ ಯೋಜನೆಗಳ ವ್ಯಾಪ್ತಿಗೆ ಬಂದರೆ, ಗೋಂದಿ ಮತ್ತು ದೇವರಬೆಳೆಕೆರೆ ಯೋಜನೆಗಳು ಮಧ್ಯಮ ನೀರಾವರಿ ಯೋಜನೆಗಳ ವ್ಯಾಪ್ತಿಗೆ ಬರುತ್ತವೆ.

ಪ್ರಾಧಿಕಾರವು ತನ್ನ ಆಡಳಿತ ನಿರ್ವಹಣೆಗಾಗಿ ಮೂರು ಅಂಗಸಂಸ್ಥೆಗಳನ್ನು ಹೊಂದಿದೆ. ಒಂದು, ನಿರ್ಧಾರಗಳನ್ನು ತೆಗೆದುಕೊಳ್ಳುವುದು ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ. ಇದರಲ್ಲಿ ಅಧಿಕಾರಿ ಮತ್ತು ಸರ್ಕಾರದಿಂದ ನಾಮನಿರ್ದೇಶಿತರಾಗಿರುವ ಅಧ್ಯಕ್ಷ ಮತ್ತು ಸದಸ್ಯರಿರುತ್ತಾರೆ. ಎರಡು,

ಪ್ರಾಧಿಕಾರಕ್ಕೆ ಕಾಲಕಾಲಕ್ಕೆ ತಕ್ಕ ಸಲಹೆ-ಮಾರ್ಗದರ್ಶನ ನೀಡಲು ನೀರಿನ ನಿರ್ವಹಣೆ ಹಾಗೂ ನೀರಾವರಿ ಸಲಹಾ ಸಮಿತಿಯಿದ್ದು, ಇದರಲ್ಲಿ ಅಚ್ಚುಕಟ್ಟು ಪ್ರದೇಶ ವ್ಯಾಪ್ತಿಯ ಎಲ್ಲಾ ಜನಪ್ರತಿನಿಧಿಗಳು ಮತ್ತು ಜಿಲ್ಲೆಯ ಮುಖ್ಯ ಅಧಿಕಾರಿ ವರ್ಗದವರಿರುತ್ತಾರೆ. ಮೂರನೆಯದಾಗಿ ಪ್ರಾಧಿಕಾರದ ದಿನನಿತ್ಯದ ಕಾರ್ಯಗಳನ್ನು ನಿರ್ವಹಿಸಲು ಆಡಳಿತಾಧಿಕಾರಿ ಸೇರಿದಂತೆ ವರ್ಗ ಎ, ಬಿ ಮತ್ತು ಸಿ, ವರ್ಗದ ಅಧಿಕಾರಿ ವರ್ಗವಿರುತ್ತದೆ.

ಭದ್ರಾ ಕಾಡಾ ತನ್ನ ವ್ಯಾಪ್ತಿಯ ನೀರಾವರಿ ವ್ಯವಸ್ಥೆಯನ್ನು ಸುಸ್ಥಿರವಾಗಿಟ್ಟುಕೊಳ್ಳುವ ಉದ್ದೇಶವನ್ನು ಹೊಂದಿದೆ. ಪ್ರಾಧಿಕಾರ ಸ್ಥಾಪನೆಯಾದ ೧೯೮೦-೮೧ ವರ್ಷದಿಂದ ೨೦೦೫-೦೬ರ ವರೆಗಿನ ನಿರ್ಮಾಣ ಚಟುವಟಿಕೆಗಳನ್ನು ಗಮನಿಸಿದರೆ ಅದು ಹೊಲಗಾಲುವೆಗಳ ಅಭಿವೃದ್ಧಿಗೆ ಹೆಚ್ಚು ವೆಚ್ಚ ಮಾಡಿರುವುದು ಕಂಡುಬರುತ್ತದೆ. ನಂತರದ ಸ್ಥಾನ ಆಯಕಟ್ಟಿನ ರಸ್ತೆಗಳ ನಿರ್ಮಾಣಕ್ಕೆ ವೆಚ್ಚವಾಗಿರುವುದು ತಿಳಿದುಬರುತ್ತದೆ. ಅದರ ಒಟ್ಟು ವೆಚ್ಚ ಆಡಳಿತ ನಿರ್ವಹಣೆ ಮತ್ತು ನಿರ್ದೇಶನ ಬಸಿಗಾಲುವೆಗಳ ನಿರ್ಮಾಣ, ವಾರಬಂದಿ, ಭೂಸುಧಾರಣೆ, ಕೃಷಿ ಮತ್ತು ಗೋದಾಮುಗಳ ನಿರ್ಮಾಣ ಸಹಭಾಗಿತ್ವ ಮತ್ತು ತರಬೇತಿ ವಸತಿ ಈ ಮೊದಲಾದವುಗಳಿಗೆ ಹಂಚಿಕೆಯಾಗಿರುವುದು ತಿಳಿದುಬರುತ್ತದೆ.

**ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರವು ವಿವಿಧ ಕೆಲಸ-ಕಾರ್ಯಗಳಿಗೆ ವಿನಿಯೋಗಿಸಿದ ಹಣಕಾಸಿನ ವಿವರ : ೧೯೮೧ ರಿಂದ ೨೦೦೫ ರ ವರೆಗೆ**

**ಕೋಷ್ಟಕ : ೫.೧**

| ಕ್ರ.ಸಂ. | ವಿವರ | ಕೆಲಸಗಳಿಗೆ ವೆಚ್ಚ ಮಾಡಿದ ಹಣ (ಲಕ್ಷಗಳಲ್ಲಿ) | ಶೇಕಡಾ |
|---|---|---|---|
| ೧. | ಹೊಲಗಾಲುವೆ, ಬಸಿಗಾಲುವೆ, ವಾರಬಂದಿ | ೨೮೬೯.೧೪ | ೪೦.೭೯ |
| ೨. | ಆಡಳಿತ ಮತ್ತು ನಿರ್ದೇಶನ | ೬೪೯.೦೨ | ೯.೨೨ |
| ೩. | ಆಯಕಟ್ಟಿನ ರಸ್ತೆ ಮತ್ತು ಗೋದಾಮುಗಳ ನಿರ್ಮಾಣ | ೨೩೫೨.೪೮ | ೩೩.೪೫ |
| ೪. | ಕೃಷಿ ಮತ್ತು ಭೂಸುಧಾರಣೆ | ೬೧೯.೦೦ | ೮.೮೦ |
| ೫. | ಸಹಭಾಗಿತ್ವ ನೀರಾವರಿ ನಿರ್ವಹಣೆ ಮತ್ತು ತರಬೇತಿ | ೮೬.೭೭ | ೧.೨೩ |
| ೬. | ವಸತಿ ಮತ್ತು ಇತರೆ | ೪೫೬.೦೭ | ೬.೪೮ |
| ೭. | ಒಟ್ಟು | ೭೦೩೨.೪೮ | ೧೦೦ |

ಮೂಲ : ೨೦೦೫-೦೬ನೇ ಸಾಲಿನ ವಾರ್ಷಿಕ ವರದಿ ಮತ್ತು ಲೆಕ್ಕ ಪರಿಶೋಧನಾ ವರದಿ, ಭದ್ರಾ ಕಾಡಾ, ಶಿವಮೊಗ್ಗ

ಕೋಷ್ಟಕ ೫.೧ ಅನ್ನು ಗಮನಿಸಿದಾಗ ಅಚ್ಚುಕಟ್ಟು ಪ್ರಾಧಿಕಾರವು ತನ್ನ ವ್ಯಾಪ್ತಿಯಲ್ಲಿ ಕಾಲುವೆಗಳ ನಿರ್ಮಾಣಕ್ಕೆ ಪ್ರಥಮ ಸ್ಥಾನ ನೀಡಿರುವುದು ತಿಳಿಯುತ್ತದೆ. ನಂತರ ಆಯಕಟ್ಟಿನ ರಸ್ತೆ ಮತ್ತು ಗೋದಾಮುಗಳ ನಿರ್ಮಾಣ ಎಂದರೆ ಅಚ್ಚುಕಟ್ಟು ಪ್ರದೇಶಕ್ಕೆ ಅಗತ್ಯವಾದ ಪೂರಕ ಸೌಲಭ್ಯಗಳನ್ನು ಕಲ್ಪಿಸಲು ಹೆಚ್ಚಿನ ಹಣಕಾಸನ್ನು ವೆಚ್ಚ ಮಾಡಿರುವುದು ಕಂಡುಬರುತ್ತದೆ.

ಆನಂತರದ ಸ್ಥಾನ ಕೃಷಿ ಮತ್ತು ಭೂ ಸುಧಾರಣೆಗಳಿಗೆ ವ್ಯಯವಾಗಿದೆ. ಅದೇ ಮಟ್ಟದಲ್ಲಿ ಆಡಳಿತ ಮತ್ತು ನಿರ್ದೇಶನಕ್ಕೂ ವೆಚ್ಚವಾಗಿರುವುದು ತಿಳಿದುಬರುತ್ತದೆ. ವಸತಿ ಮತ್ತು ಇತರೆ ವೆಚ್ಚಗಳಿಗಾಗಿ ೪೫೬.೦೭ ಲಕ್ಷ ರೂ.ಗಳು ಖರ್ಚಾಗಿರುವುದು ಕಂಡುಬರುತ್ತದೆ. ೨೦೦೧-೦೨ ರಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆ ಮತ್ತು ತರಬೇತಿಗೆ ೮೬.೭೭ ಲಕ್ಷ ವೆಚ್ಚ ಮಾಡಲಾಗಿದೆ. ಮೇಲಿನ ವಲಯವಾರು ವೆಚ್ಚವನ್ನು ಗಮನಿಸಿದಾಗ ಹೊಲಗಾಲುವೆಗಳ ನಿರ್ಮಾಣಕ್ಕೆ ನೀಡುವಷ್ಟೇ ಪ್ರಾಮುಖ್ಯತೆಯನ್ನು ಬಸಿಗಾಲುವೆಗಳಿಗೂ ನೀಡುವ ಅಗತ್ಯವಿತ್ತು. ಏಕೆಂದರೆ ಬಸಿಗಾಲುವೆಗಳು ಅಗತ್ಯಕ್ಕೆ ತಕ್ಕಂತೆ ನಿರ್ಮಾಣ ವಾಗದೇ ಇರುವುದರಿಂದ ಸಾಗುವಳಿ ಜಮೀನುಗಳಲ್ಲಿ ನೀರು ಬಸಿದು ಹೋಗದೆ ನಿಂತ ನೀರಿನಿಂದ ಭೂಮಿಯ ಫಲವತ್ತತೆ ಕಡಿಮೆಯಾಗುತ್ತದೆ. ಜೊತೆಗೆ ಆ ಭೂಮಿ ಜೌಗು, ಸವಳು ಮತ್ತು ಕ್ಷಾರೀಯತೆಗೆ ಸಿಲುಕಿ ಅನುಪಯುಕ್ತವಾಗುತ್ತದೆ.

ಕೋಷ್ಟಕ ೫.೨ ರಲ್ಲಿ ಕಂಡುಬರುವಂತೆ ಭದ್ರಾ ಅಚ್ಚುಕಟ್ಟು ಪ್ರದೇಶದ ಶೇ. ೩೦ ರಷ್ಟು ಭೂಮಿ ಅನುಪಯುಕ್ತ ಭೂಮಿಯಾಗಿ ಪರಿವರ್ತನೆಯಾಗಿದೆ. ನೀರಾವರಿಯಾದ ಒಟ್ಟು ಪ್ರದೇಶ ೧,೦೫,೫೭೦ ಹೆಕ್ಟೇರುಗಳಲ್ಲಿ ೧೫,೬೭೪ ಹೆಕ್ಟೇರು ಜೌಗು, ೪,೧೪೪ ಲವಣೀಯತೆ, ೧.೬೨೮ ಹೆಕ್ಟೇರು ಕ್ಷಾರೀಯತೆಗೆ ತುತ್ತಾಗಿದೆ. ಅಂದರೆ ಒಟ್ಟು ೨೧.೪೪೬ ಹೆಕ್ಟೇರು ಭೂಮಿ ತನ್ನ ಫಲವತ್ತತೆಯನ್ನು ಕಳೆದುಕೊಂಡಿದೆ. ಇದರಲ್ಲಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರವು ೪೦೩೨.೫೦ ಹೆಕ್ಟೇರ್ ಪ್ರದೇಶವನ್ನು ಮರು ಅಭಿವೃದ್ಧಿಗೊಳಿಸಿದೆ. ಒಟ್ಟು ಫಲವತ್ತತೆಯನ್ನು ಕಳೆದುಕೊಂಡಿರುವ ಭೂಮಿಯಲ್ಲಿ ಕೇವಲ ಶೇ. ೧೮.೮೦ ರಷ್ಟು ಭೂಮಿಯನ್ನು ಮಾತ್ರ ಪುನರ್ ಅಭಿವೃದ್ಧಿಪಡಿಸಲಾಗಿದೆ. ಈ ದೃಷ್ಟಿಯಿಂದ ಕಾಡಾ ತನ್ನ ವೆಚ್ಚವನ್ನು ಭೂಸುಧಾರಣೆಗೆ ಇನ್ನಷ್ಟು ಗಮನ ನೀಡಬೇಕಾಗಿತ್ತು ಎನಿಸುತ್ತದೆ. ಬಸಿಗಾಲುವೆ, ಹೊಲಗಾಲುವೆ, ವಾರಾಬಂದಿಗೆ ಇನ್ನಷ್ಟು ಹೆಚ್ಚಿನ ಹಣಕಾಸನ್ನು ವಿವಿಧ ಮೂಲಗಳಿಂದ ಪಡೆದು ಅಭಿವೃದ್ಧಿಪಡಿಸಬೇಕಾದ ಅಗತ್ಯ ಕಂಡುಬರುತ್ತದೆ.

ತಾನು ಎರಡನೆಯ ಸ್ಥಾನ ನೀಡಿರುವ ಆಯಕಟ್ಟು ರಸ್ತೆ ಮತ್ತು ಗೋದಾಮುಗಳ ನಿರ್ಮಾಣಕ್ಕೆ ಅಗತ್ಯ ನೆರವನ್ನು ನೀಡಿದೆಯಾದರೂ ಆ ಗೋದಾಮುಗಳು ಎಷ್ಟರಮಟ್ಟಿಗೆ ಕಾರ್ಯನಿರ್ವಹಿಸುತ್ತಿವೆ ಎನ್ನುವುದು ಮುಖ್ಯವಾಗುತ್ತದೆ. ಕೇವಲ ಅವುಗಳನ್ನು ನಿರ್ಮಾಣ ಮಾಡಿದ ಮಾತ್ರಕ್ಕೆ ರೈತರು ತಮ್ಮ ಉತ್ಪನ್ನಗಳು ಎಷ್ಟರಮಟ್ಟಿಗೆ ಅವುಗಳಲ್ಲಿ ದಾಸ್ತಾನು ಮಾಡುತ್ತಾರೆ. ಗೋದಾಮುಗಳಲ್ಲಿ ಅಗತ್ಯವಿರುವ

ವಿಲ್ಲ ಮೂಲ ಸೌಕರ್ಯಗಳಿವೆಯೇ ಎನ್ನುವುದು ಪ್ರಮುಖವಾಗುತ್ತದೆ. ಅದೇ ರೀತಿ ಆಯಕಟ್ಟಿನ ರಸ್ತೆಗಳಿಗೆ ಹೆಚ್ಚಿನ ವೆಚ್ಚ ಮಾಡಿರುವುದು ಕಂಡುಬಂದಿದ್ದರೂ, ಆ ರಸ್ತೆಗಳು ಗುಣಮಟ್ಟದಲ್ಲಿ ಉತ್ತಮವಾಗಿಲ್ಲ ಎನ್ನುವುದು ಅಲ್ಲಿನ ರೈತರ ಅಭಿಪ್ರಾಯವಾಗಿದೆ.

**ಭದ್ರಾ ಅಚ್ಚುಕಟ್ಟು ವ್ಯಾಪ್ತಿಯಲ್ಲಿನ ಜೌಗು-ಸವಳು ಮತ್ತು ಲವಣೀಯತೆಗೆ ಒಳಗಾದ ಪ್ರದೇಶ**

**ಕೋಷ್ಟಕ ೫.೨** **(ಹೆಕ್ಟೇರುಗಳಲ್ಲಿ)**

| ತಾಲೂಕು | ನೀರಾವರಿಯಾದ ಪ್ರದೇಶ | ಜೌಗು | ಲವಣೀಯತೆ | ಕ್ಷಾರೀಯತೆ | ತೊಂದರೆಗೆ ಒಳಗಾದ ಒಟ್ಟುಪ್ರದೇಶ | ತೊಂದರೆಯಿಂದ ನಿವಾರಿಸಲ್ಪಟ್ಟ ಪ್ರದೇಶ |
|---|---|---|---|---|---|---|
| ದಾವಣಗೆರೆ | ೨೭,೮೨೮ | ೩,೧೫೦ | ೪೮೦ | ೨೧೫ | ೩,೮೪೫ | ೫೪೫ |
| ಹರಿಹರ | ೨೭,೩೩೮ | ೪,೦೧೩ | ೧೫೦೦ | ೬೬೭ | ೬,೧೮೦ | ೬೬೫ |
| ಹರಪನಹಳ್ಳಿ | ೩,೭೨೪ | ೫೫೦ | ೨೮೨ | ೮೩೨ | ೩೫೦ | ೧೯೦ |
| ಹೊನ್ನಾಳಿ | ೮,೮೧೨ | ೧೬೮೭ | ೪೫೮ | ೧೭೦ | ೨,೩೧೫ | ೧೯೦ |
| ಚನ್ನಗಿರಿ | ೧೧,೭೮೩ | ೨,೦೩೦ | ೧೩೦ | ೧೩೮ | ೨,೩೧೦ | ೫೮೦ |
| ದಾವಣಗೆರೆ | ..... | ..... | ..... | ..... | ..... | ..... |
| ಜಿಲ್ಲೆ ಒಟ್ಟು | ೭೯,೪೯೫ | ೧೧,೪೩೦ | ೨,೮೫೩ | ೧,೯೯೦ | ೧೫,೪೭೩ | ೨,೩೩೦ |
| ಶಿವಮೊಗ್ಗ | ೪,೭೪೪ | ೪೧೯ | ೧,೦೮೨ | ೨೯೧ | ೧,೭೯೨ | ೭೦೨ |
| ಭದ್ರಾವತಿ | ೧೬,೨೪೬ | ೨,೦೭೫ | ೩೬ | ೯ | ೨,೧೨೦ | ೭೦೨ |
| ಶಿವಮೊಗ್ಗ | ..... | ..... | ..... | ..... | ..... | ..... |
| ಜಿಲ್ಲೆ ಒಟ್ಟು | ೨೧,೦೦೮ | ೨,೪೦೪ | ೧,೧೧೮ | ೩೦೦ | ೩,೯೧೨ | ೧೪೯೧.೫೦ |
| ತರೀಕೆರೆ | ೫,೦೬೭ | ೧,೭೫೦ | ೧೭೩ | ೧೩೮ | ೨,೦೬೧ | ೩೧೧ |
| ಚಿಕ್ಕಮಗಳೂರು | ..... | ..... | ..... | ..... | ..... | ..... |
| ಜಿಲ್ಲೆ ಒಟ್ಟು | ೫,೦೬೭ | ೧,೭೫೦ | ೧೭೩ | ೧೩೮ | ೨,೦೬೧ | ೩೧೧ |
| ಒಟ್ಟು | ೧,೦೫೫೭೦ | ೧೫,೬೭೪ | ೪,೧೪೪ | ೧,೬೨೮ | ೨೧,೪೪೬ | ೪೦೩೨.೫೦ |

ಮೂಲ : ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ, ೨೦೦೫
ಹತ್ತನೇ ಪಂಚವಾರ್ಷಿಕ ಯೋಜನೆ ಕೇಂದ್ರ ಧನಸಹಾಯದ ಪ್ರಸ್ತಾವನೆ.

ಈ ಕಾರಣದಿಂದ ಗೋದಾಮು ಮತ್ತು ಆಯಕಟ್ಟಿನ ರಸ್ತೆಗಳ ನಿರ್ಮಾಣಕ್ಕಿಂತ ಕೃಷಿ ಮತ್ತು ಭೂಸುಧಾರಣೆ, ಬಸಿಗಾಲುವೆಗಳ ನಿರ್ಮಾಣಕ್ಕೆ ಹೆಚ್ಚಿನ ಹಣವನ್ನು ಮೀಸಲಿಡಬೇಕಾಗಿದ್ದ ಅಗತ್ಯ ಕಂಡುಬರುತ್ತದೆ. ವಸತಿ ಮತ್ತು ಇತರ ವೆಚ್ಚಗಳಿಗೆ ಕೈಗೊಂಡಿರುವ ವೆಚ್ಚವು ದುಬಾರಿಯಾಗಿದ್ದು ಈ

ವಿಭಾಗದಲ್ಲಿ ವೆಚ್ಚವನ್ನು ಉಳಿತಾಯ ಮಾಡಿ ಒಂದು ಮತ್ತು ನಾಲ್ಕನೆಯ ವಿಭಾಗಕ್ಕೆ ಹಣಕಾಸನ್ನು ಹಂಚಿಕೆ ಮಾಡಬೇಕಾದ ಅವಶ್ಯಕತೆ ಕಂಡುಬರುತ್ತದೆ.

ಐದನೆ ಭಾಗದಲ್ಲಿರುವ ಸಹಭಾಗಿತ್ವ ನೀರಾವರಿ ನಿರ್ವಹಣೆ ಮತ್ತು ತರಬೇತಿಗೆ ೨೦೦೧-೦೨ ರಿಂದ ೨೦೦೫-೦೬ ರವರೆಗೆ ೮೬.೭೭ ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ. ನೀ.ಬ.ಸ.ಸಂಘಗಳ ಸ್ಥಾಪನೆಗೆ ಮತ್ತು ಆ ಸಂಘಗಳ ಪದಾಧಿಕಾರಿಗಳಿಗೆ ತರಬೇತಿ ನೀಡಲು ಈ ಹಣ ವ್ಯಯವಾಗಿದೆ. ಬೆಂಗಳೂರಿನ ಪ್ರಾದೇಶಿಕ ಸಹಕಾರ ಸಂಸ್ಥೆ, ಧಾರವಾಡದ ವಾಲ್ಮಿ ಮತ್ತು ಶಿವಮೊಗ್ಗದ ಸಹಕಾರ ಯೂನಿಯನ್‌ನಲ್ಲಿ ಈ ತರಬೇತಿಗಳನ್ನು ನೀಡಲಾಗಿದೆ. ಈ ತರಬೇತಿಯ ಅವಧಿಯಲ್ಲಿ ಇನ್ನಷ್ಟು ಹಣ ವೆಚ್ಚ ಮಾಡಿ ನೀ.ಬ.ಸ.ಸಂಘಗಳ ಪದಾಧಿಕಾರಿಗಳನ್ನು ಈಗಾಗಲೇ ಇತರೆ ರಾಜ್ಯಗಳಲ್ಲಿ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವ ಸಂಘಗಳಿಗೆ ಭೇಟಿ ಕೊಡಿಸಬೇಕಾದ ಅವಶ್ಯಕತೆಯಿತ್ತು ಎನಿಸುತ್ತದೆ. ಕೇವಲ ಬೋಧನೆಯಿಂದ ಪರಿವರ್ತನೆ ಅಥವಾ ಬದಲಾವಣೆಯನ್ನು ಮಾಡಲು ಸಾಧ್ಯವಿಲ್ಲ ಎನ್ನಬಹುದು. ಈ ದಿಶೆಯಲ್ಲಿ ಕಾಡಾ ಇನ್ನಷ್ಟು ಕ್ರಿಯಾತ್ಮಕವಾಗಬೇಕಾದ ಅಗತ್ಯತೆ ಕಂಡುಬರುತ್ತದೆ.

ಒಟ್ಟಾರೆ ಹಣಕಾಸಿನ ವಲಯವಾರು ಹಂಚಿಕೆಯನ್ನು ಗಮನಿಸಿದರೆ ನೀರಾವರಿ ಇಲಾಖೆಗೆ ಅಧಿಕ ಪ್ರಾಶಸ್ತ್ಯ ನೀಡಿದಂತಾಗಿ ಉಳಿದ ಇಲಾಖೆಗಳನ್ನು ನಿರ್ಲಕ್ಷಿಸಿರುವುದು ಕಾಣುತ್ತದೆ. ಕೃಷಿ ಮತ್ತು ಭೂಸುಧಾರಣೆಗೆ ಆನಂತರ ಅಲ್ಪ ಮಹತ್ವ ನೀಡಿರುವುದರಿಂದ ಕೆಲಮಟ್ಟಿಗೆ ಕೃಷಿ ಇಲಾಖೆಗೆ ಅವಕಾಶ ವಾಗಿರುವುದು ಕಂಡುಬರುತ್ತದೆ. ಸಹಕಾರ ಇಲಾಖೆಗೆ ೨೦೦೧ ರವರೆಗೆ ಯಾವುದೇ ಪ್ರಾಮುಖ್ಯತೆ ನೀಡಿರುವುದು ಕಾಣುವುದಿಲ್ಲ. ಕಾಡಾದಲ್ಲಿ ಮುಖ್ಯವಾಗಿ ನೀರಾವರಿ, ಕೃಷಿ ಹಾಗೂ ಸಹಕಾರ ಇಲಾಖೆಗಳು ಪ್ರಧಾನ ಪಾತ್ರವಹಿಸುತ್ತವೆ. ಆದರೂ ಹಣಕಾಸಿನ ಹಂಚಿಕೆಯ ವಿಷಯದಲ್ಲಿ ಈ ಇಲಾಖೆಗಳ ನಡುವೆ ಹೆಚ್ಚಿನ ತಾರತಮ್ಯ ಮಾಡಲಾಗಿದೆ. ಇದರಿಂದ ವಿವಿಧ ಇಲಾಖೆಗಳ ನಡುವೆ ಸಹಕಾರ ಸಮನ್ವಯತೆಗೆ ತೊಡಕಾಗಿರುವುದನ್ನು ಕಾಣಬಹುದಾಗಿದೆ. ಇದಲ್ಲದೆ ಇತರ ಸಹಯೋಗಿ ಇಲಾಖೆಗಳಾದ ರೇಷ್ಮೆ, ಮೀನುಗಾರಿಕೆ, ಕೃಷಿ ಸಂಗೋಪನೆ ಮತ್ತು ಪಶು ವೈದ್ಯಕೀಯ ಮೊದಲಾದವುಗಳಿಗೆ ಹಣಕಾಸಿನಲ್ಲಿ ಯಾವುದೇ ಹಂಚಿಕೆ ಇಲ್ಲದಿರುವುದು ಒಂದು ಕೊರತೆಯಾಗಿ ಕಂಡುಬರುತ್ತದೆ. ಅಲ್ಪ ಪ್ರಮಾಣದಲ್ಲಿ ಯಾದರೂ ಈ ಇಲಾಖೆಗಳಿಗೆ ಹಣಕಾಸನ್ನು ಒದಗಿಸಿ ಅಗತ್ಯ ಪೂರಕ ಸೇವೆಗಳನ್ನು ಪಡೆಯಬಹುದಾಗಿತ್ತು.

೨೦೦೧-೦೨ರ ಸಾಲಿನಿಂದ ಭದ್ರಾ ಕಾಡಾ ತನ್ನ ವ್ಯಾಪ್ತಿಯಲ್ಲಿ ೪೯೮ ನೀ.ಬ.ಸ.ಸಂಘಗಳನ್ನು ಸ್ಥಾಪಿಸುವ ಗುರಿಯನ್ನು ಹೊಂದಿ, ೨೦೦೬ ಮಾರ್ಚ್ ೩೧ ರ ವೇಳೆಗೆ ೪೯೦ ನೀ.ಬ.ಸ.ಸಂಘಗಳನ್ನು ಸ್ಥಾಪಿಸುವಲ್ಲಿ ಯಶಸ್ವಿಯಾಗಿದೆ. ಈ ಸ್ಥಾಪನೆಯಾದ ಸಂಘಗಳಲ್ಲಿ ೧೦೮ ಸಹಕಾರ ಸಂಘಗಳು ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದ ಮಾಡಿಕೊಂಡಿವೆ. ಅಂದರೆ ಅಚ್ಚುಕಟ್ಟು ಪ್ರದೇಶದ ಶೇ. ೩೪.೨೪ ಪ್ರದೇಶ ಮಾತ್ರ ಸಹಭಾಗಿತ್ವ ನೀರಾವರಿ ನಿರ್ವಹಣೆ ವ್ಯಾಪ್ತಿಗೆ ಬಂದಿದೆ.

ಉಳಿದಂತೆ ೬೬.೭೬ ಪ್ರದೇಶ ಸಹಭಾಗಿತ್ವ ನೀರಾವರಿ ನಿರ್ವಹಣೆಗೆ ಬರದೇ ಇರುವುದು ಒಂದು ಸಮಸ್ಯೆಯಾಗಿದೆ. ಈ ದಿಶೆಯಲ್ಲಿ ಆರಂಭದಲ್ಲಿ ಕಾಡಾ ಅಧ್ಯಕ್ಷರು ಮತ್ತು ಅಧಿಕಾರಿಗಳು ಅಚ್ಚುಕಟ್ಟು ಪ್ರದೇಶದ ಎಲ್ಲ ಹಳ್ಳಿಗಳಿಗೆ ಭೇಟಿ ನೀಡಿ ಸಹಭಾಗಿತ್ವ ನೀರಾವರಿ ನಿರ್ವಹಣೆಯತ್ತ ರೈತರ ಮನವೊಲಿಸಲು ಪ್ರಯತ್ನಿಸಲಾಯಿತು. ಆದರೆ ಆನಂತರದ ದಿನಗಳಲ್ಲಿ ಇಂತಹ ಉತ್ಸಾಹ ಕಾಡಾದಿಂದ ಕಾಣದೇ ಇರುವುದು ಒಂದು ಹಿನ್ನೆಡೆಯಾಗಿ ಕಾಣುತ್ತಿದೆ. ೧೦೮ ಸಂಘಗಳನ್ನು ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದ ಮಾಡಲಾಗಿದೆಯಾದರೂ ಅದರಲ್ಲಿ ೫ ನೀ.ಬ.ಸ.ಸಂಘಗಳು ಮಾತ್ರ ಕೆಲಮಟ್ಟಿನ ಪ್ರಗತಿಪರ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಉಳಿದಂತೆ ಎಲ್ಲ ಸಂಘಗಳು ಸ್ಥಗಿತ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ.

ಈ ದಿಶೆಯಲ್ಲಿ ಒಪ್ಪಂದವಾಗಿರುವ ಸಂಘಗಳ ಸಮಸ್ಯೆಗಳತ್ತ ಕಾಡಾ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕಾಗಿದ್ದಿತು. ಆದರೆ ವಿವಿಧ ಇಲಾಖೆಗಳ ಸಮನ್ವಯತೆ ಕೊರತೆಯಿಂದ ನೀ.ಬ.ಸ.ಸಂಘಗಳ ತೊಡಕುಗಳು ನಿವಾರಣೆಯಾಗುವಲ್ಲಿ ವಿಳಂಬವಾಗುತ್ತಿರುವುದು ಬಳಕೆದಾರರ ಸಹಭಾಗಿತ್ವಕ್ಕೆ ತೊಡಕಾಗಿದೆ.

ಇಷ್ಟೆಲ್ಲ ಸಮಸ್ಯೆಗಳ ನಡುವೆಯು ಕೆಲವು ಸಂಘಗಳು ಶಕ್ತಿ ಮೀರಿ ಸಾಧನೆ ಮಾಡಿರುವುದು ಕಾಣಸಿಗುತ್ತದೆ. ಮತ್ತೆ ಕೆಲವು ಸಂಘಗಳಲ್ಲಿ ಹಣದ ದುರುಪಯೋಗವಾಗಿ ಆಡಳಿತಾಧಿಕಾರಿಯನ್ನು ನೇಮಿಸಿರುವುದು ಕಂಡುಬರುತ್ತದೆ. ಹೀಗೆ ಕಾಡಾದ ಪ್ರಯತ್ನದಿಂದಾಗಿ ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ಸಮ್ಮಿಶ್ರಿತ ಫಲಗಳು ಉಂಟಾಗಿವೆ. ಈ ಸಂಘಗಳು ಇನ್ನು ಆರಂಭದ ಸ್ಥಿತಿಯಲ್ಲಿರುವುದು ಗೊತ್ತಾಗುತ್ತದೆ. ಒಟ್ಟಾರೆ ಕಾಡಾ ಈ ರೀತಿಯ ಚಟುವಟಿಕೆಗಳಲ್ಲಿ ಹೆಚ್ಚಿನ ರೀತಿಯಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕಾಗಿರುವುದು ಕಂಡುಬರುತ್ತದೆ.

ಕಾಡಾ ಕುರಿತ ರೈತರ ಮತ್ತು ನೀರು ಬಳಕೆದಾರರ ಸಹಕಾರ ಸಂಘಗಳ ಪ್ರತಿಕ್ರಿಯೆಯನ್ನು ಪರಿಗಣಿಸಿದಾಗ ಹಲವಾರು ಸಂಗತಿಗಳು ವ್ಯಕ್ತವಾಗುತ್ತವೆ. ಮುಖ್ಯವಾಗಿ ಇಲ್ಲಿ ತೆಗೆದುಕೊಳ್ಳುವ ನಿರ್ಧಾರಗಳಲ್ಲಿ ರೈತರನ್ನು ಅಥವಾ ನೀ.ಬ.ಸ.ಸಂಘಗಳನ್ನು ತೊಡಗಿಸಿಕೊಳ್ಳದಿರುವುದು ಒಂದು ಲೋಪವಾಗಿ ಕಾಣುತ್ತದೆ. ಕಾಡಾ ತೆಗೆದುಕೊಳ್ಳುವ ನಿರ್ಧಾರಗಳು ರೈತರಿಗೆ / ನೀ.ಬ.ಸ.ಸಂಘಗಳ ಗಮನಕ್ಕೆ ಬರುವುದಿಲ್ಲ. ಕಾಮಗಾರಿಗಳನ್ನು ಆದ್ಯತೆಗೆ ತಕ್ಕ ಆಯ್ಕೆ ಮಾಡಿಕೊಳ್ಳುವುದಿಲ್ಲ. ಕಾಮಗಾರಿಗಳಲ್ಲಿ ರಾಜಕೀಯ ಹಸ್ತಕ್ಷೇಪ, ಉಳ್ಳವರ ಮರ್ಜಿಗೆ ಹೆಚ್ಚಿಗೆ ಮನ್ನಣೆ ದೊರೆಯುತ್ತದೆ. ಕಾಡಾದ ಕಾರ್ಯ ಚಟುವಟಿಕೆಗಳಲ್ಲಿ ಪಾರದರ್ಶಕತೆ ಅಭಾವ ಎದ್ದು ಕಾಣುತ್ತದೆ. ಕಾಡಾ ಕಾನೂನು ನಿಯಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸದೇ ಇರುವುದರಿಂದ ಕೊನೆ ಭಾಗದ ರೈತರಿಗೆ ನೀರು ದೊರೆಯುತ್ತಿಲ್ಲ ಎಂದು ಕೆಳತುದಿ ರೈತರು ಅಭಿಪ್ರಾಯ ಪಡುತ್ತಾರೆ. ಕನಿಷ್ಟ ಒಡಂಬಡಿಕೆ ಒಪ್ಪಂದವಾಗಿರುವ ನೀರು ಬಳಕೆದಾರರ ಸಹಕಾರ ಸಂಘಗಳನ್ನಾದರೂ ಕಾಮಗಾರಿಗಳ ಆಯ್ಕೆ ಮತ್ತು ಅನುಷ್ಠಾನದ ಸಂದರ್ಭಗಳಲ್ಲಿ ಪರಿಗಣಿಸಬೇಕೆಂದು ಆಗ್ರಹಪಡಿಸುತ್ತಿದೆ.

ಒಟ್ಟಾರೆ ತನಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ಲಭ್ಯವಾದ ಪರಿಮಿತ ಹಣಕಾಸಿನ ಸಂಪನ್ಮೂಲದಲ್ಲಿ ಕಾಡಾ ಅನೇಕ ಪ್ರಗತಿಪರ ಕಾರ್ಯಗಳನ್ನು ನೆರವೇರಿಸಿದೆ. ಅನೇಕ ದಕ್ಷ ಅಧ್ಯಕ್ಷರು ಮತ್ತು ಆಡಳಿತಾಧಿಕಾರಿಗಳ ಕಾಲಾವಧಿಯಲ್ಲಿ ಅತ್ಯುತ್ತಮ ಸಾಧನೆಗಳಾಗಿರುವುದು ಕಂಡುಬಂದಿದೆ. ರೈತರ ನಡುವೆ ಉದ್ಭವಿಸುವ ಹಲವಾರು ವಿವಾದಗಳನ್ನು ಬಗೆಹರಿಸುವಲ್ಲಿ ಯಶಸ್ವಿಕಂಡಿದೆ. ವಿಶೇಷ ಅನುದಾನ, ಸಾಲ, ಸಹಾಯಧನಗಳನ್ನು ಪಡೆದುಕೊಂಡು ರೈತರಿಗೆ, ಅದರಲ್ಲೂ ಮುಖ್ಯವಾಗಿ ಸಣ್ಣ ಮತ್ತು ಅಂಚಿನ ರೈತರಿಗೆ ಹೆಚ್ಚಿನ ಅನುಕೂಲ ಮಾಡಿದೆ. ಪರಿಶಿಷ್ಟ ಜಾತಿ ರೈತರಿಗೆ ದೊರೆಯಬೇಕಾದ ಸಕಲ ಸೌಲಭ್ಯಗಳನ್ನು ಒದಗಿಸಿಕೊಟ್ಟಿದೆ. ಗಿರಿಜನ ಕಲ್ಯಾಣ ಯೋಜನೆಗಳ ಮೂಲಕ ಪರಿಶಿಷ್ಟ ಪಂಗಡದ ಕೃಷಿಕರಿಗೆ ಸಹಾಯವನ್ನು ನೀಡಿದೆ. ನೀ.ಬ.ಸ. ಸಂಘಗಳನ್ನು ಸ್ಥಾಪಿಸಿ, ಒಡಂಬಡಿಕೆ ಒಪ್ಪಂದ ಮಾಡಿಸುವಲ್ಲಿ ತನ್ನ ಸತತ ಪ್ರಯತ್ನವನ್ನು ಮುಂದುವರಿಸಿದೆ. ರಾಜ್ಯದಲ್ಲಿಯೇ ಮಾದರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ನೀ.ಬ.ಸ. ಸಂಘಗಳನ್ನು ಇಲ್ಲಿ ಕಾಣುವಂತೆ ಮಾಡಿದೆ.

ಆದರೆ ವಿವಿಧ ಇಲಾಖೆಗಳ ನಡುವೆ ಸಮನ್ವಯತೆಯನ್ನು ಸಾಧಿಸುವಲ್ಲಿ, ಹಣಕಾಸಿನ ವಲಯವಾರು ಹಂಚಿಕೆ ಮಾಡುವಲ್ಲಿ, ರೈತರು ಮತ್ತು ಸಾರ್ವಜನಿಕರಿಗೆ ಉತ್ತರದಾಯಿಯಾಗುವಲ್ಲಿ, ಪಾರದರ್ಶಕತೆಯನ್ನು ಪ್ರದರ್ಶಿಸುವಲ್ಲಿ ಆದ್ಯತೆಗೆ ಅನುಗುಣವಾಗಿ ಕಾಮಗಾರಿಗಳನ್ನು ಕೈಗೊಂಡು ಅವುಗಳ ಗುಣಮಟ್ಟವನ್ನು ಕಾಪಾಡುವಲ್ಲಿ ಇನ್ನಷ್ಟು ಸಾಧನೆ ಮಾಡಿದರೆ ಭದ್ರಾ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಇಡೀ ರಾಜ್ಯದಲ್ಲಿಯೇ ಮಾದರಿ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರವಾಗುವುದರಲ್ಲಿ ಅನುಮಾನವಿಲ್ಲ.

## ೫.೫. ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ ಎದುರಿಸುತ್ತಿರುವ ಸಮಸ್ಯೆಗಳು

ಇತ್ತೀಚಿನ ದಿನಮಾನಗಳಲ್ಲಿ ಕಾಡಾ ಆಡಳಿತಾತ್ಮಕವಾಗಿ ಎದುರಿಸುತ್ತಿರುವ ಪ್ರಮುಖ ಸಮಸ್ಯೆಯೆಂದರೆ ಸಿಬ್ಬಂದಿಯ ಕೊರತೆ. ಅಚ್ಚುಕಟ್ಟು ಪ್ರದೇಶ ವಿಶಾಲವಾಗಿದ್ದು ಅದಕ್ಕೆ ಅನುಗುಣವಾಗಿ ನೀರುಗಂಟಿಗಳು, ಕ್ಷೇತ್ರಾಧಿಕಾರಿಗಳು ಮತ್ತು ನೀರಾವರಿ ಇಂಜಿನಿಯರ್‌ಗಳು ಇಲ್ಲ. ಇದರಿಂದ ನೀರಾವರಿ ನಿರ್ವಹಣೆ ಸುಗಮವಾಗಿ ಸಾಗುತ್ತಿಲ್ಲ. ರೈತರು ತಮಗೆ ಇಚ್ಛೆ ಬಂದಂತೆ ನೀರನ್ನು ಅಪಬಳಕೆ ಮಾಡಲು ಅವಕಾಶವಾಗಿದೆ. ಮುಖ್ಯವಾಗಿ ಅನಧಿಕೃತ ಮತ್ತು ಅಕ್ರಮ ನೀರು ಬಳಕೆ ಹೆಚ್ಚು. ಪ್ರಸ್ತುತ ಕಾಡಾದಲ್ಲಿ ಮಂಜೂರಾದ ೩೮ ಹುದ್ದೆಗಳಲ್ಲಿ ೧೪ ಹುದ್ದೆಗಳು ಖಾಲಿಯಿವೆ.

ಕಾಡಾದಲ್ಲಿ ವಿವಿಧ ಇಲಾಖೆಗಳಿಂದ ಸಿಬ್ಬಂದಿಗಳನ್ನು ನಿಯೋಜಿಸಲಾಗಿರುತ್ತದೆ. ಅವರು ತಮ್ಮ ತಮ್ಮ ಇಲಾಖೆಗಳಿಗೆ ಮಾತ್ರ ನಿಷ್ಠೆಯಿಂದ ಇದ್ದು, ತಮ್ಮ ಇಲಾಖೆಯೇ ಶ್ರೇಷ್ಠ ಎನ್ನುವ ಪ್ರತಿಷ್ಠೆ ಹೊಂದಿರುತ್ತಾರೆ. ಇಲ್ಲಿ ಅನೇಕ ಕಾರ್ಯಗಳು ಪರಸ್ಪರ ಸಹಯೋಗದಲ್ಲಿ ನಡೆಯಬೇಕಾಗಿರುತ್ತದೆ. ಆದರೆ ಅಧಿಕಾರಿ ವರ್ಗದವರ ಏಕಮುಖಿ ಧೋರಣೆ ಮತ್ತು ಅಸಹಕಾರ ಧೋರಣೆಯಿಂದ ಯಾವುದೇ ಕಾರ್ಯ ನಿಗದಿತ ಅವಧಿಯಲ್ಲಿ ಪೂರ್ಣಗೊಳ್ಳುತ್ತಿಲ್ಲ. ಹೊಣೆಗಾರಿಕೆಯನ್ನು ಯಾರೂ ಹೊತ್ತುಕೊಳ್ಳುವ

ಸ್ಥಿತಿಯಲ್ಲಿರುವುದಿಲ್ಲ. ಇದರಿಂದ ನಿರೀಕ್ಷಿತ ಕಾರ್ಯಗಳು ನಿಗದಿತ ಕಾಲದಲ್ಲಿ ಪರಿಪೂರ್ಣಗೊಳ್ಳುವಲ್ಲಿ ವಿಳಂಬವಾಗುತ್ತಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ದಕ್ಷತೆಯೂ ಕಡಿಮೆಯಾಗಿ ಕಾಮಗಾರಿಯ / ಕರ್ತವ್ಯದ ಗುಣಮಟ್ಟ ಅತಿ ಕಡಿಮೆಯಾಗುವ ಸಾಧ್ಯತೆಯಿರುತ್ತದೆ.

ಕಾಡಾಕ್ಕೆ ನಿಯೋಜನೆಗೊಳ್ಳುವ ವಿವಿಧ ಇಲಾಖೆಯ ಅಧಿಕಾರ ವರ್ಗದವರು ಸದಾ ತಮ್ಮ ಮಾತೃ ಇಲಾಖೆಗೆ ವರ್ಗಾವಣೆಯಾಗಲು ಬಯಸುತ್ತಾರೆ. ಇದರಿಂದ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಧಕ್ಕೆ ಉಂಟಾಗುತ್ತದೆ. ಹೊಸದಾಗಿ ಬರುವ ಅಧಿಕಾರಿ ಇಲ್ಲಿನ ಸ್ಥಿತಿಗತಿಗಳಿಗೆ ಹೊಂದಿಕೊಳ್ಳಲು ಹೆಚ್ಚು ಕಾಲಾವಕಾಶ ಬೇಕಾಗುತ್ತದೆ. ಹೀಗೆ ಈ ವರ್ಗಾವಣೆಯು ಕಾಡಾದ ಒಂದು ಸಮಸ್ಯೆಯಾಗಿದೆ.

ಆಯಾ ಇಲಾಖೆಗಳಲ್ಲಿ ಶಿಕ್ಷೆಗೆ ಗುರಿಯಾದ, ಅಧಿಕಾರಿಗಳನ್ನು ಇಲ್ಲಿಗೆ ನಿಯೋಜಿಸಲಾಗುತ್ತದೆ ಎನ್ನುವ ಆರೋಪಗಳು ಕೇಳಿಬರುತ್ತಿವೆ. ಇದಲ್ಲದೆ ನಿವೃತ್ತಿಯ ಅಂಚಿಗೆ ಬಂದ ಅಧಿಕಾರಗಳನ್ನು ಕಾಡಾಗೆ ಹೆಚ್ಚಾಗಿ ನಿಯೋಜಿಸಲಾಗುತ್ತಿದೆ. ಅಚ್ಚುಕಟ್ಟು ಪ್ರದೇಶದಲ್ಲಿ ಉಸ್ತುವಾರಿ ಕಾರ್ಯಗಳಲ್ಲಿ ತೊಡಗ ಬೇಕಾದುದರಿಂದ ನಿವೃತ್ತಿಯ ಅಂಚಿನವರನ್ನು ನೇಮಿಸಿದರೆ ಸಮರ್ಥ ಕಾರ್ಯ ನಿರ್ವಹಣೆಗೆ ತೊಡಕಾಗುತ್ತದೆ.

ಇತ್ತೀಚಿನ ವರ್ಷಗಳಲ್ಲಿ ಕಾಡಾಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಬರುತ್ತಿರುವ ಅನುದಾನ ಮತ್ತು ಸಾಲಗಳ ಪ್ರಮಾಣ ಕಡಿಮೆಯಾಗುತ್ತಿರುವುದು ಅಂಕಿಅಂಶಗಳನ್ನು ಅವಲೋಕಿಸಿದಾಗ ತಿಳಿದುಬರುತ್ತದೆ. ಬದಲಾಗಿ ಭಾರಿ ಮತ್ತು ಮಾಧ್ಯಮ ನೀರಾವರಿ ಇಲಾಖೆ ಹೊಸ ಹೊಸ ಯೋಜನೆಗಳಿಗೆ ಹೆಚ್ಚಿನ ಹಣಕಾಸು ತೊಡಗಿಸಲು ಮುಂದಾಗಿದೆ. ಅದು ಈಗಾಗಲೇ ನಿರ್ಮಾಣವಾಗಿರುವ ಅಚ್ಚುಕಟ್ಟು ಪ್ರದೇಶಗಳ ಅಭಿವೃದ್ಧಿ ಹೆಚ್ಚಿನ ಹಣಕಾಸನ್ನು ತೊಡಗಿಸದೇ ಇರುವುದು ಅನೇಕ ಸಮಸ್ಯೆಗಳಿಗೆ ಕಾರಣವಾಗಿದೆ. ಕಾಲುವೆಗಳಿಗೆ ಹಾನಿ, ನೀರಿನ ಸೋರಿಕೆ, ಹೂಳು ತುಂಬುವಿಕೆ, ಬಸಿಗಾಲುವೆಗಳು ಮುಚ್ಚಿಹೋಗುವಿಕೆ, ತೂಬುಗಳಿಗೆ ಹಾನಿ, ನಿಯಂತ್ರಕಗಳಿಲ್ಲದಿರುವಿಕೆ ಇತ್ಯಾದಿಗಳಿಂದ ಮೇಲ್ತುದಿ ರೈತರ ಭೂಮಿ ಜೌಗು, ಸವಳು ಮತ್ತು ಕ್ಷಾರತೆಗೆ ತುತ್ತಾದರೆ, ಕೆಳತುದಿ ರೈತರಿಗೆ ನೀರೇ ದೊರೆಯದಂಥ ಪರಿಸ್ಥಿತಿ ಉದ್ಭವಿಸಿದೆ.

ಕಾಡಾಗೆ ದೊರೆಯಬೇಕಾದ ಹಣ ಸಕಾಲದಲ್ಲಿ ಸಿಗದ ಕಾರಣ ಅಚ್ಚುಕಟ್ಟು ಪ್ರದೇಶದಲ್ಲಿ ನೀರಾವರಿ ನಿರ್ವಹಣೆ ಮತ್ತು ಕಾರ್ಯಾಚರಣೆ ದುಸ್ಥಿತಿಗೆ ಸಿಲುಕುವ ಸ್ಥಿತಿ ತಲುಪಿದೆ. ವರ್ಷದ ಕೊನೆಯಲ್ಲಿ ಹಣ ದೊರೆತರೆ ಕಳಪೆ ಕಾಮಗಾರಿಗೆ ಅವಕಾಶವಾಗುತ್ತದೆ. ಇದರಿಂದ ನಿಗದಿತ ಗುಣಮಟ್ಟ ಕಾಯ್ದುಕೊಳ್ಳಲು ಸಾಧ್ಯವಾಗುವುದಿಲ್ಲ. ಕೆಲ ಸಂದರ್ಭಗಳಲ್ಲಿ ನಿಗದಿತ ಅವಧಿಯಲ್ಲಿ ಹಣ ವ್ಯಯವಾಗದೆ ಸರಕಾರಕ್ಕೆ ವಾಪಸ್ಸಾಗುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ಹಣಕಾಸಿನ ಬೇಡಿಕೆ ಮತ್ತು ನೀಡಿಕೆಗಳ ಅಂತರ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಾಗುತ್ತಿದೆ. ಇದರಿಂದ ಯೋಜನೆಗಳಿಗೆ ತಕ್ಕ ಹಾಗೆ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುವುದಿಲ್ಲ. ಆದ್ಯತೆಗೆ ಅನುಗುಣವಾಗಿ ಹಣಕಾಸನ್ನು ವಿವಿಧ ಬಾಬ್ತುಗಳಿಗೆ ಹಂಚಿಕೆ ಮಾಡಲು ಸಾಧ್ಯವಾಗುವುದಿಲ್ಲ. ಅಲ್ಲದೇ ಕಾಮಗಾರಿಗಳೂ ನಿರ್ದಿಷ್ಟ ಅವಧಿಯಲ್ಲಿ ಪೂರ್ಣ

ಗೊಳ್ಳಲು ಸಾಧ್ಯವಾಗುತ್ತಿಲ್ಲ. ನೀರಿನ ದರವನ್ನು ರೈತರಿಂದ ನೇರವಾಗಿ ಕಾಡಾ ವಸೂಲಿ ಮಾಡುವ ಅಧಿಕಾರ ಹೊಂದದೇ ಇರುವುದು ಹಣಕಾಸಿನ ಬಿಕ್ಕಟ್ಟಿಗೆ ಮತ್ತೊಂದು ಕಾರಣವಾಗಿದೆ. ರೈತರ ಜಮೀನುಗಳಿಗೆ ನೀರು ಪೂರೈಕೆ ಮಾಡುವ ಕಾಡಾದಿಂದ ನೀರು ದರ ಸಂಗ್ರಹಿಸುವ ಅಧಿಕಾರವನ್ನು ಹೊಂದಿರಬೇಕಿತ್ತು. ಆದರೆ ಇಂದು ಒಡಂಬಡಿಕೆ ಒಪ್ಪಂದವಾಗಿರುವ ನೀ.ಬ.ಸ. ಸಂಘಗಳನ್ನು ಹೊರತುಪಡಿಸಿದರೆ ಉಳಿದಂತೆ ನೀರುದರವನ್ನು ಕಂದಾಯ ಇಲಾಖೆಯೇ ವಸೂಲಿ ಮಾಡುತ್ತಿದೆ. ನೀರು ಪೂರೈಕೆ ಮಾಡುವ ಸಂಸ್ಥೆ ಒಂದಾದರೆ ನೀರುದರ ವಸೂಲಿ ಮಾಡುವ ಸಂಸ್ಥೆ ಇನ್ನೊಂದಾಗಿರುವುದರಿಂದ ಆದಾಯ ಮತ್ತು ವೆಚ್ಚಗಳ ನಡುವೆ ಯಾವ ಸಂಬಂಧವೂ ಇಲ್ಲದೆ ಸಮಸ್ಯೆ ತೀವ್ರವಾಗಿದೆ.

ಇತರ ಕಾಡಾಗಳಂತೆ ಭದ್ರಾ ಕಾಡಾದಲ್ಲಿಯೂ ಕಾನೂನನ್ನು ನಿಯಮ ನಿಬಂಧನೆಗಳನ್ನು ಉಲ್ಲಂಘಿಸುವವರ ವಿರುದ್ಧ ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳದೇ ಇರುವುದು ಸಾಮಾನ್ಯವಾಗಿದೆ, ಇದರಿಂದ ಅನಧಿಕೃತ ಸಾಗುವಳಿ ಭೂಮಿಗೆ ನೀರನ್ನು ಬಳಕೆ ಮಾಡಿಕೊಳ್ಳುತ್ತಿರುವುದು, ಕಾಲುವೆಗಳಿಂದ ನೇರವಾಗಿ ಪಂಪ್‌ಗಳ ಮುಖೇನ ಅಕ್ರಮವಾಗಿ ನೀರು ಎತ್ತುವಳಿ ಮಾಡುತ್ತಿರುವುದು ದಿನೇ ದಿನೇ ಹೆಚ್ಚಾಗುತ್ತಿದೆ. ಪರಿಣಾಮವಾಗಿ ಅಧಿಕೃತ ರೈತರಿಗೆ ನೀರಿನ ಕೊರತೆಯುಂಟಾಗುತ್ತಿದೆ. ಅದರಲ್ಲೂ ಮುಖ್ಯವಾಗಿ ಕೆಳತುದಿ ರೈತರಿಗೆ ವರ್ಷ ಪೂರ್ತಿ ನೀರು ದೊರೆಯದ ಸ್ಥಿತಿ ನಿರ್ಮಾಣವಾಗಿದೆ. ಈ ದಿಶೆಯಲ್ಲಿ ಕಾಡಾ ಯಾವ ಕ್ರಮವನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಹಲವಾರು ಸಂದರ್ಭಗಳಲ್ಲಿ ಅಕ್ರಮ ಪಂಪ್‌ಸೆಟ್ಟುದಾರರನ್ನು ತೆರವುಗೊಳಿಸುವ ಕಾರ್ಯಾಚರಣೆ ಮಾಡಿದೆಯಾದರೂ ಅದು ಪೂರ್ಣವಾಗಿ ಸಾಧ್ಯವಾಗಿಲ್ಲ. ಅಲ್ಪ ಸಮಯದಲ್ಲಿಯೇ ಅಕ್ರಮ ಎತ್ತುವಳಿ ಆರಂಭಗೊಳ್ಳುತ್ತದೆ. ಇದರಿಂದ ಕೆಳತುದಿ ಮತ್ತು ಮೇಲ್ತುದಿ ರೈತರ ನಡುವೆ ತಿಕ್ಕಾಟ ಘರ್ಷಣೆಗಳಿಗೆ ಕಾರಣವಾಗುತ್ತಿದೆ.

ನೀರಿನ ಪೂರೈಕೆ ಕಡಿಮೆಯಾದಂತೆ ನೀರಿಗಾಗಿ ಬಾಹ್ಯ ಮತ್ತು ಆಂತರಿಕ ಒತ್ತಡಗಳು ಅಧಿಕವಾಗುತ್ತದೆ. ನೀರಾವರಿ ನಿರ್ವಹಣೆಯಲ್ಲಿನ ಸಮಸ್ಯೆಗಳನ್ನು ಪರಿಹಾರ ಮಾಡುವಲ್ಲಿ ರಾಜಕೀಯ ಪ್ರವೇಶ ಅಡ್ಡಿಯಾಗುತ್ತದೆ. ಎಲ್ಲರ ಹಿತಾಸಕ್ತಿಯನ್ನು ನ್ಯಾಯಬದ್ಧವಾಗಿ ಕಾಪಾಡಬೇಕಾದ ಕಾಡಾ ರಾಜಕೀಯ ಕೈಗೊಂಬೆಯಾಗುವ ಸಂಭವವಿರುತ್ತದೆ. ಪ್ರಾದೇಶಿಕ ಸಮತೋಲನ ಕಾಯ್ದುಕೊಳ್ಳುವಲ್ಲಿ ರಾಜಕೀಯ ಮಧ್ಯ ಪ್ರವೇಶ ತೊಡಕಾಗಿರುವ ಸಂದರ್ಭಗಳೇ ಹೆಚ್ಚು. ಉದಾಹರಣೆಗೆ ಅನಧಿಕೃತ ಮತ್ತು ಅಕ್ರಮ ನೀರು ಬಳಕೆಯನ್ನು ತಪ್ಪಿಸಲು ಕಾಡಾ ಮುಂದಾದರೂ ರಾಜಕೀಯ ಒತ್ತಡದಿಂದಾಗಿ ಅದು ಒಂದು ಪ್ರಹಸನ / ನಾಟಕದಂತಾಗಿ ಮತ್ತೆ ಯಥಾಸ್ಥಿತಿ ತಲುಪುತ್ತದೆ.

ನೀರಾವರಿ ನಿರ್ವಹಣೆ ಮತ್ತು ನೀರು ಸಲಹಾ ಸಮಿತಿಯು ಅಧಿಕಾರಿಗಳೊಂದಿಗೆ, ಆಯಾ ಪ್ರದೇಶದ ಜನಪ್ರತಿನಿಧಿಗಳನ್ನು ಒಳಗೊಂಡಿರುತ್ತದೆ. ಆಯಾ ಪ್ರದೇಶದ ಜನಪ್ರತಿನಿಧಿಗಳು ತಮ್ಮ ಪ್ರದೇಶದ ಹಿತ ಕಾಯುವಿಕೆಗೆ ಹೆಚ್ಚು ಗಮನ ನೀಡುವುದರಿಂದ ಎಲ್ಲರ ಬಯಕೆಗಳನ್ನು ಈಡೇರಿಸುವ

ಸ್ಥಿತಿ ಕಾಡಾಗೆ ಇರುವುದಿಲ್ಲ. ಅನೇಕ ತಜ್ಞರು ಬುದ್ಧಿಜೀವಿಗಳು ಸಲಹಾ ಸಮಿತಿಯಲ್ಲಿದ್ದರೂ ಅವರ ಮಾರ್ಗದರ್ಶನ ಸಲಹೆಗಳಿಗೆ ಬೆಲೆಯೇ ಇರುವುದಿಲ್ಲ. ಜಲಾಶಯದಲ್ಲಿನ ನೀರಿನ ಪ್ರಮಾಣ ಮತ್ತು ಬೆಳೆಯ ಪ್ರದೇಶದ ಪೂರ್ಣ ಜ್ಞಾನವಿರುವ ತಾಂತ್ರಿಕ ತಜ್ಞರ ಅಭಿಪ್ರಾಯಗಳಿಗೂ ಸಭೆಗಳಲ್ಲಿ ಮನ್ನಣೆ ದೊರೆಯುವುದಿಲ್ಲ. ಇದರಿಂದ ಯಾವ ಸಮಸ್ಯೆಯೂ ಬಗೆಹರಿಯದೇ ಸಮಸ್ಯೆಗಳು ಇನ್ನಷ್ಟು ಉಲ್ಬಣ ಗೊಳ್ಳಲು ಅವಕಾಶವಾಗುತ್ತದೆ. ಭದ್ರಾ ಕಾಡಾದಲ್ಲಿ ಇತ್ತೀಚೆಗೆ ನೀರಾವರಿ ನಿರ್ವಹಣೆ ಮತ್ತು ನೀರಾವರಿ ಸಲಹಾ ಸಮಿತಿ ಸಭೆ ಸೇರಿದಾಗ ಕೆಳತುದಿ ಮತ್ತು ಮೇಲ್ತುದಿ ರೈತರ ನಡುವೆ ಸಂಘರ್ಷ ಏರ್ಪಟ್ಟು, ಸಭೆಗಳನ್ನು ಭದ್ರಾ ಕಾಡಾದಿಂದ ಬೆಂಗಳೂರಿಗೆ ವರ್ಗಾಯಿಸಿರುವ ಉದಾಹರಣೆಗಳು ಸಹ ಇವೆ.

ಕರ್ನಾಟಕದಲ್ಲಿ ಜೂನ್ ೨೦೦೦ ರಿಂದ ನೀರಾವರಿ ಕಾಯ್ದೆಗೆ ತಿದ್ದುಪಡಿ ತಂದು ಎಲ್ಲ ಅಚ್ಚುಕಟ್ಟು ಪ್ರದೇಶಗಳಲ್ಲಿ ಸಹಕಾರ ಸಂಘಗಳ ಕಾಯ್ದೆಯಂತೆ ನೀ.ಬ.ಸ. ಸಂಘಗಳನ್ನು ಸ್ಥಾಪಿಸಿ, ಆ ಮೂಲಕ ನೀರಾವರಿ ನಿರ್ವಹಣೆ ಸುಗಮಗೊಳಿಸಲು ಪ್ರಯತ್ನಿಸಲಾಗಿದೆ. ಈ ಸಂಘಗಳನ್ನು ಸ್ಥಾಪಿಸುವ ಕರ್ತೃವಾಗಿ ಕಾಡಾ ಕಾರ್ಯನಿರ್ವಹಿಸುತ್ತಿದೆ. ಭದ್ರಾ ಕಾಡಾದಲ್ಲಿ ೨೯೮ ನೀ.ಬ.ಸ. ಸಂಘಗಳನ್ನು ಸ್ಥಾಪಿಸುವ ಗುರಿಯನ್ನು ಹೊಂದಿದ್ದು, ಇಲ್ಲಿಯ ತನಕ ೨೯೦ ಸಂಘಗಳನ್ನು ಸ್ಥಾಪಿಸಲಾಗಿದೆ. ಬರೀ ಸಂಘಗಳ ಸ್ಥಾಪನೆಯಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಈ ಸಂಘಗಳು ಜಲಸಂಪನ್ಮೂಲ ಇಲಾಖೆಯೊಂದಿಗೆ ಎಂ.ಓ.ಯು. ಮಾಡಿಕೊಂಡರೆ ಮಾತ್ರ ಸಂಘಕ್ಕೆ ಅಧಿಕಾರ ವರ್ಗಾವಣೆಗೊಳ್ಳುತ್ತದೆ. ಇಲ್ಲಿಯತನಕ ೧೦೮ ಸಂಘಗಳು ಮಾತ್ರ ಎಂ.ಓ.ಯು. ಮಾಡಿಕೊಂಡಿದ್ದು, ಇದು ಶೇ. ೩೫ ಕ್ಕಿಂತ ಕಡಿಮೆಯಾಗಿದೆ. ಇದು ಕಾಡಾ ನೀ.ಬ.ಸ. ಸಂಘಗಳಿಗೆ ಹೆಚ್ಚು ಆಸಕ್ತಿಯನ್ನು ವಹಿಸುತ್ತಿಲ್ಲ ಎಂಬ ಅಂಶವನ್ನು ತಿಳಿಸುತ್ತದೆ. ಅಂದರೆ ಸಂಘಗಳನ್ನು ಸದೃಢಗೊಳಿಸುವಲ್ಲಿ ಕಾಡಾ ನಿರೀಕ್ಷಿತ ಯಶಸ್ಸನ್ನು ಸಾಧಿಸಿಲ್ಲ ಎಂದು ಮನವರಿಕೆಯಾಗುತ್ತದೆ. ಸಂಘದ ವ್ಯಾಪ್ತಿಯ ಎಲ್ಲ ನೀರು ಬಳಕೆದಾರರಿಗೆ ಸಹಕಾರ ಸಂಘಗಳ ಮಹತ್ವವನ್ನು ತಿಳಿಸುವಲ್ಲಿ, ತರಬೇತಿ ನೀಡುವಲ್ಲಿ, ಜಾಗೃತಗೊಳಿಸುವಲ್ಲಿ ಕಾಡಾ ನಿರೀಕ್ಷಿತ ಸಫಲತೆಯನ್ನು ಸಾಧಿಸುವಲ್ಲಿ ಯಶಸ್ವಿಯಾಗಿಲ್ಲ.

ನೀ.ಬ.ಸ. ಸಂಘಗಳಿಗೆ (ಎಂ.ಓ.ಯು.) ಅಧಿಕಾರ ಹಸ್ತಾಂತರ ಮಾಡುವಲ್ಲಿ ಮೀನಾವೇಷ ಎಣಿಸುತ್ತಿದೆ. ನೀರು ದರ ವಸೂಲಿ ಮಾಡುವ ಅಧಿಕಾರವನ್ನು ಶೇ. ೯೫ ರಷ್ಟು ಸಂಘಗಳಿಗೆ ಇನ್ನು ನೀಡಿಲ್ಲ. ಒಡಂಬಡಿಕೆ ಒಪ್ಪಂದದಂತೆ ಸಂಘದ ವ್ಯಾಪ್ತಿಯ ಎಲ್ಲಾ ನೀರಾವರಿ ವ್ಯವಸ್ಥೆಯನ್ನು ಏಕಕಾಲದಲ್ಲಿ ದುರಸ್ತಿಗೊಳಿಸಿ ಅವುಗಳನ್ನು ನೀ.ಬ.ಸ. ಸಂಘಗಳಿಗೆ ಕೊಡಬೇಕು. ಆದರೆ ಅದು ಸಾಧ್ಯವಾಗಿಲ್ಲ. ಇದರಿಂದ ಸಂಘಗಳು ಹಣಕಾಸಿನ ಅಧಿಕಾರಕ್ಕೆ ಸ್ವಾಯತ್ತತೆಯಿಲ್ಲದೆ ಸ್ಥಗಿತ ಸ್ಥಿತಿಯಲ್ಲಿವೆ. ಹಲವಾರು ಕಾಡಾ ಅಧಿಕಾರಿಗಳು ತಮ್ಮ ಅಧಿಕಾರ ನಿಯಂತ್ರಣ ತಪ್ಪಿ ಹೋಗುತ್ತದೆ ಎಂದು ಈ ನಿಟ್ಟಿನಲ್ಲಿ ಯಾವುದೇ ಉಪಯುಕ್ತ ಮಾರ್ಗವನ್ನು ಸೂಚಿಸಿಲ್ಲ ಎಂದು ರೈತರು ಅನುಮಾನ ವ್ಯಕ್ತಪಡಿಸುತ್ತಾರೆ.

ಸಂಘಗಳ ಸ್ಥಾಪನೆ ಮತ್ತು ಒಡಂಬಡಿಕೆ ಒಪ್ಪಂದವು ಹಲವಾರು ನಿಯಮಗಳಿಗೆ ಗುರಿಯಾಗಿರುವುದು ಅದರ ಕಠಿಣತೆಯನ್ನು ಸೂಚಿಸುತ್ತದೆ. ಸರ್ಕಾರದಿಂದ ದೊರೆಯುವ ಸೌಲಭ್ಯಗಳ ಮಾಹಿತಿ ಸಂಘಗಳಿಗೆ ದೊರೆಯುತ್ತಿಲ್ಲ. ಸಂಘಗಳು ಲೆಕ್ಕ ಪರಿಶೋಧನೆ ಮಾಡುವಲ್ಲಿ ವಿವಿಧ ಲೆಕ್ಕಗಳನ್ನು ನಿರ್ವಹಿಸುವಲ್ಲಿ ಕಾಡಾ ಸಮಂಜಸ ತರಬೇತಿ, ಸಲಹೆಗಳನ್ನು ನೀಡುತ್ತಿಲ್ಲ ಎನ್ನುವ ಆರೋಪ ರೈತರಿಂದ ಕೇಳಿಬರುತ್ತಿದೆ.

ಅಚ್ಚುಕಟ್ಟು ಪ್ರದೇಶದಲ್ಲಿ ನೀರಾವರಿ ನಿರ್ವಹಣೆ ಅಷ್ಟು ಸುಲಭದ ಮಾತಲ್ಲ. ನೀರು ನಿರ್ವಹಣೆ ಅನೇಕ ತಾಂತ್ರಿಕ ಸಂಗತಿಗಳಿಂದ ನೆರವೇರುವ ಒಂದು ಕಾರ್ಯವಾಗಿರುತ್ತದೆ. ಈ ತುಂತ್ರಿಕ ಕುಶಲತೆ ಹೊಂದಿರುವವರು ಕಾಡಾದಲ್ಲಿ ಇದ್ದರೆ ನೀರಾವರಿ ನಿರ್ವಹಣೆ ಸುಸೂತ್ರವಾಗಿರುತ್ತದೆ. ಆದರೆ ಇಂತಹ ತಾಂತ್ರಿಕ ಕುಶಲತೆ ಹೊಂದಿರುವವರು ಅತಿ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇದು ಕಾಡಾದ ಕೆಲಸ ಕಾರ್ಯಗಳಿಗೆ ತೊಡಕಾಗುತ್ತಿದೆ. ವಾರಾಬಂದಿ ಪಾಲನೆಯನ್ನು ಕೈಗೊಳ್ಳಲು ಅಗತ್ಯ ಸಿಬ್ಬಂದಿ ಬೇಕಾಗುತ್ತದೆ. ಮುಖ್ಯವಾಗಿ ನೀರುಗಂಟಿಗಳು ಅವಶ್ಯಕ. ಇತ್ತೀಚಿಗೆ ನೀರುಗಂಟಿಗಳ ನೇಮಕವಾಗುತ್ತಿಲ್ಲದಿರುವುದು ಕಂಡುಬರುತ್ತದೆ. ನೇಮಕವಾಗಿರುವವರನ್ನು ದಿನಗೂಲಿ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ. ಕೆಲಸದ ಅಭದ್ರತೆಯಿಂದ ದಿನಗೂಲಿ ನೌಕರರು ಕಟ್ಟುನಿಟ್ಟಾಗಿ ನೀರಾವರಿ ನಿರ್ವಹಣೆ ಕೈಗೊಳ್ಳಲಾರರು, ಜೊತೆಗೆ ಪ್ರದೇಶಕ್ಕೆ ತಕ್ಕ ಹಾಗೆ ಕ್ಷೇತ್ರಾಧಿಕಾರಿಗಳು ಲಭ್ಯವಿಲ್ಲದ ಕಾರಣ ಯಾವ ಕಾರ್ಯವೂ ಸಂಪೂರ್ಣವಾಗುತ್ತಿಲ್ಲ. ಹೀಗೆ ನೀರಾವರಿ ಸಿಬ್ಬಂದಿ ಕಡಿಮೆಯಾದಂತೆ ಉಸ್ತುವರಿ ಕಡಿಮೆಯಾಗಿ ಕಾಲುವೆಗಳ ಒತ್ತುವರಿ, ಆಯಕಟ್ಟಿನ ರಸ್ತೆಗಳ ಒತ್ತುವರಿ, ತೂಬುಗಳಿಗೆ ಹಾನಿ ಮಾಡುವಿಕೆ, ಅಕ್ರಮ ನೀರು ಎತ್ತುವಳಿ ಯಾವ ಅಡೆತಡೆಯಿಲ್ಲದೆ ನಡೆಯುತ್ತಿದೆ. ಅಂತಿಮವಾಗಿ ಅಕ್ರಮ ಸಕ್ರಮಗಳ ನಡುವಿನ ಅಂತರವೇ ನಶಿಸಿ ಹೋಗಿ ಬಳಕೆದಾರರಲ್ಲಿ ಉದಾಸೀನತೆ ನಿಯಮಗಳ ಉಲ್ಲಂಘನೆಗೆ ರಹದಾರಿಯಾಗುತ್ತದೆ.

ಒಟ್ಟಾರೆ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಿಗಳ ಕಾರ್ಯನಿರ್ವಹಣೆಯನ್ನು ಗಮನಿಸಿದರೆ ಅದರ ಆಡಳಿತಾತ್ಮಕ ರಚನೆಯಲ್ಲಿ ಹಲವಾರು ದೋಷಗಳಿರುವುದು ಕಂಡು ಬರುತ್ತದೆ. ನೀರಾವರಿ ನಿರ್ವಹಣೆಯಲ್ಲಿ ತಾನು ಇಟ್ಟುಕೊಂಡು ಉದ್ದೇಶಗಳನ್ನು ಈಡೇರಿಸುವಲ್ಲಿ ಸಫಲವಾಗಿಲ್ಲ. ಈ ಕಾರಣದಿಂದಲೇ ನೀರು ಬಳಕೆದಾರರ ಸಹಕಾರ ಸಂಘಗಳ ಸ್ಥಾಪನೆಯ ಅಗತ್ಯವುಂಟಾಗಿದೆ. ಈ ಸಂಘಗಳ ಸ್ಥಾಪನೆ ಮತ್ತು ಮುಂದುವರಿಕೆಯ ಜವಾಬ್ದಾರಿ ಕಾಡಾದ್ದೇ ಆಗಿದ್ದರೂ ಅದು ನಿರೀಕ್ಷಿಸಿದ ಮಟ್ಟದಲ್ಲಿ ಸ್ಪಂದಿಸದೇ ಇರುವುದನ್ನು ಕಾಣಬಹುದಾಗಿದೆ ನಿಯಮಗಳ ಪಾಲನೆಯಲ್ಲಿ, ಅಚ್ಚುಕಟ್ಟುಪ್ರದೇಶದ ನೀರಾವರಿ ಜಾಲವನ್ನು ಸುಸ್ಥಿತಿಯಲ್ಲಿಡುವಲ್ಲಿ ಯಶಸ್ವಿಯಾಗಿಲ್ಲ. ಹಣಕಾಸಿನ ಕೊರತೆಯಿಂದ, ವಿವಿಧ ಇಲಾಖೆಗಳ ಅಸಹಕಾರದಿಂದ ಕಾಡಾಗೆ ಅಭಿವೃದ್ಧಿಪರ ಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ.

## ೫.೬. ಕಾಡಾದ ಉತ್ತಮ ಕಾರ್ಯ ನಿರ್ವಹಣೆಗೆ ಕೆಲ ಸಲಹೆ-ಸೂಚನೆಗಳು

ಆಡಳಿತಕ್ಕೆ ಅನುಕೂಲವಾಗುವಂತೆ ಅಗತ್ಯ ಸಂಖ್ಯೆಯ ಸಿಬ್ಬಂದಿಯನ್ನು ನಿಯೋಜನೆಗೊಳಿಸಬೇಕು. ಜೊತೆಗೆ ನೀರಾವರಿ ನಿರ್ವಹಣೆಯಲ್ಲಿ ಪರಿಣಿತ ಸಿಬ್ಬಂದಿ/ಅಧಿಕಾರಿಗಳನ್ನು ಅವಶ್ಯಕತೆಗೆ ತಕ್ಕಷ್ಟು ನಿಯೋಜಿಸಬೇಕು. ಸಿಬ್ಬಂದಿಯ ವರ್ಗಾವಣೆಯನ್ನು ತಗ್ಗಿಸಿ ಕಾಡಾಕ್ಕೆ ಒಂದು ಪ್ರತ್ಯೇಕ ಕುಶಲತೆಯ ಅಧಿಕಾರಿಗಳನ್ನು ನೇಮಕ ಮಾಡಬೇಕು. ನಿಯೋಜನೆಯ ಬದಲು ಕಾಡಾಕ್ಕಾಗಿಯೇ ಎಲ್ಲ ವಿಷಯಗಳಲ್ಲಿ ತಜ್ಞರೆನಿಸಿದವರನ್ನು ಖಾಯಂ ಆಗಿ ನೇಮಕ ಮಾಡುವುದು ಉತ್ತಮ. ಇದರೊಂದಿಗೆ ಸಮರ್ಥ ದಕ್ಷ ಆಡಳಿತಾಧಿಕಾರಿಗಳನ್ನು ನೇಮಕ ಮಾಡಬೇಕು. ನೀರಾವರಿ ತಜ್ಞರನ್ನೇ ನೇಮಿಸಿದರೆ ಒಳಿತು.

ಕಾಡಾ ಕೈಗೊಳ್ಳುವ ಕ್ರಿಯಾ ಯೋಜನೆಗೆ ತಕ್ಕಷ್ಟು ಹಣಕಾಸನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮಂಜೂರು ಮಾಡಬೇಕು ಹಾಗೂ ಸಮಯಕ್ಕೆ ಸರಿಯಾಗಿ ಹಣ ಬಿಡುಗಡೆಯಾಗಬೇಕು. ನೀರಿನ ದರವನ್ನು ಕಡ್ಡಾಯವಾಗಿ ವಸೂಲಿ ಮಾಡುವ ಅಧಿಕಾರ ಕಾಡಾಕ್ಕೆ ವರ್ಗಾವಣೆಯಾಗಬೇಕು. ಮುಖ್ಯವಾಗಿ ನೀರು ದರ ಕನಿಷ್ಠ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ಸರಿಸಮವಾಗಿ ನಿಗದಿಯಾಗಬೇಕು. ಈಗಿನ ಕಂದಾಯ ಇಲಾಖೆಯನ್ನು ನೀರು ದರ ವಸೂಲಿಯಿಂದ ಮುಕ್ತಗೊಳಿಸಿ, ಕಾಡಾ ಅಥವಾ ನೀ.ಬ.ಸ. ಸಂಘಗಳಿಗೆ ಅಧಿಕಾರ ಹಸ್ತಾಂತರಿಸಬೇಕು.

ನೀರಾವರಿ ಕಾಯಿದೆ, ನೀರು ದರ ಕಾಯಿದೆ, ಕಾಡಾ ಕಾಯಿದೆ ಹಾಗೂ ಸಹಕಾರ ಸಂಘಗಳ ಕಾಯಿದೆಯಲ್ಲಿ ಕಟ್ಟುನಿಟ್ಟಿನ ನಿಯಮಗಳಿದ್ದರೂ ಅವುಗಳ ಪಾಲನೆ ಮಾಡುವಂತೆ ಅಧಿಕಾರಿಗಳಿಗೆ ಆದೇಶವಾಗಬೇಕು. ಪಾಲಿಸದ ಅಧಿಕಾರಿಗಳ ವಿರುದ್ಧ ಸೂಕ್ತ ಕ್ರಮ ತೆಗೆದುಕೊಳ್ಳುವ ನಿಯಮಗಳನ್ನು ಸರಕಾರ ರೂಪಿಸಿ ಜಾರಿಗೊಳಿಸಬೇಕು. ಅಧಿಕಾರಿಗಳು ಕಾನೂನು ಪಾಲನೆಯಲ್ಲಿ ತಾರತಮ್ಯಕ್ಕೆ ಅವಕಾಶ ವಾಗದಂತೆ ಎಚ್ಚರಿಕೆ ವಹಿಸಬೇಕು. ಜೊತೆಗೆ ಕಾನೂನು ಪಾಲನೆಗೆ ಯಾವುದೇ ಒಳದಾರಿಗಳು ಅಡ್ಡಬರದ ಹಾಗೆ ನೋಡಿಕೊಳ್ಳಬೇಕು. ಎಲ್ಲರಿಗೂ ಒಂದೇ ರೀತಿಯ ಶಿಕ್ಷೆ / ದಂಡಗಳಿರಬೇಕು. ಮುಖ್ಯವಾಗಿ ಕಾನೂನು ಪಾಲಿಸುವಂತೆ ಬಳಕೆದಾರರಿಗೆ ಅಗತ್ಯ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸಬೇಕು.

ನೀರಾವರಿ ನಿರ್ವಹಣೆ ಮತ್ತು ನೀರು ಸಲಹಾ ಸಮಿತಿಯಲ್ಲಿ ನೀ.ಬ.ಸ. ಸಂಘದ ಪದಾಧಿಕಾರಿಗೆ ಹೆಚ್ಚಿನ ಅವಕಾಶ ಕಲ್ಪಿಸಬೇಕು. ಅದೇ ರೀತಿ ಜನಪ್ರತಿನಿಧಿಗಳಿಗೆ ಸಮಸ್ಯೆಗಳ ಅರಿವು ಬರುವಂತೆ ಹೊಸ ರೀತಿಯಲ್ಲಿ ಜಾಗೃತಗೊಳಿಸುವ ಅಗತ್ಯವಿದೆ. ಅಷ್ಟೇ ಮುಖ್ಯವಾಗಿ ಕಾಡಾದಲ್ಲಿ ರಾಜಕೀಯ ಹಸ್ತಕ್ಷೇಪದ ಪ್ರಮಾಣವನ್ನು ನಿಯಂತ್ರಿಸಬೇಕು.

ಸ್ಥಳೀಯವಾಗಿ ಸಮಸ್ಯೆಗಳನ್ನು ಬಗೆಹರಿಸಲು ತಂತ್ರಗಳನ್ನು ರೂಪಿಸಬೇಕು. ಪರಸ್ಪರ ತಿಳುವಳಿಕೆಯಿಂದ ಪ್ರಾದೇಶಿಕ ಹಂತದಲ್ಲಿಯೇ ಗೊಂದಲಗಳನ್ನು ನಿವಾರಿಸಬೇಕು. ಅಧಿಕಾರಿ ಗುತ್ತಿಗೆದಾರರ ಮತ್ತು ರಾಜಕೀಯ

ಬೆಂಬಲದಿಂದ ಅನೀತಿಯ ಮಾರ್ಗಗಳನ್ನು ಅನುಸರಿಸುವ ಸಾಧ್ಯತೆಗಳಿರುತ್ತವೆ. ಈ ಅಂಶಗಳನ್ನು ಸೂಕ್ತ ಕ್ರಮಗಳಿಂದ ತಡೆಗಟ್ಟಬೇಕು. ಕಾಡಾ ವ್ಯಾಪ್ತಿಯಲ್ಲಿ ರಾಜಕೀಯ ರಹಿತವಾದ ಒಂದು ನ್ಯಾಯ ಇತ್ಯರ್ಥ ಸಮಿತಿಯನ್ನು ರಚನೆ ಮಾಡಬೇಕು. ಈ ಸಮಿತಿ ಕಾಲವಿಳಂಬ ಮಾಡದೆ ವಿವಾದಗಳನ್ನು ಇತ್ಯರ್ಥ ಪಡಿಸುವಂತಿರಬೇಕು.

ಅಚ್ಚುಕಟ್ಟು ಪ್ರದೇಶದಲ್ಲಿ ನೀರಾವರಿ ವ್ಯವಸ್ಥೆ ಸುಸ್ಥಿರವಾಗಿರುವಂತೆ ನೋಡಿಕೊಳ್ಳುವ ಹೊಣೆಗಾರಿಕೆ ಕಾಡಾದ್ದಾಗಿದೆ. ಮುಖ್ಯವಾಗಿ ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿ ಬಸಿಗಾಲುವೆಗಳಿಲ್ಲದೆ ಮುಂಚೂಣಿಯಲ್ಲಿರುವ ಭೂಮಿ ಜೌಗಿನಿಂದ ಆವೃತವಾಗಿದೆ. ಸವಳು ಮತ್ತು ಕ್ಷಾರೀಯತೆಯಿಂದ ಹಲವಾರು ಹೆಕ್ಟೇರ್ ಸಾಗುವಳಿ ಭೂಮಿ ಅನುತ್ಪಾದಕವಾಗುತ್ತಿದೆ. ಇದರಿಂದ ಪ್ರಥಮವಾಗಿ ಕಾಡಾ ಬಸಿಗಾಲುವೆಗಳಿಗೆ ಹೆಚ್ಚಿನ ಗಮನ ನೀಡಬೇಕಾಗುತ್ತದೆ. ತೂಬುಗಳು ಸಂಪೂರ್ಣ ಹಾನಿ ತುತ್ತಾಗಿದ್ದು ನೀರಿನ ಹರಿಯುವಿಕೆಗೆ ಯಾವುದೇ ನಿಯಂತ್ರಣವಿಲ್ಲದಂತಾಗಿದೆ. ಆದುದರಿಂದ ಕಾಡಾ ಹೊಸ ತೂಬುಗಳ ನಿರ್ಮಾಣಕ್ಕೆ ಹಣಕಾಸನ್ನು ಮೀಸಲಿಡುವ ಅಗತ್ಯವಿದೆ. ನೀರಿನ ಮಾಪಕಗಳನ್ನು ಅಳವಡಿಸಿ ಬಳಕೆದಾರರ ಸಂಘಗಳಿಗೆ ಅಳತೆಯ ಆಧಾರದ ಮೇಲೆ ನೀರು ಒದಗಿಸುವಂತೆ ಮಾಡಿದರೆ ನೀರಿನ ಪ್ರಮಾಣಕ್ಕೆ ತಕ್ಕಂತೆ ನೀರು ದರ ಪಡೆಯಲು ಸಾಧ್ಯವಾಗುತ್ತದೆ.

❒ ❒

# ಅಧ್ಯಾಯ ಆರು

## ನೀರು ಬಳಕೆದಾರರ ಸಹಕಾರ ಸಂಘಗಳ ಸಾಮಾಜಿಕ ಸಂರಚನೆ

೬.೧. ಅಧ್ಯಯನ ಕ್ಷೇತ್ರದ ಗ್ರಾಮಗಳ ಸಾಮಾಜಿಕ ವಾತಾವರಣ

೬.೨. ನೀ.ಬ.ಸ. ಸಂಘಗಳ ಪದಾಧಿಕಾರಿಗಳ ಸ್ಥಾನಮಾನ

೬.೩. ನೀ.ಬ.ಸ. ಸಂಘಗಳ ಸದಸ್ಯರ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿ

೬.೪. ನೀ.ಬ.ಸ. ಸಂಘಗಳ ಕಾರ್ಯ ಚಟುವಟಿಕೆಗಳ ಮೇಲೆ ಸಾಮಾಜಿಕ ವಾತಾವರಣದ ಪ್ರಭಾವ

೬.೫. ಆಯ್ದ ಎರಡು ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ತೌಲನಿಕ ನೋಟ

## ಅಧ್ಯಾಯ ೬

# ನೀರು ಬಳಕೆದಾರರ ಸಹಕಾರ ಸಂಘಗಳ ಸಾಮಾಜಿಕ ಸಂರಚನೆ

### ಪ್ರಸ್ತಾವನೆ

ನೀರಿನ ಮೂಲಗಳನ್ನು ಪುನರ್ ತುಂಬಿಸುವ, ಅಂತರ್ಜಲ ಪ್ರಮಾಣವನ್ನು ಅಧಿಕಗೊಳಿಸುವ ಮತ್ತು ದೊರೆಯುತ್ತಿರುವ ನೀರಿನ ಪ್ರಮಾಣವನ್ನು ದುಂದುವ್ಯಯ ಮಾಡದೇ ಸಂಪೂರ್ಣ ಸದುಪಯೋಗ ಪಡಿಸಿಕೊಳ್ಳುವ ನಿಟ್ಟಿನಲ್ಲಿ ಹಲವು ಪ್ರಯತ್ನಗಳು ನಡೆಯುತ್ತಿವೆ. ಪ್ರಾರಂಭದಲ್ಲಿ ಎಲ್ಲಾ ನೈಸರ್ಗಿಕ ಸಂಪನ್ಮೂಲಗಳನ್ನು ನಿರ್ವಹಿಸುವ ಮತ್ತು ಅಭಿವೃದ್ಧಿಪಡಿಸುವ ಪ್ರಕ್ರಿಯೆಯು ಕೇವಲ ಅಧಿಕಾರಿಶಾಹಿಗಳ ಹಿಡಿತದಲ್ಲಿಯೇ ಇದ್ದಿತು. ಆದರೆ ಈ ರೀತಿಯ ಕ್ರಮವು ನಿಗದಿತ ಪ್ರಗತಿಯನ್ನು ಸಾಧಿಸುವಲ್ಲಿ ತೊಡರಾಗುತ್ತಿದ್ದನ್ನು ಹಲವಾರು ಅಧ್ಯಯನಗಳು ತೋರಿಸಿಕೊಟ್ಟವು (ನಾಗೇಶ್ ಹಾ.ವೆಂ., ಜೋಗನ್ ಶಂಕರ್-೧೯೯೫). ನಂತರದ ಹಂತದಲ್ಲಿ ಎಲ್ಲಾ ನಿರ್ವಹಣೆಯನ್ನು ಜನರಿಗೆ, ಫಲಾನುಭವಗಳಿಗೆ ನೀಡಿದರೆ ಒಳಿತು ಎಂಬ ಸಂಗತಿಗಳು ಸಹ ಚರ್ಚೆಗೆ ಬಂದವು. ಈ ನಿಟ್ಟಿನಲ್ಲಿ ಅನೇಕ ಜನಕೇಂದ್ರಿತ ಸಂಘ-ಸಂಸ್ಥೆಗಳ ಜವಾಬ್ದಾರಿ ಮತ್ತು ನಿರ್ವಹಣೆಗಳನ್ನು ಸಾರ್ವಜನಿಕರಿಗೆ ಬಿಟ್ಟುಕೊಡುವ ಪ್ರಕ್ರಿಯೆಯು ಸಹ ಅಸ್ತಿತ್ವದಲ್ಲಿ ಬಂದಿತು. `ವಿಕೇಂದ್ರೀಕರಣ` ಮತ್ತು `ಜನರ ಪಾಲ್ಗೊಳ್ಳುವಿಕೆ' ಪರಿಕಲ್ಪನೆಯು ವಿಸ್ತೃತ ರೂಪ ಪಡೆಯುತ್ತಿರುವ ಸಂದರ್ಭಗಳಲ್ಲಿ ಹಲವಾರು ಸಂಘ-ಸಂಸ್ಥೆಗಳ ನಿರ್ವಹಣೆಯನ್ನು ಸಾರ್ವಜನಿಕರು ಮತ್ತು ಆಡಳಿತಶಾಹಿ ಇಬ್ಬರೂ ಸೇರಿ ನಡೆಸಿಕೊಂಡು ಹೋಗುವ ಪರಿಪಾಠ ಆಚರಣೆಯಲ್ಲಿ ಬಂದಿತು. ಈ ಸ್ಥಿತಿ ಇದ್ದಾಗ, ಆಡಳಿತಶಾಹಿಗಳು ಜನರ ಜನಪ್ರತಿನಿಧಿಗಳನ್ನು ನಿಯಂತ್ರಿಸಿ, ತಾವೇ ಅಧಿಕಾರವನ್ನು ಚಲಾಯಿಸುತ್ತಾರೆ ಎನ್ನುವ ಕೂಗು ಕೇಳತೊಡಗಿತು (ಮಹೇಶ್ ತಿಪ್ಪಶೆಟ್ಟಿ-೧೯೯೫ ಮತ್ತು ಮನ್ನಾರ್ ಜೆ.-೨೦೦೪). ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ೮೦-೯೦ರಿಂದೀಚೆಗೆ ಜನರ ಸಹಭಾಗಿತ್ವದಲ್ಲಿ, ಜನರೇ ಅಭಿವೃದ್ಧಿ ಕೇಂದ್ರಿತ ಸಂಘ-ಸಂಸ್ಥೆಗಳ ನಿರ್ವಹಣೆಯನ್ನು ಮಾಡುವುದಕ್ಕೆ ಹೆಚ್ಚಿನ ಅವಕಾಶವನ್ನು ಒದಗಿಸಲಾಯಿತು. ಇದರಿಂದಾಗಿ ಇಂದು ಹಲವಾರು ಸಂಘ-ಸಂಸ್ಥೆಗಳನ್ನು ಅದರ ಪಾಲುದಾರರು ಇಲ್ಲವೇ ಸಾರ್ವಜನಿಕರು ನೋಡಿಕೊಂಡು ಹೋಗುವುದಕ್ಕೆ ಹೆಚ್ಚಿನ ಒತ್ತನ್ನು ನೀಡಲಾಗುತ್ತದೆ.

ಕೃಷಿಯಾಧಾರಿತ ಚಟುವಟಿಕೆಗಳಿಗೆ ಅಮೂಲ್ಯವಾದ ನೀರನ್ನು ಸಂಪೂರ್ಣ ಸದುಪಯೋಗ ಮಾಡಿಕೊಳ್ಳುವ ಸಲುವಾಗಿಯೇ ನೀರು ಬಳಕೆದಾರರ ಸಹಕಾರ ಸಂಘಗಳನ್ನು ರಚಿಸಲಾಗಿದೆ. ಮತ್ತು

ಹಲವಾರು ಕಾಯಿದೆ ನೀತಿಗಳ ಮೂಲಕ ಬಳಕೆದಾರರ ಸಹಕಾರ ಸಂಘಗಳೇ ತಮ್ಮ ಸಂಸ್ಥೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುವ ಅಧಿಕಾರವನ್ನು ಸಹ ಅವುಗಳಿಗೆ ನೀಡಲಾಗಿದೆ. ಆಡಳಿತಶಾಹಿಗಳಿಂದ ಜನರಿಗೆ ಆಡಳಿತ-ನಿರ್ವಹಣೆ ವರ್ಗಾವಣೆಯಾಗುವುದು ಒಂದು ಬಹುಮುಖ್ಯವಾದ ಘಟ್ಟವೆಂದು ಹೇಳಬಹುದು. ಕರ್ನಾಟಕದಲ್ಲಿ ನೀರು ಬಳಕೆದಾರರ ಸಂಘಗಳ ಪರಿಕಲ್ಪನೆ ಬಂದಾಗಿನಿಂದಲೂ ಸದಸ್ಯರಿಗೆ ಮತ್ತು ಪದಾಧಿಕಾರಿಗಳಿಗೆ ಅದರ ನಿರ್ವಹಣೆಯ ಜವಾಬ್ದಾರಿಯನ್ನು ನೀಡಲಾಗುತ್ತಿದೆ.

ನೀರು ಬಳಕೆದಾರರ ಸಂಘಗಳು ತಮ್ಮ ಬೇಕು-ಬೇಡಗಳನ್ನು ನಿರ್ಧರಿಸಿ ತಾವೇ ತಮ್ಮ ಸಂಘಗಳನ್ನು ಮುನ್ನಡೆಸಬೇಕಾಗುತ್ತದೆ. ಆದರೆ ಸಂಘಗಳ ನಿರ್ವಹಣೆಯಲ್ಲಿ ಹಲವಾರು ಅಂಶಗಳು ಪ್ರಭಾವ ಬೀರುತ್ತಿರುತ್ತವೆ. ಜನರು ಮುಖ್ಯವಾಗಿ ಸಂಘಗಳ ಸದಸ್ಯರ ಮನೋವೃತ್ತಿ, ವಿಭಿನ್ನ ರೀತಿಯ ಭೂಮಿಯ ಪ್ರಮಾಣ, ವರಮಾನ, ವರ್ಗ, ಜಾತಿಯ ಅಂಶಗಳು ಸಂಘಗಳ ನಿರ್ವಹಣೆ ಮತ್ತು ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಒಂದು ಸಂಘ-ಸಂಸ್ಥೆಯ ಯಶಸ್ಸು ಅಥವಾ ಪ್ರಗತಿಯು ಅಲ್ಲಿಯ ಸ್ಥಳದ ಸಾಮಾಜಿಕ ರಚನೆಯನ್ನು ಅವಲಂಬಿಸಿದೆ. ಸಂಘಗಳಿಗೆ ತಾಂತ್ರಿಕವಾಗಿ ಎಷ್ಟೇ ಅಧಿಕಾರ, ಹಕ್ಕು, ಉದ್ದೇಶಗಳಿದ್ದರೂ, ಸ್ಥಳೀಯ ಜಾತೀಯ, ವರ್ಗಾಧಾರಿತ ಅಂಶಗಳು ಈ ರೀತಿಯ ಸಂಘ-ಸಂಸ್ಥೆಗಳ ನಿರ್ವಹಣೆಯನ್ನು ಯಾವುದೋ ಒಂದು ಹಂತದಲ್ಲಿ ಪ್ರಭಾವಿಸುತ್ತವೆ. ಒಂದು ಪ್ರದೇಶದ ಅಭಿವೃದ್ಧಿ ಅಥವಾ ಸಂಘ-ಸಂಸ್ಥೆಗಳ ಯಶಸ್ವಿ ನಿರ್ವಹಣೆಯಲ್ಲಿ ಆಯಾ ಪ್ರದೇಶದ ಸಾಮಾಜಿಕ ಅಂಶಗಳನ್ನು ನಿರ್ಲಕ್ಷಿಸುವಂತಿಲ್ಲ. ಪ್ರಸ್ತುತ ಈ ಅಧ್ಯಾಯದಲ್ಲಿ ನೀರು ಬಳಕೆದಾರರ ಸಂಘಗಳಲ್ಲಿಯ ಸಾಮಾಜಿಕ ಸಂರಚನೆಯ ಕುರಿತಂತೆ ಹಲವು ಸಂಗತಿಗಳನ್ನು ಚರ್ಚಿಸಲಾಗಿದೆ.

ಒಂದು ಪ್ರದೇಶದ ಅಥವಾ ವಿವಿಧ ರೀತಿಯ ಸಂಘ-ಸಂಸ್ಥೆಗಳ ಕಾರ್ಯವೈಖರಿಯ ಮೇಲೆ ಆಯಾ ಪ್ರದೇಶದ ಸಾಮಾಜಿಕ ವಾತಾವರಣ ತನ್ನದೇ ಆದ ಪ್ರಭಾವವನ್ನು ಬೀರುತ್ತದೆ. ಪ್ರಚಲಿತದಲ್ಲಿ 'ಜಾತಿ' ಮತ್ತು 'ವರ್ಗ' ಆಧಾರಿತ ಸಂಗತಿಗಳು ಆಡಳಿತಾತ್ಮಕ ನಿರ್ವಹಣೆಯಲ್ಲಿ ಪ್ರಮುಖ ಪ್ರಭಾವಿ ಅಂಶಗಳಾಗಿವೆ. ಗ್ರಾಮಗಳ ಸಾಮಾಜಿಕ ವಾತಾವರಣಕ್ಕೆ ಸಂಬಂಧಿಸಿದಂತೆ ಹಲವು ಸಿದ್ಧಾಂತಗಳು ಈಗಾಗಲೇ ರೂಪಿತವಾಗಿವೆ. ಅವುಗಳನ್ನು ಎರಡು ನೆಲೆಗಟ್ಟಿನಿಂದ ಗುರುತಿಸಬಹುದಾಗಿದೆ. ಮೊದಲನೆಯದಾಗಿ ಈ ಹಿಂದಿನ ದಶಕಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಅಲ್ಲಿನ ಏಣಿ-ಶ್ರೇಣಿಗಳಿಂದ ಕೂಡಿದ ಜಾತಿ ವ್ಯವಸ್ಥೆಯು ಪ್ರಬಲವಾಗಿದ್ದು ಇತ್ತೀಚಿನ ದಿನಗಳಲ್ಲಿ ಅವುಗಳ ಪ್ರಭಾವ ಕಡಿಮೆಯಾಗುತ್ತಿದೆ. ಆದಾಗ್ಯೂ ಗ್ರಾಮಗಳ ಜಾತಿವ್ಯವಸ್ಥೆಯು ಇನ್ನೂ ಇದೆ. ಅದು ಅಲ್ಲಿಯ ವ್ಯವಸ್ಥೆಯನ್ನು ನಿಯಂತ್ರಿಸುತ್ತಲಿದೆ. ಭೂಮಾಲೀಕತ್ವದ ಜೀತಗಾರಿಕೆ/ಊಳಿಗಮಾನ್ಯದ ಕೆಲ ಲಕ್ಷಣಗಳು ಇನ್ನೂ ಜೀವಂತವಾಗಿವೆ. ಹೀಗಾಗಿ ಭೂಮಾಲೀಕತ್ವದ ಶ್ರೀಮಂತ ಜನಸಮುದಾಯ, ಅಧಿಕ ಸಂಖ್ಯೆಯಲ್ಲಿರುವ ಕೃಷಿಕಾರ್ಮಿಕ ಸಮುದಾಯವನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದಕ್ಕೆ ಅವಕಾಶವಾಗಿದೆ. ಜೊತೆಗೆ ತಮಗೆ ಹಿತವಾದ ಕೆಲಸ ಕಾರ್ಯಗಳನ್ನು ಪೂರೈಸಿ

ಕೊಳ್ಳುವುದಕ್ಕೆ ಸಹಾಯಕವಾಗಿದೆ. ಹೊರನೋಟಕ್ಕೆ ಈ ಪ್ರಕ್ರಿಯೆ ಕಾಣದಿದ್ದರೂ ಆಂತರಿಕವಾಗಿ ಯಾವುದೋ ಒಂದು ಹಂತದಲ್ಲಿ ಗ್ರಾಮಗಳ ಅಭಿವೃದ್ಧಿ ಪ್ರಗತಿಯ ಓಡಿತ, ಬೆಳವಣಿಗೆ ಎಂಬುದು ಈ ರೀತಿಯಾಗಿ ಕೆಲವೇ ಜನವರ್ಗದವರ ಹತೋಟಿಯಲ್ಲಿರುತ್ತದೆ ಎಂಬುದನ್ನು ಕೆಲ ಅಧ್ಯಯನಗಳು ಗುರುತಿಸಿವೆ (ದುಬೆ ಎಸ್.ಸಿ., ೧೯೫೮ ಮತ್ತು ಭಗವತ್ ಶರಣ ಉಪಾಧ್ಯಾಯ, ೨೦೦೪).

ಮೇಲಿನ ಸಂಗತಿಗಳಿಗೆ ವಿಭಿನ್ನವಾದ ನಿಲುವುಗಳು ಸಹ ಕೆಲ ಅಧ್ಯಯನಗಳಿಂದ ಹೊರಸೂಸಿವೆ. ಇವುಗಳ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಇಂದು ಜಾತಿವ್ಯವಸ್ಥೆ ಕ್ರಮೇಣ ಕಡಿಮೆಯಾಗುತ್ತಿದೆ. ಜಾಗತೀಕರಣದಂಥ ಇಂದಿನ ಪರಿಸ್ಥಿತಿಯಲ್ಲಿ ಜಾತಿಗಿಂತಲೂ ವರಮಾನವು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿದೆ. ಜಾತಿ-ಜಾತಿಗಳ ನಡುವಿನ ಅಂತರಗಳಿಗಿಂತಲೂ ವರಮಾನ ಕೇಂದ್ರೀತ ಅಂತರ, ಅಸಮಾನತೆಗಳು ಅಧಿಕಗೊಳ್ಳುತ್ತಿವೆ. ಗ್ರಾಮೀಣ ಪ್ರದೇಶಗಳಲ್ಲಿ ಜಾತಿವ್ಯವಸ್ಥೆ ಇದ್ದಾಗಲೂ, ಅವುಗಳು ಗ್ರಾಮೀಣ ಪರಿಸರವನ್ನು ನಿಯಂತ್ರಿಸುವಲ್ಲಿ ಹಿಂದಿಗಿಂತಲೂ ಇಂದು ಪ್ರಬಲವಾಗಿಲ್ಲ. ಸಮಾಜದ ಬಡ, ಕೆಳವರ್ಗದ ಜನಸಮುದಾಯದಲ್ಲಿ ಸಹ ಜಾಗೃತಿ ಮೂಡುತ್ತಿದ್ದು, ಅವರು ಸಹ ಗ್ರಾಮಗಳ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುತ್ತಿದ್ದಾರೆ. ಒಟ್ಟಾರೆಯಾಗಿ ಜನರ ಮನೋವೃತ್ತಿ, ಅವರು ವಿವಿಧ ಪ್ರಕ್ರಿಯೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ರೀತಿ ಇನ್ನಿತರ ಅಂಶಗಳು ಜನಸಮುದಾಯ ಮತ್ತು ಅಭಿವೃದ್ಧಿಗಳ ನಡುವಿನ ಸಂಬಂಧವನ್ನು ತಿಳಿಸುತ್ತದೆ. ಹೀಗಾಗಿ ಜಾತಿಯಾಧಾರಿತ ವ್ಯವಸ್ಥೆಗಿಂತಲೂ ಜಾತಿಯೇತರ ಅಂಶಗಳು ಗ್ರಾಮೀಣ ಪರಿಸರದಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದು, ಅವು ಪ್ರಭಾವ ಬೀರುತ್ತಿರುತ್ತಲಿವೆ ಎಂಬುದನ್ನು ಇನ್ನೂ ಕೆಲವು ಅಧ್ಯಯನಗಳು ಗುರುತಿಸಿವೆ (ಹೆಚ್.ವಿ. ನಾಗೇಶ್, ೧೯೮೬, ಹೆಚ್.ಎಲ್. ಮರುಳಸಿದ್ದಯ್ಯ, ೧೯೮೮). ಹೀಗೆ ಜಾತಿ ವ್ಯವಸ್ಥೆ ಮತ್ತು ಗ್ರಾಮೀಣ ಅಭಿವೃದ್ಧಿ ಇವುಗಳ ನಡುವಿನ ಸಂಬಂಧ ಕುರಿತಂತೆ ಈ ಎರಡು ಸೈದ್ಧಾಂತಿಕ ನಿಲುವುಗಳು ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಏಣಿ-ಶ್ರೇಣಿಗಳಿಂದ ಕೂಡಿದ ನಮ್ಮ ಸಮಾಜದಲ್ಲಿ ಗ್ರಾಮೀಣ ಪರಿಸರ ಇವುಗಳಿಂದ ಹೇಗೆ ಪ್ರಭಾವಿತಗೊಳ್ಳುತ್ತದೆ ಎಂಬುದು ಅಲ್ಲಿಯ ಭೂಮಾಲೀಕತ್ವದ ಸ್ವರೂಪ, ಶೈಕ್ಷಣಿಕ, ಸಾಮಾಜಿಕ ಸುಧಾರಣೆಗಳು, ಜನತೆಗೆ ಇರುವ ಆಯ್ಕೆಗಳು ಮತ್ತು ಸ್ವತಂತ್ರಗಳಿಂದ ನಿರ್ಧರಿತವಾಗುತ್ತದೆ ಎಂಬುವುದು ನಮಗೆ ಮನವರಿಕೆ ಆಗುತ್ತದೆ.

ಪ್ರಸ್ತುತ ಅಧ್ಯಾಯದಲ್ಲಿ ಒಟ್ಟು ಐದು ಭಾಗಗಳಿವೆ. ಮೊದಲ ಭಾಗದಲ್ಲಿ ಅಧ್ಯಯನ ಕ್ಷೇತ್ರದ ನೀರು ಬಳಕೆದಾರರ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿರುವ ಗ್ರಾಮಗಳಲ್ಲಿನ ಸಾಮಾಜಿಕ ಸ್ವರೂಪವನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ನೀರು ಬಳಕೆದಾರರ ಸಹಕಾರ ಸಂಘಗಳ ಪದಾಧಿಕಾರಿಗಳ ಸ್ಥಾನಮಾನಗಳನ್ನು ಎರಡನೇ ಭಾಗದಲ್ಲಿ, ಸಂಘಗಳ ಸದಸ್ಯರ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿಯನ್ನು ಮೂರನೇ ಭಾಗದಲ್ಲಿ ವಿವರಿಸಲಾಗಿದೆ. ನಾಲ್ಕನೇ ಭಾಗದಲ್ಲಿ ಸಂಘಗಳ

ಕಾರ್ಯನಿರ್ವಹಣೆಯ ಮೇಲೆ ಸಾಮಾಜಿಕ ವಾತಾವರಣದ ಪ್ರಭಾವವನ್ನು ಹಾಗೂ ಅಂತಿಮ ಭಾಗದಲ್ಲಿ ಆಯ್ದ ಎರಡು ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯ ಸಾಧನೆಯ ತೌಲನಿಕ ನೋಟವನ್ನು ಚರ್ಚಿಸಲಾಗಿದೆ.

## ೬.೧. ಅಧ್ಯಯನ ಕ್ಷೇತ್ರದ ಗ್ರಾಮಗಳ ಸಾಮಾಜಿಕ ವಾತಾವರಣ

ಭಾರತದ ಸಾಮಾಜಿಕ ರಚನೆಯು ಮುಖ್ಯವಾಗಿ ಜಾತಿ ಆಧಾರಿತವಾದದ್ದು. ಗ್ರಾಮೀಣ ಭಾರತದಲ್ಲಿ ಜಾತಿಯ ವ್ಯವಸ್ಥೆ ಇಂದಿಗೂ ತನ್ನ ಪ್ರಭಾವವನ್ನು ಹೊಂದಿದೆ. ನಮ್ಮ ಶ್ರೇಣೀಕೃತ ಸಮಾಜದಲ್ಲಿ ಮೇಲು-ಕೀಳು ಎನ್ನುವ ಅಸಮಾನತೆ ಅನಾದಿ ಕಾಲದಿಂದ ಆಚರಣೆಯಲ್ಲಿದೆ. ಉಚ್ಛ-ನೀಚ ಎನ್ನುವ ಪರಿಕಲ್ಪನೆಗಳು ಇಂದಿನ ಸಾಮಾಜಿಕ ಸ್ತರವಿನ್ಯಾಸದಲ್ಲಿ ಕೆಲಮಟ್ಟಿಗೆ ಸಡಿಲಗೊಂಡಂತೆ ಕಂಡುಬಂದರೂ ಅಂತಃಸತ್ವದಲ್ಲಿ ಇನ್ನೂ ಅವುಗಳ ಪ್ರಭಾವವನ್ನು ಕಾಣಬಹುದಾಗಿದೆ. ಒಟ್ಟಾರೆ ಗ್ರಾಮೀಣ ಸಮಾಜದಲ್ಲಿ ಹಿಂದಿನ ಚಾತುರ್ವರ್ಣ ವ್ಯವಸ್ಥೆ ಕಾಣದಿದ್ದರೂ ಅದರ ಬದಲಾದ ರೂಪವಂತೂ ಕಂಡುಬರುತ್ತದೆ. ಹೀಗೆ ಒಂದು ಕಡೆ ಜಾತಿಯ ತಾರತಮ್ಯ ಕಂಡೂಕಾಣದಂತೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಇದರೊಂದಿಗೆ ಗ್ರಾಮಗಳಲ್ಲಿ ಬಹುಸಂಖ್ಯೆಯಲ್ಲಿರುವ ಜಾತಿಗಳು (ಅವು ಕೆಳಜಾತಿಗಳಿರಲಿ, ಮೇಲ್ಜಾತಿಗಳಿರಲಿ) ಹೆಚ್ಚಿನ ಭೂಮಾಲೀಕತ್ವ ಹೊಂದಿ ಉನ್ನತ ಸ್ಥಾನದಲ್ಲಿದ್ದು ಪ್ರಬಲ ಜಾತಿಗಳೆನಿಸಿಕೊಂಡಿವೆ. ಹೀಗೆ ಪ್ರತಿ ಗ್ರಾಮದಲ್ಲಿಯೂ ಪ್ರಬಲ ಮತ್ತು ದುರ್ಬಲವೆನ್ನುವ ಎರಡು ಗುಂಪುಗಳು ತಮ್ಮ ಹಕ್ಕು ಮತ್ತು ಹಿತ ಸಾಧನೆಗಾಗಿ ಸ್ಪರ್ಧೆಯಲ್ಲಿರುವುದು ಕಂಡುಬರುತ್ತದೆ. "ಪ್ರಬಲರು ಎಲ್ಲ ದೃಷ್ಟಿಯಿಂದ ತಮಗೆ ಅನುಕೂಲವಾಗುವಂತೆ ವ್ಯವಸ್ಥೆಯನ್ನು ಬದಲಾಯಿಸುವ ಶಕ್ತಿಯನ್ನು ಪಡೆದಿರುತ್ತಾರೆ. ದುರ್ಬಲರು ಪ್ರಬಲರ ಅಣತಿಯಂತೆ ನಡೆಯಬೇಕಾದ ಸನ್ನಿವೇಶ ನಿರ್ಮಾಣವಾಗಿರುತ್ತದೆ" (ಲಕ್ಷ್ಮೀಪತಿ ಸಿ.ಜಿ. ೨೦೦೨).

ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಸರ್ವರಿಗೂ ಸಮಪಾಲು ಎನ್ನುವ ಹೊಸ ಕಲ್ಪನೆಯ ಉಗಮದ ನಂತರ ಪ್ರಬಲರು ಮತ್ತು ದುರ್ಬಲರ ನಡುವಿನ ಅಂತರವನ್ನು ಕಡಿಮೆಗೊಳಿಸಲು ಸರಕಾರಗಳು ಕಲ್ಯಾಣ ರಾಜ್ಯದ ಕಲ್ಪನೆಯ ಸಾಕಾರಗೊಳಿಸುವ, ಕಡಿಮೆಗೊಳಿಸುವ ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ವಿಕೇಂದ್ರೀಕರಣದ ಮೂಲಕ ಸಾಧಿಸಲು ಮುಂದಾದವು. ಈ ದಿಶೆಯಲ್ಲಿ ಈಗಾಗಲೇ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮೀಸಲಾತಿಯ ಮೂಲಕ ಅಂಚಿಗೆ ತಳ್ಳಲ್ಪಟ್ಟವರಿಗೂ ಅವಕಾಶ ಕಲ್ಪಿಸಲಾಗಿದೆ. ಅದೇ ರೀತಿ ವಿವಿಧ ಸಂಘ-ಸಂಸ್ಥೆಗಳಲ್ಲೂ ಇಂತಹ ಮೀಸಲಾತಿ ಜಾರಿಯಲ್ಲಿದೆ. ಪ್ರಸ್ತುತ ಆರಂಭಗೊಂಡಿರುವ ನೀ.ಬ.ಸ. ಸಂಘಗಳಲ್ಲೂ ಮೀಸಲಾತಿ ಜಾರಿಯಲ್ಲಿದ್ದು ಈ ಸಂಘಗಳನ್ನು ಪ್ರಜಾಸತ್ತಾತ್ಮಕವಾಗಿ ರಚನೆ ಮಾಡಿ ಅಧಿಕಾರವನ್ನು ವಿಕೇಂದ್ರೀಕರಿಸಲಾಗಿದೆ.

ಹೀಗೆ ಒಂದು ಸಂಘ-ಸಂಸ್ಥೆಯನ್ನು ಪ್ರಜಾಸತ್ತಾತ್ಮಕಗೊಳಿಸಿ ಅಧಿಕಾರವನ್ನು ವಿಕೇಂದ್ರೀಕರಿಸಿದ ಮೊತ್ತಕ್ಕೆ ಅದರ ಕಾರ್ಯ ನಿರ್ವಹಣೆ ಉತ್ತಮವಾಗಿರುತ್ತದೆ ಎನ್ನಲು ಸಾಧ್ಯವಾಗುವುದಿಲ್ಲ. ಏಕೆಂದರೆ

ಇತರ 'ಎಲ್ಲಾ ಸಂಗತಿಗಳು ಯಥಾಸ್ಥಿತಿಯಲ್ಲಿದ್ದಾಗ' ಎನ್ನುವ ಕಲ್ಪನೆಯು ಆಧಾರದ ಮೇಲೆ ಈ ಸಂಸ್ಥೆಗಳ ಕಾರ್ಯ ಸಾಮರ್ಥ್ಯ ಉತ್ತಮವೆಂದು ಹೇಳಬಹುದಷ್ಟೆ, ಆದರೆ ಇತರ ಎಲ್ಲಾ ಸಂಗತಿಗಳೆಂದರೆ ಯಾವುವು' ಅವುಗಳೇ ಜಾತಿ, ವರ್ಗ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಅಸಮಾನತೆಗಳಾಗಿವೆ. ಒಂದು ನಿಗದಿತ ಸಮಯದಲ್ಲಿ ಈ ಎಲ್ಲ ಸಂಗತಿಗಳೂ ಸಮಾನತೆಯಿಂದ ಕೂಡಿದ್ದು ಸಂಘ-ಸಂಸ್ಥೆಗಳನ್ನು ಪ್ರಜಾಸತ್ತಾತ್ಮಕಗೊಳಿಸಿ ಅಧಿಕಾರವನ್ನು ವಿಕೇಂದ್ರೀಕರಿಸಿದರೆ ಆಗ ಅಂತಹ ಸಂಸ್ಥೆಗಳು ದಕ್ಷರೀತಿಯಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ. "ವಸ್ತುಸ್ಥಿತಿಯಲ್ಲಿ ಅಂತಹ ಅವಕಾಶವಿಲ್ಲದ ಕಾರಣ ಸಂಘ-ಸಂಸ್ಥೆಗಳು ಪರಸ್ಪರ ಸಹಕಾರ ಮನೋಭಾವದಿಂದ ಕಾರ್ಯನಿರ್ವಹಿಸಿ ಯಶಸ್ವಿಯಾದ ಸಾಧ್ಯತೆಗಳು ಅತೀ ಕಡಿಮೆ ಎಂದೂ ಈಗಾಗಲೇ ಅನೇಕ ಅಧ್ಯಯನಗಳು ದೃಢಪಡಿಸಿವೆ" (ಚಂದ್ರಶೇಖರ ಬುಗ್ಗಿ ಮತ್ತು ಇತರರು).

ಪ್ರಸ್ತುತ ಅಧ್ಯಯನದಲ್ಲಿ ನೀ.ಬ.ಸ. ಸಂಘಗಳಲ್ಲಿರುವ ಗ್ರಾಮಗಳ ಸಾಮಾಜಿಕ ವಾತಾವರಣವನ್ನು ಕಂಡುಕೊಳ್ಳುವ ಮೂಲಕ ಅವುಗಳ ಕಾರ್ಯನಿರ್ವಹಣಾ ಸಾಮರ್ಥ್ಯವನ್ನು ಅಳತೆ ಮಾಡಲು ಪ್ರಯತ್ನಿಸಲಾಗಿದೆ. ಪ್ರಸಕ್ತ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಒಡಂಬಡಿಕೆ ಒಪ್ಪಂದವಾಗಿರುವ ೨೫ ನೀ.ಬ.ಸ. ಸಂಘಗಳ ವ್ಯಾಪ್ತಿಯಲ್ಲಿ ಒಟ್ಟು ೬೩ ಗ್ರಾಮಗಳು ಬರುತ್ತವೆ. ಈ ಗ್ರಾಮಗಳ ಜಾತಿವಾರು ಜನಸಂಖ್ಯೆ, ಜಾತಿವಾರು ಭೂಹಿಡುವಳಿಗಳ ಪ್ರಮಾಣ, ಜಾತಿವಾರು ಶೈಕ್ಷಣಿಕ ಮಟ್ಟ, ಜಾತಿವಾರು ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಜಾತಿವಾರು ಜನಸಂಖ್ಯೆ ಯಾವುದೇ ಆನುಷಂಗಿಕ ಮೂಲದಿಂದ ದೊರೆಯದ ಕಾರಣ ಸಹಭಾಗಿತ್ವ ಗ್ರಾಮೀಣ ಸಮೀಕ್ಷೆ, ಗುಂಪುಚರ್ಚೆ ಮತ್ತು ಗ್ರಾಮಲೆಕ್ಕಾಧಿಕಾರಿಗಳ ಹೇಳಿಕೆಗಳ ಆಧಾರದ ಮೇಲೆ ಎಲ್ಲಾ ಸಂಗತಿಗಳನ್ನು ಲೆಕ್ಕ ಹಾಕಲಾಗಿದೆ.

ಅಧ್ಯಯನ ಕ್ಷೇತ್ರದಲ್ಲಿ ಗ್ರಾಮಗಳಲ್ಲಿನ ಜಾತಿವಾರು ಜನಸಂಖ್ಯೆಯನ್ನು ಆ ಪ್ರದೇಶದಲ್ಲಿ ವಾಸವಾಗಿರುವ ಬಹುತೇಕ ಜಾತಿಗಳನ್ನು ಒಟ್ಟು ೧೦ ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಸಾಮಾನ್ಯ ವರ್ಗದಲ್ಲಿ ಲಿಂಗಾಯಿತ, ಬ್ರಾಹ್ಮಣ ಮತ್ತು ಒಕ್ಕಲಿಗರನ್ನು ಪರಿಗಣಿಸಲಾಗಿದೆ. ಪ್ರವರ್ಗ ೧, ೨ಎ, ಪರಿಶಿಷ್ಟ ಜಾತಿ ಮತ್ತು ಪಂಗಡಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸಲಾಗಿದೆ. ಉಳಿದಂತೆ ಅಲ್ಪಸಂಖ್ಯಾತರು (ಮುಖ್ಯವಾಗಿ ಮುಸ್ಲಿಮರು) ತಮಿಳು ಗೌಂಡರು ಹಾಗೂ ಇತರರನ್ನು (ನಾಯ್ಡು, ರೆಡ್ಡಿ) ಪಟ್ಟಿ ಮಾಡಿಕೊಳ್ಳಲಾಗಿದೆ.

## ಗ್ರಾಮಗಳ ಜಾತಿವಾರು ಸಂರಚನೆ ಮತ್ತು ಭೂಹಿಡುವಳಿಗಳ ರಚನೆ

**ಕೋಷ್ಟಕ : ೬.೧**

| ಕ್ರ.ಸಂ. | ಜಾತಿಗಳ ವಿವರ | ಜಾತಿವಾರು ಜನಸಂಖ್ಯೆ | ವಿವಿಧ ಜಾತಿಗಳ ಹಿಡಿತದಲ್ಲಿರುವ ಭೂಹಿಡುವಳಿಗಳ ಪ್ರಮಾಣ (ಶೇಕಡವಾರು) |
|---|---|---|---|
| ೦೧. | ಲಿಂಗಾಯಿತ | ೩೫.೪೮ | ೬೨.೩೬ |
| ೦೨. | ಒಕ್ಕಲಿಗ | ೧೦.೭೫ | ೧೦.೭೫ |
| ೦೩. | ಬ್ರಾಹ್ಮಣ | ೩.೨೨ | ೩.೨೨ |
| ೦೪. | ಪ್ರವರ್ಗ-೧ | ೧೨.೯೦ | ೭.೫೨ |
| ೦೫. | ಪ್ರವರ್ಗ-೨ಎ | ೩.೨೨ | ೨.೧೫ |
| ೦೬. | ತಮಿಳುಗೌಂಡರ್ | ೭.೫೨ | ೨.೧೫ |
| ೦೭. | ಎಸ್‌ಸಿ | ೧೧.೮೨ | ೫.೩೭ |
| ೦೮. | ಎಸ್‌ಟಿ | ೬.೪೫ | ೧.೦೭ |
| ೦೯. | ಅಲ್ಪಸಂಖ್ಯಾತರು | ೭.೫೨ | ೩.೨೨ |
| ೧೦. | ಇತರರು | ೧೦.೦೭ | ೨.೧೫ |

ಮೂಲ : ಕ್ಷೇತ್ರಕಾರ್ಯ ಮಾಹಿತಿ ಮತ್ತು ಸಹಭಾಗಿತ್ವ ಗ್ರಾಮೀಣ ಸಮೀಕ್ಷೆ

ಕೋಷ್ಟಕ-೬.೧ ರಲ್ಲಿ ಅಧ್ಯಯನ ಕ್ಷೇತ್ರದ ೯೩ ಗ್ರಾಮಗಳ ಜಾತಿವಾರು ಜನಸಂಖ್ಯೆ ಮತ್ತು ಜಾತಿವಾರು ಭೂಹಿಡುವಳಿಗಳ ಹಂಚಿಕೆಯನ್ನು ನೀಡಲಾಗಿದೆ. ಜಾತಿವಾರು ಜನಸಂಖ್ಯೆಯನ್ನು ಗಮನಿಸಿದಾಗ ಲಿಂಗಾಯಿತರು ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

ನಂತರದ ಸ್ಥಾನಗಳಲ್ಲಿ ಪ್ರವರ್ಗ-೧, ಪರಿಶಿಷ್ಟ ಜಾತಿ, ಒಕ್ಕಲಿಗರು ಮತ್ತು ಇತರರು ಬರುತ್ತಾರೆ. ಉಳಿದಂತೆ ಇತರೆ ಜಾತಿಗಳು ಕಡಿಮೆ ಜನಸಂಖ್ಯೆ ಇರುವುದು ತಿಳಿದುಬರುತ್ತದೆ. ಜಾತಿವಾರು ಜನಸಂಖ್ಯೆ ಮೂಲಕವಾಗಿ ಪ್ರಬಲ ಜಾತಿಗಳನ್ನು ಗುರುತಿಸಬಹುದಾಗಿದೆ. ಬಹುಸಂಖ್ಯಾತರಿಂದ ಜಾತಿಗಳು ಸಾಮಾನ್ಯವಾಗಿ ಭೂಹಿಡುವಳಿಗಳಲ್ಲಿ ಮೇಲು ಸ್ತರದಲ್ಲಿದ್ದು ಗ್ರಾಮದ ನೀ.ಬ.ಸ. ಸಂಘಗಳಲ್ಲಿ ತಮ್ಮ ಪ್ರಾಬಲ್ಯವನ್ನು ತೋರುವುದು ಸರ್ವವಿಧಿತ. ಹಾಗೆಯೇ ಆ ಸಂಸ್ಥೆಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ತಮ್ಮ ಹಿತ ಸಾಧನೆಗೆ ಪ್ರಥಮ ಆದ್ಯತೆ ನೀಡುವುದು ಕಂಡುಬರುತ್ತದೆ. ನಿರ್ಧಾರಗಳು ಅವರ ಇಚ್ಛೆಗೆ ಅನುಗುಣವಾಗಿಯೇ ತೆಗೆದುಕೊಳ್ಳುವುದರಿಂದ ಇತರರ ಹಿತಾಸಕ್ತಿಗಳಿಗೆ ಧಕ್ಕೆಯಾಗಿ ಅಂಚಿಗೆ ತಳ್ಳಲ್ಪಡುತ್ತವೆ.

ಸಂಘಗಳಲ್ಲಿ ಸಕ್ರಿಯವಾಗಿ ಸಹಕರಿಸಲು ಮುಂದಾಗುವುದಿಲ್ಲ. ಹೀಗೆ ನೀ.ಬ.ಸ. ಸಂಘಗಳು ಪ್ರಬಲ ಜಾತಿಗಳ ಹಿಡಿತ, ನಿಯಂತ್ರಣ ಇರುವುದನ್ನು ನಿರಾಕರಿಸುವಂತಿಲ್ಲ. ಕೋಷ್ಟಕದ ಕ್ರಮಸಂಖ್ಯೆಯ ಮೊದಲ ಭಾಗದ ಜಾತಿಗಳೆ ಸಂಘಗಳನ್ನು ನಿಯಂತ್ರಿಸುತ್ತಿರುವುದು ಸಹಜವಾದರೂ ಕೆಲವು ಪ್ರದೇಶಗಳಲ್ಲಿ ಉಳಿದ ಜಾತಿಗಳೂ ತಮ್ಮ ಪ್ರಾಬಲ್ಯವನ್ನು ತೋರಿರುವುದು ಅಷ್ಟೇ ಸತ್ಯ.

ಏಕೆಂದರೆ ಆಯಾ ಪ್ರದೇಶದ ಜಾತಿವಾರು ಜನಸಂಖ್ಯೆ ಯಾವ ಜಾತಿಯಲ್ಲಿ ಹೆಚ್ಚಾಗಿರುತ್ತದೋ, ಅವರ ನಿಯಂತ್ರಣದಲ್ಲಿ ನೀ.ಬ.ಸ. ಸಂಘಗಳು ಕಾರ್ಯನಿರ್ವಹಿಸುತ್ತವೆ. ಒಟ್ಟಾರೆ ಅಂಕಿ-ಅಂಶಗಳನ್ನು ಪರಿಗಣಿಸಿದಾಗ ಬಹುತೇಕವಾಗಿ ಇಲ್ಲಿ ಮೇಲ್ಜಾತಿಯವರ ಹಿತಾಸಕ್ತಿಗಳೇ ಪರಿಗಣಿಸಲ್ಪಡುತ್ತವೆ. ಇದರಿಂದ ಇತರ ಜಾತಿಗಳು ಅಸಹಕಾರ ತೋರುವುದು ಅಸಹಜವೇನಲ್ಲ. ಹೀಗೆ ಜಾತಿವಾರು ಜನಸಂಖ್ಯೆಯೂ ನೀ.ಬ.ಸ. ಸಂಘಗಳ ಕಾರ್ಯದಕ್ಷತೆಯನ್ನು ನಿರ್ಧರಿಸುವ ಒಂದು ಪ್ರಮುಖ ಸಂಗತಿ ಎನ್ನುವುದು ಪ್ರಸ್ತುತ ಅಧ್ಯಯನವು ದೃಢಪಡಿಸುತ್ತದೆ.

ಕೋಷ್ಟಕದ ಎರಡನೇ ಭಾಗದಲ್ಲಿ ಭೂಹಿಡುವಳಿಗಳ ಜಾತಿವಾರು ಹಂಚಿಕೆಯನ್ನು ನೀಡಲಾಗಿದೆ. ಗ್ರಾಮೀಣ ಭಾರತದಲ್ಲಿ ಭೂಮಿ ಒಂದು ಆರ್ಥಿಕ ಅಂತಸ್ತಿನ ಸಂಕೇತ. ವ್ಯಕ್ತಿಯ ಪ್ರತಿಷ್ಠೆ, ಗೌರವಗಳು ಆತನು ಹೊಂದಿರುವ ಭೂಮಿಯಿಂದಲೇ ನಿರ್ಧರಿಸಲ್ಪಡುತ್ತದೆ. ಅದರಲ್ಲೂ ನೀರಾವರಿ ಭೂಮಿಯನ್ನು ಹೊಂದಿದ್ದರೆ ಅದೊಂದು ಪ್ರತಿಷ್ಠೆಯ ಸಂಗತಿಯಾಗಿರುತ್ತದೆ. ಅಂದರೆ ಭೂಮಿ ವ್ಯಕ್ತಿಯ ಆರ್ಥಿಕ ಸ್ಥಾನಮಾನ ಹೆಚ್ಚಿಸಿ ಇತರ ಸಂಗತಿಗಳ ಮೇಲೆ ತನ್ನದೇ ಆದ ಪ್ರಭಾವವನ್ನು ಹೊಂದಿರುತ್ತದೆ. ವರಮಾನ ಹೆಚ್ಚಾದಂತೆ ಸಮಾಜದಲ್ಲಿ ವಿವಿಧ ಸ್ಥಾನ, ಅನುಕೂಲತೆಗಳು ತಾನೇ ತಾನಾಗಿ ಒಲಿದು ಬರುತ್ತವೆ. ಹೀಗಾಗಿ ವ್ಯಕ್ತಿಯು ತನ್ನ ಆರ್ಥಿಕ ವರ್ಚಸ್ಸಿನಿಂದ ನೀ.ಬ.ಸ. ಸಂಘಗಳಲ್ಲಿ ಗಣ್ಯಸ್ಥಾನಗಳನ್ನು ಅಲಂಕರಿಸಲು ಸಾಧ್ಯವಾಗುತ್ತದೆ. ಅದೇ ರೀತಿ ಅವುಗಳನ್ನು ತನ್ನ ಹಿತಸಾಧನೆಗಾಗಿಯೇ ಬಳಸಿಕೊಳ್ಳುವ ಎಲ್ಲಾ ಸಾಧ್ಯತೆಗಳಿರುತ್ತವೆ. ಜಾತಿವಾರು ಜನಸಂಖ್ಯೆಯಲ್ಲಿ ಆದಿಕ್ಯ ಹೊಂದಿರುವ ಜಾತಿಗಳೇ ಭೂಹಿಡುವಳಿಗಳಲ್ಲಿ ದುಪ್ಪಟ್ಟು ಹೆಚ್ಚಳವನ್ನು ಪಡೆದಿರುವುದು ನಿಚ್ಚಳವಾಗಿದೆ. ಅಂದರೆ ಒಂದು ಕಡೆ ಜನಸಂಖ್ಯೆಯಲ್ಲಿ ಆದಿಕ್ಯ ಮತ್ತೊಂದು ಕಡೆ ಭೂಹಿಡುವಳಿಗಳಲ್ಲಿಯೂ ಮುಂಚೂಣಿಯಲ್ಲಿರುವುದರಿಂದ ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆಯ ಮೇಲೆ ಪ್ರಭಾವ ಮತ್ತು ನಿಯಂತ್ರಣಗಳು ಗರಿಷ್ಠ ಮಟ್ಟದಲ್ಲಿರುತ್ತವೆ. ಹೀಗಾಗಿ ಎರಡೂ ಸಂಗತಿಗಳು ಎಲ್ಲಿ ಮೇಲ್ಮೈ ಸಾಧಿಸಿರುತ್ತವೆಯೋ ಅಲ್ಲಿ ಇತರೇ ಸಮುದಾಯಗಳ ಭಾಗವಹಿಸುವಿಕೆಗೆ ಹೆಚ್ಚಿನ ಅವಕಾಶಗಳು ದೊರೆಯಲಾರವು. ತಮ್ಮ ಹಿತಾಸಕ್ತಿಗೆ ಹೆಚ್ಚಿನ ಅನುಕೂಲದಿಂದ ಸನ್ನಿವೇಶದಲ್ಲಿ ಇತರೆ ಸಮುದಾಯಗಳು ನೀ.ಬ.ಸ. ಸಂಘ ಕಾರ್ಯನಿರ್ವಹಣೆಗೆ ಸಹಕರಿಸಲಾರರು. ಇದರಿಂದ ಈ ಸಂಘಗಳು ದಕ್ಷತೆಯಿಂದ ತಮ್ಮ ಕಾರ್ಯಕ್ಷಮತೆಯನ್ನು ತೋರ್ಪಡಿಸಲಾರವು ಎನ್ನುವುದು ದಿಟವಾಗುತ್ತದೆ.

## ಗ್ರಾಮಗಳ ಶೈಕ್ಷಣಿಕ ಮಟ್ಟ (ಶೇಕಡವಾರು ಪ್ರಮಾಣ)

**ಕೋಷ್ಟಕ : ೬.೨**

| ಕ್ರ.ಸಂ. | ಜಾತಿಗಳ ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೦೧. | ಲಿಂಗಾಯಿತರು | ೮೦ | ೬೫ | ೭೫ |
| ೦೨. | ಒಕ್ಕಲಿಗರು | ೭೯ | ೬೩ | ೭೨ |
| ೦೩. | ಬ್ರಾಹ್ಮಣರು | ೮೨ | ೬೭ | ೭೯ |
| ೦೪. | ಪ್ರವರ್ಗ-೧ | ೬೧ | ೫೨ | ೫೮ |
| ೦೫. | ಪ್ರವರ್ಗ-೨ಎ | ೬೫ | ೫೪ | ೬೦ |
| ೦೬. | ತಮಿಳುಗೌಂಡರ್ | ೫೯ | ೪೫ | ೫೩ |
| ೦೭. | ಪರಿಶಿಷ್ಟ ಜಾತಿ | ೫೮ | ೪೧ | ೫೦ |
| ೦೮. | ಪರಿಶಿಷ್ಟ ಪಂಗಡ | ೫೭ | ೪೨ | ೫೦ |
| ೦೯. | ಅಲ್ಪಸಂಖ್ಯಾತರು (ಮುಸ್ಲಿಂ) | ೫೫ | ೩೮ | ೪೮ |
| ೧೦. | ಇತರರು | ೬೦ | ೫೦ | ೫೫ |

ಮೂಲ : ಸಹಭಾಗಿತ್ವ ಗ್ರಾಮೀಣ ಸಮೀಕ್ಷೆ ಮತ್ತು ಜನಗಣತಿ ೨೦೦೧

ಅಂಕಿ-ಅಂಶಗಳ ನೋಟ, ಶಿವಮೊಗ್ಗ ೨೦೦೫-೦೬

ಕೋಷ್ಟಕ ೬.೨ ರಲ್ಲಿ ಅಧ್ಯಯನ ಕ್ಷೇತ್ರದ ಗ್ರಾಮಗಳ ಜಾತಿವಾರು ಶಿಕ್ಷಣ, ಸಾಮಾಜಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ನೀಡಲಾಗಿದೆ.

ಇಂದಿನ ಸಮಾಜದಲ್ಲಿ ಶಿಕ್ಷಣವು ಮಹತ್ವದ ಸ್ಥಾನವನ್ನು ಪಡೆದಿದೆ. ವ್ಯಕ್ತಿಯ ಏಳಿಗೆಯು ಅವನು ಪಡೆದ ಶಿಕ್ಷಣವನ್ನು ಅವಲಂಬಿಸಿರುತ್ತದೆ. ಜನತೆಯ ಅಭಿವೃದ್ಧಿ ಮಟ್ಟವನ್ನು ನಿರ್ಧರಿಸುವ ಸಂಗತಿಗಳಲ್ಲಿ ಶಿಕ್ಷಣವೂ ಒಂದು ಪ್ರಮುಖ ಅಂಶ. ಶಿಕ್ಷಣ ಪಡೆದವನಿಗೆ ಜೀವನದಲ್ಲಿ ಉತ್ತಮ ಅವಕಾಶಗಳು ದೊರೆತು, ಆತನು ಆರ್ಥಿಕವಾಗಿ ಸಶಕ್ತನಾಗುವ ಸಾಧ್ಯತೆಗಳಿರುತ್ತವೆ. ಹೀಗೆ ವ್ಯಕ್ತಿಯ ಸ್ಥಾನ-ಮಾನಗಳ ನಿರ್ಧಾರದಲ್ಲಿ ಶಿಕ್ಷಣವು ಒಂದು ಪ್ರಮುಖ ಸಂಗತಿಯಾಗಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಶಿಕ್ಷಣ ಎಂದರೆ ಅಕ್ಷರವನ್ನು ಮಾತ್ರ ಪರಿಗಣಿಸಲಾಗಿದೆ. ಕೋಷ್ಟಕದಲ್ಲಿ ಕಂಡು ಬರುವಂತೆ ಮೇಲ್ಜಾತಿಯವರು ಶೈಕ್ಷಣಿಕವಾಗಿ ಉನ್ನತಿ ಸಾಧಿಸಿರುವುದು ತಿಳಿದುಬರುತ್ತದೆ. ಕ್ಷೇತ್ರ ಕಾರ್ಯದಲ್ಲಿ ಗಮನಿಸಿದಂತೆ ಮೇಲ್ಜಾತಿಯವರು ಉನ್ನತ ಶಿಕ್ಷಣವನ್ನು ಹೆಚ್ಚಿನ ಪ್ರಮಾಣ ಪಡೆದಿರುವುದು ಕಂಡುಬರುತ್ತದೆ. ಈ ಉನ್ನತ ಶಿಕ್ಷಣದಿಂದ ಅನೇಕರು ಹೆಚ್ಚು ವರಮಾನ ತರುವ ವೈದ್ಯಕೀಯ,

ಇಂಜಿನೀಯರ್, ಮಾಹಿತಿ ತಂತ್ರಜ್ಞಾನ ಮೊದಲಾದ ಕ್ಷೇತ್ರಗಳಲ್ಲಿ ಉದ್ಯೋಗ ಪಡೆದಿರುವುದು ತಿಳಿದುಬರುತ್ತದೆ. ಆದರೆ ಕೆಳಸಮುದಾಯಗಳ ಶಿಕ್ಷಣದ ಪ್ರಮಾಣ ಕಡಿಮೆಯಿದ್ದು, ಅವರು ಉನ್ನತ ಶಿಕ್ಷಣದಲ್ಲಿ ಅಂತಹ ಸಾಧನೆ ಮಾಡಿರುವುದು ಕಂಡುಬರುವುದಿಲ್ಲ. ಜೊತೆಗೆ ಉತ್ತಮ ವರಮಾನ ತಂದುಕೊಡುವ ಉದ್ಯೋಗಗಳು ಗಳಿಸಿರುವುದು ಅತ್ಯಲ್ಪವಾಗಿದೆ. ಮೀಸಲಾತಿಯಿಂದ ಕೆಲವೇ ಕೆಲವರು ಮಾತ್ರ ಇಂತಹ ಉದ್ಯೋಗಗಳನ್ನು ಪಡೆದಿರುವುದು ತಿಳಿದುಬರುತ್ತದೆ.

ಶಿಕ್ಷಣದ ಮೂಲಕ ಮುಂದುವರೆದ ಸಮುದಾಯಗಳು ಇನ್ನಷ್ಟು ಬಲಯುತವಾಗಿ ತಮ್ಮ ಸ್ಥಾನಮಾನಗಳನ್ನು ಹೆಚ್ಚಿಸಿಕೊಂಡಿರುವುದು ಕಂಡುಬರುತ್ತದೆ. ಹೀಗೆ ನೀ.ಬ.ಸ. ಸಂಘಗಳ ಕಾರ್ಯ ಪ್ರಕ್ರಿಯೆಯ ಮೇಲೆ ಜಾತಿವಾರು ಶಿಕ್ಷಣ ಮಟ್ಟವೂ ತನ್ನದೇ ಆದ ಪ್ರಭಾವ ಹೊಂದಿರುವುದು ನಿಚ್ಚಳವಾಗಿದೆ.

ಸಾಮಾಜಿಕ ಸ್ಥಾನಮಾನವನ್ನು ಮುಖ್ಯವಾಗಿ ಜಾತಿಯೇ ನಿರ್ಧರಿಸುತ್ತದೆ. ಅಂದರೆ ಉನ್ನತ ಜಾತಿ ಸಮುದಾಯಗಳು ಸಾಮಾಜಿಕವಾಗಿ ಮೇಲುಸ್ತರದ ಸ್ಥಾನವನ್ನು ಹಿಂದಿನಿಂದಲೇ ಹೊಂದಿದ್ದು ಅದರ ಅನುಕೂಲವನ್ನು ಪಡೆದಿದ್ದಾರೆ. ಸಾಂಸ್ಕೃತಿಕವಾಗಿ ಯಾವುದೇ ಗ್ರಾಮದಲ್ಲಿ ನಡೆಯುವ ಹಬ್ಬ ಹರಿದಿನ, ಜಾತ್ರೆ, ಉತ್ಸವಗಳು ಇನ್ನಿತರೆ ಯಾವುದೇ ರೂಪುರೇಷೆಗಳನ್ನು ನಿರ್ಣಯ ಮಾಡುವಲ್ಲಿ ಮೇಲ್ಜಾತಿಗಳೇ ಪ್ರಧಾನ ಪಾತ್ರವಹಿಸುತ್ತವೆ. ಇದರಿಂದ ಸಾಮಾಜಿಕ ಸ್ಥಾನಮಾನ ಮೊದಲೇ ನಿರ್ಧರಿತವಾಗಿದ್ದು ಅದನ್ನು ಜಾತಿಯೊಂದಿಗೆ ಸಮೀಕರಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಕೆಳಸಮುದಾಯಗಳನ್ನು ನಿರ್ಧಾರಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಪರಿಗಣಿಸುತ್ತಿರುವುದು ಕಂಡುಬರುತ್ತದೆ. ಆದರೂ ಪಾರಂಪರಿಕ ಆಚರಣೆ ಮತ್ತು ರೂಢಿಗಳಲ್ಲಿ ಯಾವುದೇ ಬದಲಾವಣೆಗಳಾಗಿಲ್ಲ. ಉನ್ನತ ಸಮುದಾಯಗಳ ನೇತೃತ್ವದಲ್ಲಿಯೇ ಈ ಸಾಮಾಜಿಕ ಚಟುವಟಿಕೆಗಳು ನಡೆಯುತ್ತವೆ. ಇದರಿಂದ ಸಾಮಾಜಿಕವಾಗಿ ಅವರ ಸ್ಥಾನಮಾನಗಳು ಮೇಲ್ಮಟ್ಟದವೇ ಆಗಿರುತ್ತವೆ. ಹೀಗಾಗಿ ಅವರು ಗ್ರಾಮದ ಒಟ್ಟಾರೆ ಚಟುವಟಿಕೆಗಳನ್ನು ನಿಯಂತ್ರಿಸುವ, ನಿರ್ಧಾರ ಮಾಡುವ ಶಕ್ತಿ ಪಡೆದಿರುತ್ತಾರೆ.

ಆದುದರಿಂದ ನೀ.ಬ.ಸ. ಸಂಘಗಳ ನೀತಿ ಧೋರಣೆಗಳ ಪ್ರಕ್ರಿಯೆಯಲ್ಲಿ, ಪದಾಧಿಕಾರಿಗಳ ಆಯ್ಕೆಯಲ್ಲಿ ಸಾಮಾಜಿಕ ಅಂತಸ್ತು ಪ್ರಮುಖ ಪಾತ್ರವಹಿಸುತ್ತದೆ. ರಾಜಕೀಯ ಸ್ಥಾನ ಎನ್ನುವುದು ಅಧಿಕಾರವನ್ನು ಸೂಚಿಸುವ ಒಂದು ಸಂಕೇತವಾಗಿದೆ. ಅಂದರೆ ಗ್ರಾಮೀಣ ಸಮಾಜದಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸಂಘ ಸಂಸ್ಥೆಗಳಲ್ಲಿ ಯಾವ ಜಾತಿ ಸಮುದಾಯಗಳು ಎಂತಹ ಸ್ಥಾನಮಾನ ಮತ್ತು ಅವಕಾಶಗಳನ್ನು ಪಡೆದಿದ್ದಾರೆ ಎನ್ನುವುದನ್ನು 'ರಾಜಕೀಯ ಸ್ಥಾನಮಾನ' ಎಂದು ಪರಿಗಣಿಸಲಾಗಿದೆ. ಹಳ್ಳಿಯ ಯುವಕ ಸಂಘಗಳಿರಬಹುದು, ಸಹಕಾರಿ ಸಂಸ್ಥೆಗಳಿರಬಹುದು, ಭಜನಾ ಮಂಡಳಿಗಳಿರಬಹುದು, ಎಸ್.ಡಿ.ಎಂ.ಸಿ.ಗಳಿರಬಹುದು, ಪಂಚಾಯತ್ ರಾಜ್ ಸಂಸ್ಥೆಗಳಿರಬಹುದು ಈ ಎಲ್ಲ ಸಂಸ್ಥೆಗಳಲ್ಲಿ ತಮ್ಮ ಪ್ರಾಬಲ್ಯವನ್ನು ಹೊಂದಿರುವ ಸಮುದಾಯ

ಗಳನ್ನು ರಾಜಕೀಯವಾಗಿ ಉನ್ನತ ಸ್ಥಾನ ಎಂದು ಪರಿಗಣಿಸಲಾಗುತ್ತದೆ. ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಮಾಹಿತಿಯ ಪ್ರಕಾರ ಗ್ರಾಮಗಳಲ್ಲಿ ಪ್ರಬಲ ಜಾತಿಗಳೇ ಸ್ಥಳೀಯ ಸಂಘಸಂಸ್ಥೆಗಳಲ್ಲಿ ಹೆಚ್ಚಿನ ಪಾಲನ್ನು ಪಡೆದುಕೊಂಡಿವೆ. ಪ್ರಸ್ತುತ ಸಂದರ್ಭದಲ್ಲಿ ಈ ಮುಂಚೆ ಅಧಿಕಾರ ನಡೆಸಿರುವುದರಲ್ಲಿ ಪ್ರಬಲ ಜಾತಿಗಳೇ ಮುಂಚೂಣಿಯಲ್ಲಿದ್ದವು.

ಇತ್ತೀಚಿನ ಮೀಸಲಾತಿಯ ಪರಿಣಾಮವಾಗಿ ಕೆಳಜಾತಿಗಳಿಗೂ ಇಂತಹ ಅವಕಾಶಗಳು ದೊರೆತಿವೆ. ಆದರೂ ನಿರ್ಧಾರಗಳನ್ನು ಕೈಗೊಳ್ಳುವಾಗ ಮುಂದುವರಿದ ಸಮುದಾಯಗಳನ್ನು ಅವಲಂಬಿಸುವ ಅನಿವಾರ್ಯತೆ ಉಂಟಾಗಿರುವುದು ಅಷ್ಟೇ ಸತ್ಯ. ಮೇಲುಜಾತಿಯವರು ಇಂತಹ ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿಯ ಕಾರಣಕ್ಕೆ ಅವಕಾಶ ವಂಚಿತರಾದರೂ, ತಮ್ಮ ಅಗತ್ಯಗಳನ್ನು ಪರೋಕ್ಷವಾಗಿ ಪೂರೈಸಿ ಕೊಳ್ಳುವಷ್ಟು ಶಕ್ತಿವಂತರಾಗಿದ್ದಾರೆ. ತಮಗಿರುವ ರಾಜಕೀಯ ಒಡನಾಟ, ಆರ್ಥಿಕ ಸಂಸ್ಥೆಗಳಲ್ಲಿನ ಅವಕಾಶ, ಅಧಿಕಾರಶಾಹಿಯ ಸಾಮೀಪ್ಯದಿಂದ ತಮಗೆ ದೊರೆಯಬೇಕಾದ ಸೌಲಭ್ಯ ಸವಲತ್ತುಗಳನ್ನು ಪಡೆದು ಕೊಳ್ಳುತ್ತಲೇ ಇದ್ದಾರೆ. ಹೀಗಾಗಿ ಪ್ರತ್ಯಕ್ಷವಾಗಿ ಅವರು ಮುಖ್ಯ ಸ್ಥಾನಗಳಲ್ಲಿ ಇಲ್ಲದಿದ್ದರೂ ಅವರ ಪ್ರಭಾವಗಳಿಂದ ಪರೋಕ್ಷವಾಗಿ ಅನುಕೂಲತೆಗಳನ್ನು ಪಡೆದುಕೊಳ್ಳುವ ಅವಕಾಶವನ್ನು ಕಳೆದುಕೊಂಡಿಲ್ಲ. ಇದಕ್ಕೆ ತದ್ವಿರುದ್ಧವಾಗಿ ಮೀಸಲಾತಿಯ ಕಾರಣದಿಂದ ಹಿಂದುಳಿದ ಮತ್ತು ಕೆಳಸಮುದಾಯಗಳು ಸ್ಥಳೀಯ ಸಂಸ್ಥೆಗಳಲ್ಲಿ ಅವಕಾಶಗಳನ್ನು ಪಡೆದಿದ್ದರೂ ಮೇಲ್ಜಾತಿಯವರ ಸಹಕಾರವಿಲ್ಲದೆ ಯಾವುದೇ ನಿರ್ಣಯಗಳನ್ನು ತೆಗೆದುಕೊಳ್ಳಲಾರದ ಸ್ಥಿತಿಯಂತು ಕಣ್ಮರೆಯಾಗಿಲ್ಲ. ನೀ.ಬ.ಸ. ಸಂಘಗಳಲ್ಲಿಯೂ ಪರಿಶಿಷ್ಟರಿಗೆ, ಮಹಿಳೆಯರಿಗೆ ಮತ್ತು ಕೆಳತುದಿ ರೈತರಿಗೆ ಮೀಸಲಾತಿಯ ಅವಕಾಶವನ್ನು ಕಲ್ಪಿಸಲಾಗಿದೆ. ಅದರಂತೆ ಅವರು ಆಯ್ಕೆಯು ಆಗುತ್ತಾರೆ. ಆದರೆ ಸಂಘದ ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಗಳು ಮುಂದುವರಿದ ಸಮುದಾಯಗಳ ವಶದಲ್ಲಿರುವುದರಿಂದ ಮೀಸಲಾತಿಯ ಮೂಲಕ ಆಯ್ಕೆಯಾಗಿರುವ ನಿರ್ದೇಶಕಿಯರ ಧ್ವನಿಗೆ ಅಂತಹ ಮಹತ್ವವೇನು ಇರಲಾರದು. ಹೀಗಾಗಿ ಇವರು ಕೇವಲ ನಾಮಕಾವಸ್ಥೆಯಾಗಿ ಉಳಿದು ಕೊಂಡು ಬಿಡುತ್ತಾರೆ.

ನೀ.ಬ.ಸ. ಸಂಘಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿರುವುದು ಒಂದು ಪ್ರಮುಖ ಅಂಶವಾಗಿದೆ. ಇಂದು ಮಹಿಳೆಗೆ ಎಲ್ಲಾ ಕ್ಷೇತ್ರಗಳಲ್ಲಿ ಅವಕಾಶಗಳನ್ನು ನೀಡುತ್ತಿರುವುದು ಒಟ್ಟಾರೆ ಅಭಿವೃದ್ಧಿಯ ಒಂದು ಸೂಚಿಯಾಗಿದೆ. ಜನಸಂಖ್ಯೆಯಲ್ಲಿ ಸರಿಸುಮಾರು ಅರ್ಧದಷ್ಟಿರುವ ಮಹಿಳೆಯರು ನೀತಿ-ನಿರ್ಧಾರಗಳನ್ನು ಕೈಗೊಳ್ಳುವಲ್ಲಿ ತಮ್ಮದೇ ಆದ ಪಾತ್ರವಹಿಸಿ ಅವರೂ ಮುಖ್ಯಧಾರೆಗೆ ಸೇರ್ಪಡೆ ಗೊಳ್ಳುವ ಪ್ರಕ್ರಿಯೆಗೆ ಈಗೀಗ ಚಾಲನೆ ದೊರೆಯುತ್ತಿದೆ. ಅದೇ ರೀತಿ ನೀ.ಬ.ಸ. ಸಂಘಗಳಲ್ಲಿಯೂ ಮಹಿಳಾ ಮೀಸಲಾತಿಯನ್ನು ಅಳವಡಿಸಿರುವುದು ಒಂದು ಉತ್ತಮ ಹೆಜ್ಜೆಯು ಹೌದು. ಆದರೆ ಇಲ್ಲಿನ ಮಹಿಳಾ ಮೀಸಲಾತಿಗಳ ಉದ್ದೇಶಗಳನ್ನು ಈಡೇರಿಸುವಲ್ಲಿ ಕೆಲ ಸಮಸ್ಯೆ, ತೊಂದರೆಗಳಿವೆ. ಮುಖ್ಯವಾಗಿ

ಮಹಿಳೆಯ ಹೆಸರಿನಲ್ಲಿ ಸಾಗುವಳಿ ಜಮೀನು ಇರಬೇಕೆಂಬ ನಿಯಮವಿದೆ. ನಮ್ಮ ಭಾರತೀಯ ಸಮಾಜದಲ್ಲಿ ಪಿತ್ರಾರ್ಜಿತ ಆಸ್ತಿಯ ಹಕ್ಕು ಪುರುಷ ಪ್ರಧಾನವಾಗಿರುವುದರಿಂದ ಮಹಿಳೆಗೆ ಭೂಮಿಯ ಹಕ್ಕು, ವಾರಸುದಾರಿಕೆ, ಮಾಲೀಕತ್ವ ಇನ್ನೂ ದೊರೆಯುವಲ್ಲಿ ವಿಳಂಬವಾಗುತ್ತಿದೆ. ಕರ್ನಾಟಕದ ಹೆಣ್ಣಿಗೂ ಆಸ್ತಿಯಲ್ಲಿ ಹಕ್ಕಿರುವುದು ಕಾನೂನುಬದ್ಧವಾಗಿದೆಯಾದರೂ ವಾಸ್ತವದಲ್ಲಿ ಅದು ಇನ್ನು ಅನುಷ್ಠಾನ ಗೊಂಡಿಲ್ಲ. ಇದರಿಂದ ೩ ನೀ.ಬ.ಸ. ಸಂಘಗಳಲ್ಲಿ ಮಹಿಳಾ ನಿರ್ದೇಶಕಿಯರ ಆಯ್ಕೆಗೆ ಸೂಕ್ತ ವ್ಯಕ್ತಿಗಳೇ ದೊರೆಯದಿರುವುದು ಕಂಡುಬಂದಿದೆ. ಕ್ಷೇತ್ರ ಸಮೀಕ್ಷೆಯನ್ನು ಮಾಡುವಾಗ ೨ ಸಂಘಗಳಲ್ಲಿ ಮಹಿಳಾ ನಿರ್ದೇಶಕಿಯರೇ ಇಲ್ಲದಿರುವುದು ಕಂಡುಬಂತು. ಅನಿವಾರ್ಯವಾಗಿ ಇನ್ನು ಕೆಲವು ಸಂಘಗಳಲ್ಲಿ ಪಕ್ಕದ ಅಚ್ಚುಕಟ್ಟು ಪ್ರದೇಶದಿಂದ ಮಹಿಳಾ ನಿರ್ದೇಶಕಿಯರನ್ನು ನಿಯೋಜನೆ ಮಾಡಿಕೊಂಡು ಕಾರ್ಯ ನಿರ್ವಹಿಸುತ್ತಿದ್ದಾರೆ.

ಮತ್ತೆ ಕೆಲವು ಸಂಘಗಳಲ್ಲಿ ಭೂಮಿಯ ಒಡೆತನವಿಲ್ಲದ ಮಹಿಳಾ ನಿರ್ದೇಶಕಿಯರನ್ನು ನೇಮಕ ಮಾಡಿಕೊಳ್ಳಲಾಗಿದೆ. ಆದರೆ ಇಂತಹ ಮಹಿಳಾ ನಿರ್ದೇಶಕಿಯರಿಗೆ ಮತದಾನದ ಹಕ್ಕು ಇರುವುದಿಲ್ಲ. ಮತದಾನದ ಹಕ್ಕು ಇಲ್ಲದ ಮೇಲೆ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಯಾವುದೇ ಮುಖ್ಯ ನಿರ್ಧಾರಗಳನ್ನು ಕೈಗೊಳ್ಳಲು ಅವಕಾಶವಾಗುವುದಿಲ್ಲ. ಹೀಗಾಗಿ ಈ ಪ್ರದೇಶದಲ್ಲಿ ಮಹಿಳಾ ಸ್ಥಿತಿಗತಿಗಳು ಅನಾನುಕೂಲಕರ ವಾಗಿವೆ. ಒಟ್ಟಾರೆ ಮಹಿಳೆಯ ಸ್ಥಾನಮಾನ ಎಲ್ಲಾ ಕ್ಷೇತ್ರಗಳಲ್ಲಿ ಪುರುಷನಿಗಿಂತ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ದುಡಿಮೆಯಲ್ಲಿ ಹೆಚ್ಚಿನ ಪಾಲು ಪಡೆದಿರುವ ಮಹಿಳೆಯರು ನಿರ್ಣಾಯಕ ಸ್ಥಾನಗಳಲ್ಲಿ ಅತ್ಯಲ್ಪ ಅವಕಾಶಗಳನ್ನು ಪಡೆದಿರುವುದು ಸಾಮಾಜಿಕ ನ್ಯಾಯದ ಕಲ್ಪನೆಯಲ್ಲಿ ಅಸಮಾನತೆಗೆ ಕಾರಣವಾಗುತ್ತದೆ.

### ೬.೨. ನೀ.ಬ.ಸ. ಸಂಘಗಳ ಪದಾಧಿಕಾರಿಗಳ ಸ್ಥಾನಮಾನ

ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಒಡಂಬಡಿಕೆ ಒಪ್ಪಂದವಾಗಿರುವ ೨೫ ನೀ.ಬ.ಸ. ಸಂಘಗಳಲ್ಲಿನ ಪದಾಧಿಕಾರಿಗಳು ಹೊಂದಿರುವ ಭೂಹಿಡುವಳಿ ವಾರ್ಷಿಕ ವರಮಾನ, ಶಿಕ್ಷಣ ಹಾಗೂ ವಿವಿಧ ಔಪಚಾರಿಕ ಮತ್ತು ಅನೌಪಚಾರಿಕ ಸಂಘಸಂಸ್ಥೆಗಳಲ್ಲಿ ಹೊಂದಿರುವ ಮಾಜಿ ಅಥವಾ ಹಾಲಿ ಸ್ಥಾನಗಳ ಆಧಾರದ ಮೇಲೆ ಪದಾಧಿಕಾರಿಗಳು ಹೊಂದಿರುವ ಸ್ಥಾನಮಾನಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ವಿವಿಧ ಸಂಘ ಸಂಸ್ಥೆಗಳಲ್ಲಿ ಪದಾಧಿಕಾರಿಗಳು ಹೊಂದಿರುವ ಸ್ಥಾನದ ಹಿನ್ನೆಲೆಯಲ್ಲಿ ಅವರ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಯನ್ನು ಅರಿತುಕೊಳ್ಳಲು ಪ್ರಯತ್ನ ಮಾಡಲಾಗಿದೆ. ಕ್ಷೇತ್ರಕಾರ್ಯದಲ್ಲಿ ಪ್ರಶ್ನಾವಳಿಗಳನ್ನು ನೀಡಿ ಪದಾಧಿಕಾರಿಗಳಿಂದ ಮಾಹಿತಿ ಪಡೆದುಕೊಳ್ಳಲಾಗಿದೆ. ಪ್ರತಿ ನೀ.ಬ.ಸ. ಸಂಘದಲ್ಲಿ ಅಧ್ಯಕ್ಷ, ಉಪಾಧ್ಯಕ್ಷ, ಮೀಸಲಾತಿ ಮೂಲಕ ನಿರ್ದೇಶಕರಾದ ಹಿಂದುಳಿದ ಅಥವಾ ಅಲ್ಪಸಂಖ್ಯಾತ ಮಹಿಳಾ ನಿರ್ದೇಶಕಿಯರು ಹಾಗೂ ಪರಿಶಿಷ್ಟ ನಿರ್ದೇಶಕರು, ಒಬ್ಬ ಸಾಮಾನ್ಯ

ವರ್ಗ ನಿರ್ದೇಶಕರನ್ನು ಆರಿಸಿಕೊಳ್ಳಲಾಗಿದೆ. ಈ ೬ ಪದಾಧಿಕಾರಿಗಳೊಂದಿಗೆ ಸಂಘದ ಕಾರ್ಯದರ್ಶಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ನೀ.ಬ.ಸ. ಸಂಘಗಳ ಪದಾಧಿಕಾರಿಗಳು ಮತ್ತು ಸದಸ್ಯರಿಂದ ವೈಯಕ್ತಿಕ ವಿವರಗಳನ್ನು ಪಡೆಯಲಾಗಿದೆ. ಮುಖ್ಯವಾಗಿ ಅವರ ಜಾತಿ, ವರಮಾನ, ಭೂಹಿಡುವಳಿ ಪ್ರಮಾಣ, ವಯಸ್ಸು, ಶಿಕ್ಷಣ ಹಾಗೂ ಇತರೆ ಸಂಘ ಸಂಸ್ಥೆಗಳಲ್ಲಿ ಪಡೆದಿರುವ ಹಾಲಿ ಇಲ್ಲವೆ ಮಾಜಿ ಸ್ಥಾನಮಾನಗಳ ಬಗ್ಗೆ ಮಾಹಿತಿ ಪಡೆಯಲಾಗಿದೆ. ನೀ.ಬ.ಸ. ಸಂಘಗಳ ಮೇಲೆ ನಮ್ಮ ಸಾಮಾಜಿಕ ರಚನೆಯ ಪ್ರಭಾವ ಹೇಗಿರುತ್ತವೆ ಎನ್ನುವುದನ್ನು ಅರಿತುಕೊಳ್ಳಲು ಈ ಮಾಹಿತಿಗಳನ್ನು ಕಲೆ ಹಾಕಲಾಗಿದೆ. ಇದು ಅಧ್ಯಯನದ ಪ್ರಮುಖ ಉದ್ದೇಶವೂ ಆಗಿರುವುದರಿಂದ ಸಂಘಗಳ ಪದಾಧಿಕಾರಿಗಳ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಅಗತ್ಯವಾಗಿದೆ.

ನೀ.ಬ.ಸ. ಸಂಘಗಳಲ್ಲಿ ಅಧ್ಯಕ್ಷ ಮುಖ್ಯ ಕಾರ್ಯನಿರ್ವಾಹಕ ಸ್ಥಾನವನ್ನು ಹೊಂದಿರುತ್ತಾನೆ. ಅದೇ ರೀತಿ ಇಲ್ಲಿ ಪ್ರಧಾನ ಪಾತ್ರವಹಿಸುವವರು ಅಧ್ಯಕ್ಷರು. ನಿರ್ಧಾರಗಳನ್ನು ಕೈಗೊಳ್ಳುವಾಗ, ತೆಗೆದುಕೊಂಡ ನಿರ್ಧಾರಗಳನ್ನು ಅನುಷ್ಠಾನಗೊಳಿಸುವಾಗ ಅಧ್ಯಕ್ಷನ ಪಾತ್ರ ಹೆಚ್ಚು. ಆದುದರಿಂದ ಇಂತಹ ಅಧ್ಯಕ್ಷ ಪದವಿಯಲ್ಲಿ ಯಾವ ಸಮುದಾಯದವರಿರುತ್ತಾರೆ ಎನ್ನುವುದು ಮುಖ್ಯವಾಗುತ್ತದೆ. ಹಲವಾರು ಸಂದರ್ಭಗಳಲ್ಲಿ ಅಧ್ಯಕ್ಷನಾದವನು ತನ್ನ ಸಮುದಾಯದ ಹಿತ ಕಾಪಾಡುವ ಸಾಧ್ಯತೆಗಳಿರುತ್ತವೆ. ಆಗ ಉಳಿದ ಸಮುದಾಯಗಳ ಹಿತಾಸಕ್ತಿಗಳು ಕಡೆಗಣಿಸಲ್ಪಡುವುದರಿಂದ ಸಹಕಾರತತ್ವ ಪರಿಪೂರ್ಣವಾಗಿ ಜಾರಿಗೊಳ್ಳಲು ಅವಕಾಶವಾಗಲಾರದು. ಇದೇ ರೀತಿ ಅಧ್ಯಕ್ಷ ಆರ್ಥಿಕವಾಗಿ ಬಲಿಷ್ಠನೇ ಅಥವಾ ಕನಿಷ್ಠನೇ ಎನ್ನುವುದನ್ನು ಕಂಡುಕೊಂಡರೆ ಆತ ಯಾವ ವರ್ಗದವರ ಪರವಾಗಿ ನಿಲ್ಲುತ್ತಾನೆ. ಮತ್ತು ಯಾವ ವರ್ಗಗಳನ್ನು ಪರಿಗಣಿಸುವುದಿಲ್ಲ ಎನ್ನುವುದು ತಿಳಿದುಬರುತ್ತದೆ. ಇನ್ನು ಶಿಕ್ಷಣ ಮಟ್ಟವು ಅಧ್ಯಕ್ಷನ ಕಾರ್ಯನಿರ್ವಹಣಾ ಸಾಮರ್ಥ್ಯವನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ. ಸಂಘದ ಅಗತ್ಯಗಳಿಗೆ, ನಿಯಮಗಳಿಗೆ ತಕ್ಕ ಹಾಗೆ ಸ್ಪಂದಿಸಿ ಸಂಘವನ್ನು ಸರಿದಾರಿಯಲ್ಲಿ ಕೊಂಡೊಯ್ಯಲು ಶಿಕ್ಷಣದ ಪಾತ್ರ ಹೆಚ್ಚಾಗಿರುತ್ತದೆ. ಅಧ್ಯಕ್ಷನು ಹೊಂದಿರುವ ಭೂಹಿಡುವಳಿಯ ಪ್ರಮಾಣದ ಆಧಾರದ ಮೇಲೆ ಆತನ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಯನ್ನು ತಿಳಿಯಬಹುದು. ಅಲ್ಲದೆ ಅಧಿಕಾರದ ಕೇಂದ್ರಗಳಲ್ಲಿ ಆತನ ಶಕ್ತಿಯನ್ನು ಅರಿಯಬಹುದು. ಇದರಿಂದ ಅಧಿಕಾರದ ಕೇಂದ್ರಗಳಲ್ಲಿ ತನ್ನ ಶಕ್ತಿಯನ್ನು ಹೇಗೆ ಸ್ಥಾಪಿಸಿದ್ದಾನೆ ಎನ್ನುವುದು ವೇದ್ಯವಾಗುತ್ತದೆ.

ಮುಖ್ಯವಾಗಿ ಅಧ್ಯಕ್ಷರು ವಿವಿಧ ಸಂಸ್ಥೆಗಳಲ್ಲಿ ಹೊಂದಿರುವ ಸ್ಥಾನಮಾನಗಳ ಆಧಾರದ ಮೇಲೆ ಇಡೀ ಗ್ರಾಮದ ಮೇಲೆ ಆತ ಹೊಂದಿರುವ ಹಿಡಿತ, ಯಜಮಾನಿಕೆ ಮತ್ತು ನಿಯಂತ್ರಣಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಜೊತೆಗೆ ಈ ಮೇಲಿನ ಎಲ್ಲ ಸಂಗತಿಗಳು ನೀ.ಬ.ಸ. ಸಂಘಗಳ ಮೇಲೆ ಹೇಗೆ ಪ್ರಭಾವ ಬೀರುತ್ತವೆ ಎನ್ನುವುದನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತವೆ.

### ೬.೨.೧. ಸೀ.ಬ.ಸ. ಸಂಘಗಳ ಪದಾಧಿಕಾರಿಗಳ ಜಾತಿವಾರು ಸಂರಚನೆ

ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ೨೫ ಸೀ.ಬ.ಸ. ಸಂಘಗಳಲ್ಲಿ ಒಟ್ಟು ೧೬೧ ಪದಾಧಿಕಾರಿಗಳಿಂದ ಮಾಹಿತಿ ಪಡೆಯಲಾಗಿದೆ. ಒಂದು ಸಂಘದಲ್ಲಿ ಮಹಿಳಾ ನಿರ್ದೇಶಕರನ್ನು ಆಯ್ಕೆಮಾಡಿಕೊಳ್ಳದೇ ಇರುವುದರಿಂದ ೨೪ ಮಹಿಳಾ ನಿರ್ದೇಶಕರಿಂದ ಮಾಹಿತಿ ಪಡೆಯಲಾಯಿತು. ಅದೇ ರೀತಿ ೩ ಸಂಘಗಳಲ್ಲಿ ಕಾರ್ಯದರ್ಶಿಗಳನ್ನು ನೇಮಕ ಮಾಡಿಕೊಂಡಿಲ್ಲ. ಅವರ ಕಾರ್ಯಗಳನ್ನು ಅಧ್ಯಕ್ಷರೇ ನಿರ್ವಹಿಸಿಕೊಂಡು ಹೋಗುತ್ತಿರುವುದು ತಿಳಿದುಬಂದಿದೆ. ಯಾಕೆ ಎಂದು ಅಧ್ಯಕ್ಷರನ್ನು ವಿಚಾರಿಸಿದಾಗ ಸಂಘಗಳು ಆರ್ಥಿಕವಾಗಿ ಬಲಿಷ್ಟವಾಗಿಲ್ಲದ ಕಾರಣ ಕಾರ್ಯದರ್ಶಿಗಳಿಗೆ ವೇತನ ನೀಡಲು ಸಾಧ್ಯವಿಲ್ಲ ಎನ್ನುವ ಪ್ರತಿಕ್ರಿಯೆಯನ್ನು ನೀಡಿದರು.

**ಪದಾಧಿಕಾರಿಗಳ ಜಾತಿವಾರು ಸಂರಚನೆ (ಶೇಕಡವಾರು)**

**ಕೋಷ್ಟಕ : ೬.೩**

| ಕ್ರ.ಸಂ. | ಜಾತಿ ವಿವರ | ಅಧ್ಯಕ್ಷ | ಉಪಾಧ್ಯಕ್ಷ | ಪು.ನಿರ್ದೇಶಕ | ಮ.ನಿರ್ದೇಶಕ | ಕಾರ್ಯದರ್ಶಿ |
|---|---|---|---|---|---|---|
| ೦೧. | ಲಿಂಗಾಯಿತರು | ೫೬.೦೦ | ೪೮.೦೦ | ೩೩.೩೩ | ೫೪.೧೬ | ೫೪.೫೪ |
| ೦೨. | ಒಕ್ಕಲಿಗರು | ೮.೦೦ | ೧೬.೦೦ | ೧೩.೩೩ | ೮.೩೩ | ೯.೦೯ |
| ೦೩. | ಬ್ರಾಹ್ಮಣರು | ೧೨.೦೦ | .... | ೫.೩೩ | ೪.೧೬ | .... |
| ೦೪. | ಪ್ರವರ್ಗ-೧ | ೮.೦೦ | ೮.೦೦ | ೫.೩೩ | ೪.೧೬ | .... |
| ೦೫. | ಪ್ರವರ್ಗ-೨ಎ | ೧೨.೦೦ | ೮.೦೦ | ೧೩.೩೩ | ೧೨.೫ | ೧೩.೬೩ |
| ೦೬. | ತಮಿಳುಗೌಂಡರ್ | ೪.೦೦ | ೪.೦೦ | ೪.೦೦ | .... | .... |
| ೦೭. | ಪರಿಶಿಷ್ಟ ಜಾತಿ | .... | ೪.೦೦ | ೧೩.೩೩ | ೪.೧೬ | ೯.೦೯ |
| ೦೮. | ಪರಿಶಿಷ್ಟ ಪಂಗಡ | .... | ೮.೦೦ | ೧.೩೩ | ೮.೩೩ | .... |
| ೦೯. | ಅಲ್ಪಸಂಖ್ಯಾತರು | .... | ೪.೦೦ | ೯.೩೩ | ೪.೧೬ | ೪.೫೪ |
| ೧೦. | ಇತರೆ | .... | .... | ೧.೩೩ | .... | .... |
| | ಒಟ್ಟು | ೧೦೦ | ೧೦೦ | ೧೦೦ | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಮೇಲಿನ ಕೋಷ್ಟಕ-೬.೩ನ್ನು ಗಮನಿಸಿದಾಗ ಸೀ.ಬ.ಸ. ಸಂಘಗಳ ಪದಾಧಿಕಾರಿಗಳ ಜಾತಿವಾರು ಸಂರಚನೆಯಲ್ಲಿ ಲಿಂಗಾಯತ ಸಮುದಾಯ ಎಲ್ಲ ರೀತಿ ಪದಾಧಿಕಾರಿಗಳಲ್ಲಿ ಮುಂಚೂಣಿಯಲ್ಲಿರುವುದು

ಕಂಡುಬರುತ್ತದೆ. ಪುರುಷ ನಿರ್ದೇಶಕರನ್ನು ಹೊರತುಪಡಿಸಿದರೆ ಉಳಿದ ಅಧ್ಯಕ್ಷ, ಉಪಾಧ್ಯಕ್ಷ, ಮಹಿಳಾ ನಿರ್ದೇಶಕರ ಮಟ್ಟಿ ಕಾರ್ಯದರ್ಶಿಗಳಲ್ಲಿ ಶೇಕಡ ೫೦ ರಷ್ಟಿದೆ. ಅಧ್ಯಕ್ಷರ ಜಾತಿವಾರು ಸಂರಚನೆಯನ್ನು ಗಮನಿಸಿದರೆ ಶೇಕಡ ೫೬ ರಷ್ಟು ಲಿಂಗಾಯಿತರು ಪ್ರಧಾನ ಹುದ್ದೆಯಲ್ಲಿದ್ದಾರೆ. ನಂತರ ಕ್ರಮವಾಗಿ ಬ್ರಾಹ್ಮಣರು, ಪ್ರವರ್ಗ ೨ಎ, ಒಕ್ಕಲಿಗರು ಮತ್ತು ಪ್ರವರ್ಗ ೧ರ ಸಮುದಾಯದವರು ಅಧ್ಯಕ್ಷರಾಗಿರುವುದು ಕಂಡುಬರುತ್ತದೆ. ತಮಿಳುಗೌಂಡರ್ ಒಂದು ಅಧ್ಯಕ್ಷ ಸ್ಥಾನ ಪಡೆದು ಕೊನೆಯ ಸ್ಥಾನದಲ್ಲಿದ್ದಾರೆ. ಇದರಲ್ಲಿ ಅತ್ಯಂತ ಕುತೂಹಲದ ಸಂಗತಿ ಏನೆಂದರೆ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಅಲ್ಪ ಸಂಖ್ಯಾತ ಸಮುದಾಯಕ್ಕೆ ಒಂದೇ ಒಂದೂ ಅಧ್ಯಕ್ಷ ಸ್ಥಾನ ದೊರೆತಿಲ್ಲ. ಇದರಿಂದ ಅಧಿಕಾರ ಮತ್ತು ಸ್ಥಾನಮಾನಗಳು ಬಹುತೇಕ ಪ್ರಬಲ ಜಾತಿಗಳ ವಶದಲ್ಲಿರುವುದು ಸತ್ಯವೆಂದು ಈ ಕೋಷ್ಟಕದ ಮುಖಾಂತರ ಗೋಚರವಾಗುತ್ತದೆ.

ಮತ್ತೊಂದು ವಿಶಿಷ್ಟ ಅಂಶವೆಂದರೆ ೨೫ ನೀ.ಬ.ಸ. ಸಂಘಗಳಲ್ಲಿ ಯಾವೊಬ್ಬ ಮಹಿಳೆಗೂ ಅಧ್ಯಕ್ಷ ಅಥವಾ ಉಪಾಧ್ಯಕ್ಷ ಸ್ಥಾನ ದೊರೆತಿಲ್ಲ. ಅಂದರೆ ಎಲ್ಲ ಸಂಘಗಳ ಪ್ರಧಾನ ಹುದ್ದೆಗಳು ಪುರುಷರ ಆಡಳಿತಕ್ಕೆ ಒಳಪಟ್ಟಿರುವುದು ಇದರಿಂದ ದಿಟವಾಗುತ್ತದೆ. ಜನಸಂಖ್ಯೆಯಲ್ಲಿ ಶೇಕಡ ಅರ್ಧದಷ್ಟಿರುವ ಮಹಿಳೆಗೆ ನಿರ್ಣಾಯಕ ಹುದ್ದೆಗಳು ದೊರೆಯದೇ ಇರುವುದು ಒಂದು ಕೊರತೆಯಾಗಿದೆ. ಕೃಷಿಯಲ್ಲಿ ಪುರುಷನಿಗಿಂತ ಹೆಚ್ಚಿಗೆ ದುಡಿಮೆ ಮಾಡುವ ಮತ್ತು ನೀರಿನೊಂದಿಗೆ ಅನ್ಯೋನ್ಯ ಸಂಬಂಧ ಹೊಂದಿರುವ ಮಹಿಳೆಯರು ನೀ.ಬ.ಸ. ಸಂಘಗಳಲ್ಲಿ ಅಂಚಿಗೆ ತಳ್ಳಲ್ಪಟ್ಟಿರುವುದು ತಾರತಮ್ಯದ ಪರಮಾವಧಿಯನ್ನು ಬಿಂಬಿಸುತ್ತದೆ.

ಅದೇ ರೀತಿ ಉಪಾಧ್ಯಕ್ಷ ಹುದ್ದೆಯನ್ನು ಗಮನಿಸಿದರೂ ಅಧಿಕ ಸಂಖ್ಯೆ ಹುದ್ದೆಗಳು ಪ್ರಬಲ ಜಾತಿಗಳ ಕೈವಶದಲ್ಲಿರುವುದು ವೇದ್ಯವಾಗುತ್ತದೆ. ಕೆಲಮಟ್ಟಿಗೆ ಪರಿಶಿಷ್ಟ ಜಾತಿ, ವರ್ಗ ಮತ್ತು ಅಲ್ಪಸಂಖ್ಯಾತರಿಗೆ ಅಲ್ಪ ಅವಕಾಶವಾಗಿರುವುದು ಕಂಡುಬಂದರೂ ಅದರ ಪ್ರಮಾಣ ತೀರ ಅಲ್ಪವಾಗಿದೆ.

ಅಚ್ಚರಿಯ ಸಂಗತಿಯೆಂದರೆ ಅಧ್ಯಕ್ಷ ಸ್ಥಾನದಲ್ಲಿ ಪ್ರಮುಖ ಸ್ಥಾನ ಪಡೆದಿದ್ದು, ಬ್ರಾಹ್ಮಣ ಸಮುದಾಯ ಒಂದು ಉಪಾಧ್ಯಕ್ಷ ಸ್ಥಾನ ಪಡೆದಿಲ್ಲ. ಪರಿಶಿಷ್ಟ ವರ್ಗದವರಿಗೆ ಪರಿಶಿಷ್ಟ ಜಾತಿಗಿಂತ ಒಂದು ಸ್ಥಾನ ಹೆಚ್ಚಾಗಿ ದೊರೆತಿರುವುದು ತಿಳಿಯುತ್ತದೆ.

ಪುರುಷ ನಿರ್ದೇಶಕರ ಸ್ಥಾನದಲ್ಲಿ ಮೊದಲ ಸ್ಥಾನ ಲಿಂಗಾಯಿತ ಸಮುದಾಯದ್ದೇ ಆಗಿದ್ದು, ಉಳಿದಂತೆ ಒಕ್ಕಲಿಗ, ಪ್ರವರ್ಗ ೨ಎ ಮತ್ತು ಪರಿಶಿಷ್ಟ ಜಾತಿಗಳು ನಂತರದ ಸ್ಥಾನಗಳನ್ನು ಪಡೆದುಕೊಂಡಿವೆ. ಆನಂತರ ಅಲ್ಪಸಂಖ್ಯಾತರು ಅವಕಾಶ ಪಡೆದಿದ್ದಾರೆ. ಆದರೆ ಪರಿಶಿಷ್ಟ ವರ್ಗ ಅತಿ ಕಡಿಮೆ. ಅಂದರೆ ಕೇವಲ ಒಂದು ಸ್ಥಾನ ಮಾತ್ರ. ಜಾತಿವಾರು ಜನಸಂಖ್ಯೆಗೆ ತಕ್ಕ ಹಾಗೆ ಪದಾಧಿಕಾರಿಗಳ ಸ್ಥಾನಗಳು ಎಲ್ಲ ಸಮುದಾಯದವರಿಗೂ ಪ್ರಮಾಣಾನುಗುಣವಾಗಿ ದೊರೆತಿಲ್ಲವೆನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

ಒಳಕೆ ಆದಂತಹ ಮಹಿಳಾ ನಿರ್ದೇಶಕರ ಹುದ್ದೆಗಳು ಪ್ರಬಲ ಸಮುದಾಯವಾದ ಲಿಂಗಾಯತರ ಪಾಲಾಗಿವೆ. ಉಳಿದಂತೆ ಪ್ರವರ್ಗ ೨ಎ ಹಿಂದುಳಿದ ಸಮುದಾಯಗಳಿಗೆ ಎರಡನೇ ಸ್ಥಾನ ದೊರೆತಿದ್ದು, ಪರಿಶಿಷ್ಟ ವರ್ಗ ಮತ್ತು ಒಕ್ಕಲಿಗ ಸಮುದಾಯಕ್ಕೆ ಸಮನಾಗಿ ಹಂಚಿಕೆಯಾಗಿರುವುದು ಕಂಡುಬರುತ್ತದೆ. ಉಳಿದ ಸಮುದಾಯಗಳು ತಲಾ ಒಂದು ಸ್ಥಾನ ಪಡೆಯುವಲ್ಲಿ ಮಾತ್ರ ಯಶಸ್ವಿಯಾಗಿವೆ. ಇತರರಿಗೆ ಯಾವುದೇ ಸ್ಥಾನ ದೊರೆತಿಲ್ಲ. ಒಟ್ಟಾರೆ ಮಹಿಳಾ ನಿರ್ದೇಶಕರ ಹುದ್ದೆಯಲ್ಲಿ ಲಿಂಗಾಯಿತ ಸಮುದಾಯವನ್ನು ಹೊರತುಪಡಿಸಿದರೆ ಉಳಿದಂತೆ ಕೆಲಮಟ್ಟಿಗೆ ನ್ಯಾಯಬದ್ಧವಾಗಿ ಹುದ್ದೆಗಳು ವಿತರಣೆಯಾಗಿರುವುದು ತಿಳಿಯುತ್ತದೆ. ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆಯಲ್ಲಿ ಕಾರ್ಯದರ್ಶಿಗಳ ಪಾತ್ರ ಮುಖ್ಯವಾದುದಾಗಿದೆ.

ಸಂಘದ ಆಡಳಿತ ಮಂಡಳಿ ಯಾವುದೇ ಅಧಿಕಾರವನ್ನು ಹೊಂದಿರುವುದಿಲ್ಲ. ಕಾರ್ಯದರ್ಶಿ ಹುದ್ದೆಯು ಪ್ರಮುಖವಾಗಿ ಲಿಂಗಾಯಿತ ಸಮುದಾಯಕ್ಕೆ ಒಳಪಟ್ಟಿರುವುದು ಕಂಡುಬರುತ್ತದೆ. ಉಳಿದಂತೆ ಇತರೆ ಜಾತಿಗಳಿಗೆ ಅತೀ ಕಡಿಮೆ ಸ್ಥಾನಗಳು ದೊರೆತಿವೆ. ಹಲವು ಕೆಳ ಸಮುದಾಯಗಳಿಗೆ ಕಾರ್ಯದರ್ಶಿ ಹುದ್ದೆ ದೊರೆಯದೇ ಇರುವುದು ತಿಳಿಯುತ್ತದೆ. ಅಂದರೆ ಪ್ರಧಾನ ಹುದ್ದೆಗಳಲ್ಲಿರುವ ಸಮುದಾಯಗಳು ಇನ್ನುಳಿದ ಹುದ್ದೆಗಳನ್ನೂ ಸಹ ತಮ್ಮ ಸಮುದಾಯದವರಿಗೆ ನೀಡಿ ಆ ಮೂಲಕ ತಮ್ಮ ಸಮುದಾಯದ ಹಿತಸಾಧನೆ ಮಾಡಿಕೊಳ್ಳುವ ಸಾಧ್ಯತೆಗಳಿರುತ್ತವೆ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

**೬.೨.೨. ನೀ.ಬ.ಸ. ಸಂಘಗಳ ಪದಾಧಿಕಾರಿಗಳ ಶೈಕ್ಷಣಿಕ ಮಟ್ಟ**

ಇಂದು ಅಭಿವೃದ್ಧಿಯಲ್ಲಿ ಶಿಕ್ಷಣವನ್ನು ಒಂದು ಪ್ರಮುಖ ಮಾನದಂಡವನ್ನಾಗಿ ಪರಿಗಣಿಸಲಾಗಿದೆ. ಶಿಕ್ಷಣವಿಲ್ಲದೆ ಹೊಸ ಆವಿಷ್ಕಾರಗಳನ್ನು ಕೈಗೊಳ್ಳಲು ಸಾಧ್ಯವಾಗುವುದಿಲ್ಲ. ಹೊಸ ಅನ್ವೇಷಣೆಗಳಿಗೆ ಶಿಕ್ಷಣವೇ ಮೂಲ. ನೀ.ಬ.ಸ. ಸಂಘಗಳನ್ನು ಉತ್ತಮವಾಗಿ ನಡೆಸಿಕೊಂಡು ಹೋಗಬೇಕಾದರೆ ಅದರ ಪದಾಧಿಕಾರಿಗಳು ಉತ್ತಮ ಶಿಕ್ಷಣವನ್ನು ಹೊಂದಿರಬೇಕಾಗುತ್ತದೆ. ಆದುದರಿಂದ ಈ ಸಂಘಗಳಲ್ಲಿ ಪದಾಧಿಕಾರಿಗಳು ಯಾವ ಮಟ್ಟದ ಶಿಕ್ಷಣವನ್ನು ಪಡೆದಿದ್ದಾರೆ ಎನ್ನುವುದನ್ನು ತಿಳಿದುಕೊಳ್ಳುವ ಅವಶ್ಯಕತೆಯಿದೆ.

## ಪದಾಧಿಕಾರಿಗಳ ಶಿಕ್ಷಣ ಮಟ್ಟ

ಕೋಷ್ಟಕ : ೬.೪

| ಕ್ರ.ಸಂ. | ಶಿಕ್ಷಣದ ವಿವರ | ಅಧ್ಯಕ್ಷ | ಉಪಾಧ್ಯಕ್ಷ | ಪು.ನಿರ್ದೇಶಕ | ಮ.ನಿರ್ದೇಶಕ | ಕಾರ್ಯದರ್ಶಿ |
|---|---|---|---|---|---|---|
| ೦೧. | ಪ್ರಾಥಮಿಕ | ೮.೩೩ | ೨೦.೦೦ | ೩೬.೦೦ | ೩೭.೫ | ೧೮.೧೮ |
| ೦೨. | ಪ್ರೌಢ | ೫೬.೦೦ | ೨೮.೦೦ | ೪೦.೦೦ | ೩೩.೩೩ | ೨೨.೭೨ |
| ೦೩. | ಪದವಿಪೂರ್ವ | ೪.೦೦ | ೧೨.೦೦ | ೮.೦೦ | ೮.೩೩ | ..... |
| ೦೪. | ಪದವಿ | ೨೪.೦೦ | ೩೨.೦೦ | ೧೦.೬೬ | ..... | ೫೦.೦೦ |
| ೦೫. | ಸ್ನಾತಕೋತ್ತರ ಪದವಿ | ೮.೩೩ | ೪.೦೦ | ೧.೩೩ | ..... | ೯.೦೯ |
| ೦೬. | ಅನಕ್ಷರಸ್ಥರು | ..... | ೪.೦೦ | ೪.೦೦ | ೨೦.೮೩ | ..... |
| | ಒಟ್ಟು | ೧೦೦ | ೧೦೦ | ೧೦೦ | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ನೀ.ಬ.ಸ. ಸಂಘಗಳ ವಿವಿಧ ಪದಾಧಿಕಾರಿಗಳಲ್ಲಿ ಶೈಕ್ಷಣಿಕ ಸ್ಥಿತಿಗತಿ ತಿಳಿಯುತ್ತದೆ. ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಸಂಪೂರ್ಣ ಅಕ್ಷರಸ್ಥರಾಗಿದ್ದು ಪ್ರಾಥಮಿಕ ಶಿಕ್ಷಣಕ್ಕಿಂತ ಪ್ರೌಢ ಮತ್ತು ಪದವಿ ಶಿಕ್ಷಣವನ್ನು ಪಡೆದವರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಇದೇ ಸ್ಥಿತಿ ಕೆಲಮಟ್ಟಿಗೆ ಉಪಾಧ್ಯಕ್ಷರಲ್ಲೂ ಕಾಣುತ್ತದೆ. ಆದರೆ ಅವರಲ್ಲಿ ಶೇಕಡ ೪ ರಷ್ಟು ಅನಕ್ಷರಸ್ಥರಿದ್ದಾರೆ. ಪುರುಷ ನಿರ್ದೇಶಕರಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಪಡೆದವರು ಶೇಕಡ ೭೬ ರಷ್ಟು. ಉಳಿದಂತೆ ಶೇಕಡ ೪ ರಷ್ಟು ಅವರಲ್ಲೂ ಅನಕ್ಷರಸ್ಥರಿರುವುದು ಕಂಡುಬರುತ್ತದೆ.

ಮಹಿಳಾ ನಿರ್ದೇಶಕರ ಶಿಕ್ಷಣದ ಸ್ಥಿತಿಗತಿಗಳು ಇತರೆ ಪದಾಧಿಕಾರಿಗಳಿಗಿಂತ ಭಿನ್ನವಾಗಿದೆ. ಬಹುತೇಕ ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಪೂರೈಸಿದ್ದಾರೆ. ಉಳಿದಂತೆ ಪ್ರೌಢಶಿಕ್ಷಣ ಪಡೆದವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಶೇಕಡ ೩೩ ರಷ್ಟು ಮಹಿಳೆಯರು ಮಾತ್ರ ಪದವಿಪೂರ್ವ ಶಿಕ್ಷಣವನ್ನು ಪಡೆದಿದ್ದಾರೆ. ಮಹಿಳಾ ನಿರ್ದೇಶಕರು ಪದವಿ ಅಥವಾ ಸ್ನಾತಕೋತ್ತರ ಪದವಿ ಶಿಕ್ಷಣವನ್ನು ಪಡೆದಿಲ್ಲ. ಇದಲ್ಲದೆ ಇಲ್ಲಿ ಕಂಡುಬರುವ ಮುಖ್ಯ ಸಂಗತಿಯೆಂದರೆ ಒಟ್ಟಾರೆ ಪದಾಧಿಕಾರಿಗಳಲ್ಲಿ ಮಹಿಳಾ ನಿರ್ದೇಶಕರಲ್ಲಿ ಅನಕ್ಷರಸ್ಥರು ಶೇಕಡ ೨೦ ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿರುವುದು. ಅಂದರೆ ಶೈಕ್ಷಣಿಕವಾಗಿಯೂ ಮಹಿಳೆ ಇನ್ನೂ ದುಃಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಇಂತಹ ದುಃಸ್ಥಿತಿಯ ಕಾರಣದಿಂದ ಮಹಿಳಾ ಪದಾಧಿಕಾರಿಗಳು ನೀ.ಬ.ಸ. ಸಂಘಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಗಿಲ್ಲ. ಜೊತೆಗೆ ಮುಖ್ಯ ನಿರ್ಧಾರಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ಒಡಮೂಡಿಸಲು

ಅವಕಾಶವಾಗುವುದಿಲ್ಲ. ಒಟ್ಟಾರೆ ನೀ.ಬ.ಸ. ಸಂಘಗಳಲ್ಲಿ ಮಹಿಳಾ ನಿರ್ದೇಶಕರ ಭಾಗವಹಿಸುವಿಕೆಗೆ ಶಿಕ್ಷಣ ಇಲ್ಲದೇ ಇರುವುದು ಒಂದು ತೊಡಕಾಗಿದೆ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

ನೀ.ಬ.ಸ. ಸಂಘಗಳ ಪ್ರಮುಖ ಸ್ಥಾನಗಳಲ್ಲಿರುವ ಪದಾಧಿಕಾರಿಗಳು ಉತ್ತಮ ಶಿಕ್ಷಣ ಪಡೆದಿರುವುದರಿಂದ ಇತರ ಮೂಲಗಳಿಂದ ಸೂಕ್ತ ಮಾಹಿತಿ ಪಡೆಯಲು ಅವರು ಸಫಲರಾಗುತ್ತಾರೆ. ಉಳಿದಂತೆ ಇತರೆ ಪದಾಧಿಕಾರಿಗಳು ಅವಕಾಶಗಳನ್ನು ಹಾಗೂ ಮಾಹಿತಿಯನ್ನು ಪಡೆಯುವಲ್ಲಿ ಯಶಸ್ವಿಯಾಗದ ಕಾರಣ ಅವರ ಪಾಲ್ಗೊಳ್ಳುವಿಕೆಯ ಮಟ್ಟವೂ ಕಡಿಮೆಯಾಗಿದೆ. ಪದಾಧಿಕಾರಿಗಳು ಅವಕಾಶಗಳನ್ನು ತಮ್ಮ ಹಿತಸಾಧನೆಗೆ ಪ್ರಬಲ ಪದಾಧಿಕಾರಿಗಳು ಬಳಕೆ ಮಾಡಿಕೊಳ್ಳುವ ಸಂಭವವು ಹೆಚ್ಚು. ಇದರಿಂದ ಅವಕಾಶ ವಂಚಿತರಿಗೆ ಅತೃಪ್ತಿಯಾಗಿ ಸಂಘಗಳಲ್ಲಿ ಭಾಗವಹಿಸುವ ಪ್ರಮಾಣವೂ ಕಡಿಮೆ ಆಗಬಹುದು. ಒಟ್ಟಾರೆ ವಿವಿಧ ಪದಾಧಿಕಾರಿಗಳ ಶೈಕ್ಷಣಿಕ ಮಟ್ಟದಲ್ಲಿನ ವ್ಯತ್ಯಾಸಗಳು ಅಂತಿಮವಾಗಿ ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆ ಮೇಲೆ ಪ್ರತಿಕೂಲ ಪರಿಣಾಮ ಬೀರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

**೬.೨.೩. ನೀ.ಬ.ಸ.ಸಂಘಗಳ ಪದಾಧಿಕಾರಿಗಳ ಭೂಹಿಡುವಳಿ ಪ್ರಮಾಣ ಮತ್ತು ವರಮಾನದ ಮಟ್ಟ**

ಸಮಾಜದಲ್ಲಿ ಭೂಒಡೆತನ ವ್ಯಕ್ತಿಯ ಸ್ಥಾನಮಾನದ ಒಂದು ಪ್ರತೀಕವಾಗಿದೆ. ಬಹುತೇಕವಾಗಿ ಅಧಿಕ ಭೂಹಿಡುವಳಿ ಹೊಂದಿರುವವರ ವರಮಾನವೂ ಉತ್ತಮವಾಗಿದ್ದು ಅವರು ಆರ್ಥಿಕವಾಗಿ ಬಲಿಷ್ಠರಾಗಿರುತ್ತಾರೆ. ಭೂಮಾಲೀಕತ್ವವು ಊಳಿಗಮಾನ್ಯ ವ್ಯವಸ್ಥೆಗೆ ದಾರಿ ಕಲ್ಪಿಸುತ್ತದೆ. ಈ ಊಳಿಗಮಾನ್ಯ ಪದ್ಧತಿಯಿಂದ ಉಳ್ಳವರು ಮತ್ತು ಇಲ್ಲದವರು ಎನ್ನುವ ಎರಡು ವರ್ಗಗಳು ನಿರ್ಮಾಣವಾಗುತ್ತವೆ. ಇದರಿಂದ ಶೋಷಕರು ಮತ್ತು ಶೋಷಿತರು ಎನ್ನುವ ಪಂಗಡಗಳು ಸೃಷ್ಟಿಯಾಗುತ್ತವೆ. ಇಂದು ಕರ್ನಾಟಕದ ಮಟ್ಟಿಗೆ ಇಂತಹ ಕಠೋರವಾದ ಊಳಿಗಮಾನ್ಯ ಪದ್ಧತಿ ಆಚರಣೆಯಲ್ಲಿಲ್ಲ. ಭೂಸುಧಾರಣೆಗಳಿಂದ ಕೆಲಮಟ್ಟಿಗೆ ಈ ವ್ಯವಸ್ಥೆ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ. ಆದರೂ ಅನಾದಿ ಕಾಲದಿಂದ ಬಂದ ಭೂಒಡೆತನದಿಂದ ದೊಡ್ಡ ಪ್ರಮಾಣದ ಭೂಹಿಡುವಳಿಗಳನ್ನು ಹೊಂದಿರುವ ಭೂಮಾಲೀಕರು ಇದ್ದಾರೆ. ಇದಕ್ಕೆ ವಿರುದ್ಧವಾಗಿ ಅತಿಕಡಿಮೆ ಭೂಮಿಯನ್ನು ಹೊಂದಿರುವ, ತುಂಡು ಭೂಮಿಗಳನ್ನು ಹೊಂದಿರುವ ಅಸಂಖ್ಯಾತ ಸೀಮಾಂತ ಹಿಡುವಳಿದಾರರನ್ನು ನಾವು ಕಾಣಬಹುದಾಗಿದೆ. ಅವಿಭಕ್ತ ಕುಟುಂಬ ವ್ಯವಸ್ಥೆ ಶಿಥಿಲವಾಗಿ ವಿಭಕ್ತ ಕುಟುಂಬಗಳು ಅಧಿಕವಾದಂತೆ ಅತಿ ಸಣ್ಣ ಹಿಡುವಳಿದಾರರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಜೊತೆಗೆ ಭೂಮಿಯೇ ಇಲ್ಲದ ಭೂರಹಿತ ಕೃಷಿಕಾರ್ಮಿಕ ಅಧಿಕ ಸಂಖ್ಯೆಯಲ್ಲಿರುವುದು ತಿಳಿದುಬರುತ್ತದೆ.

ಭೂ ಮಾಲೀಕತ್ವ ಕೇವಲ ಆರ್ಥಿಕ ಸ್ಥಾನಮಾನವನ್ನು ಹೆಚ್ಚಿಸದೆ ವ್ಯಕ್ತಿಯ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಾನಮಾನದ ಹೆಚ್ಚಳಕ್ಕೂ ಕಾರಣವಾಗುತ್ತದೆ. ಇದರಿಂದ ನೀ.ಬ.ಸ. ಸಂಘಗಳಲ್ಲಿರುವ ವಿವಿಧ ಪದಾಧಿಕಾರಿಗಳು ಯಾವ ಪ್ರಮಾಣದಲ್ಲಿ ಭೂಹಿಡುವಳಿಗಳನ್ನು ಹೊಂದಿದ್ದಾರೆ ಹಾಗೂ ಆರ್ಥಿಕವಾಗಿ

ಯಾವ ಮಟ್ಟದ ಆದಾಯವನ್ನು ಗಳಿಸುತ್ತಿದ್ದಾರೆ ಎನ್ನುವುದನ್ನು ತಿಳಿದುಕೊಳ್ಳಬೇಕಾಗಿದೆ. ಅದೇ ರೀತಿ ಭೂಮಾಲೀಕತ್ವ ಮತ್ತು ವರಮಾನ ಹೇಗೆ ಸಂಘಗಳ ಕಾರ್ಯನಿರ್ವಹಣೆಯ ಮೇಲೆ ತನ್ನ ಹಿಡಿತ ಸಾಧಿಸುತ್ತವೆ ಎನ್ನುವುದನ್ನು ತಿಳಿದುಕೊಳ್ಳಬಹುದು.

### ಸೀ.ಒ.ಸ.ಸಂಘಗಳ ಪದಾಧಿಕಾರಿಗಳ ಭೂಹಿಡುವಳಿಗಳ ವಿವರ

**ಕೋಷ್ಟಕ : ೬.೫** (ಶೇಕಡವಾರು)

| ಕ್ರ.ಸಂ. | ಭೂಹಿಡುವಳಿಗಳ ಪ್ರಮಾಣ | ಅಧ್ಯಕ್ಷ | ಉಪಾಧ್ಯಕ್ಷ | ಪು.ನಿರ್ದೇಶಕ | ಮ.ನಿರ್ದೇಶಕ | ಕಾರ್ಯದರ್ಶಿ |
|---|---|---|---|---|---|---|
| ೦೧. | ಸಣ್ಣ ಹಿಡುವಳಿದಾರರು ೧ ರಿಂದ ೪ ಎಕರೆ | ೨೬ | ೩೮ | ೬೮ | ೭೮ | ೮೦ |
| ೦೨. | ಮಧ್ಯಮ ಹಿಡುವಳಿದಾರರು ೫ ರಿಂದ ೧೦ ಎಕರೆ | ೪೧ | ೪೩ | ೧೮ | ೧೪ | ೨೦ |
| ೦೩. | ದೊಡ್ಡ ರೈತರು ೧೦ ಎಕರೆ | ೩೩ | ೧೯ | ೧೪ | ೦೮ | ..... |
| ೦೪. | ಒಟ್ಟು | ೧೦೦ | ೧೦೦ | ೧೦೦ | ೧೦೦ | ..... |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಅಧಿಕ ಪ್ರಮಾಣದ ಭೂಹಿಡುವಳಿಗಳನ್ನು ಹೊಂದಿರುವುದು ಕಂಡುಬರುತ್ತದೆ. ಆನಂತರ ಪುರುಷ ನಿರ್ದೇಶಕರ ಹಿಡುವಳಿಗಳ ಗಾತ್ರ ಕಡಿಮೆ ಇದ್ದು, ೧ ರಿಂದ ೪ ಎಕರೆ ಭೂಹಿಡುವಳಿಗಳನ್ನು ಹೊಂದಿರುವವರು ಶೇಕಡ ೬೮ ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿರುವುದು ತಿಳಿಯುತ್ತದೆ. ಅಂದರೆ ಸಣ್ಣ ಹಿಡುವಳಿದಾರರ ಸಂಖ್ಯೆ ಪುರುಷ ನಿರ್ದೇಶಕರಲ್ಲಿ ಹೆಚ್ಚಾಗಿರುವುದು ಕಾಣುತ್ತದೆ. ಪದಾಧಿಕಾರಿಗಳಾಗಿ ಮುಖ್ಯ ಸ್ಥಾನಗಳಿಗೆ ಆಯ್ಕೆಯಾಗುವವರು ದೊಡ್ಡ ಹಿಡುವಳಿದಾರರಾಗಿರುತ್ತಾರೆ. ಆರ್ಥಿಕವಾಗಿ ಪ್ರಬಲರಾಗಿರುವವರಿಗೆ ಇಂತಹ ಸ್ಥಾನಗಳು ದೊರೆಯುತ್ತವೆ ಎನ್ನುವುದು ಈ ಕೋಷ್ಟಕದಿಂದ ತಿಳಿದುಬರುತ್ತದೆ. ಇದಕ್ಕೆ ವಿರುದ್ಧವಾದ ಸ್ಥಿತಿ ಉಳಿದ ಪದಾಧಿಕಾರಿಗಳದ್ದಾಗಿರುತ್ತದೆ.

ಎಲ್ಲದಕ್ಕಿಂತಲೂ ಮುಖ್ಯ ಸಂಗತಿ ಏನೆಂದರೆ ಮಹಿಳಾ ನಿರ್ದೇಶಕರ ಭೂಹಿಡುವಳಿಗಳು ಅತ್ಯಂತ ಸಣ್ಣವಾಗಿದ್ದು, ಶೇಕಡ ೭೮ ಕ್ಕಿಂತ ಹೆಚ್ಚಿನ ಮಹಿಳಾ ನಿರ್ದೇಶಕರು ಸಣ್ಣ ಹಿಡುವಳಿದಾರರಾಗಿದ್ದಾರೆ. ಅಂದರೆ ಪಿತ್ರಾರ್ಜಿತ ಆಸ್ತಿಯ ಹಕ್ಕು ಮಹಿಳೆಗೆ ನೀಡಲಾಗಿದ್ದರೂ ಅದು ವಾಸ್ತವವಾಗಿ ಇನ್ನೂ ಆಚರಣೆಗೆ ಬಂದಿಲ್ಲವೆಂದು ಇದರಿಂದ ವೇದ್ಯವಾಗುತ್ತದೆ. ಮಧ್ಯಮ ಹಿಡುವಳಿದಾರರ ಸಂಖ್ಯೆಯೂ ಕಡಿಮೆಯಿದ್ದು ದೊಡ್ಡ ಹಿಡುವಳಿದಾರರ ಪ್ರಮಾಣ ಶೇಕಡ ೮ ಕ್ಕಿಂತ ಕಡಿಮೆಯಿದೆ.

### ನೀರು ಬಳಕೆದಾರರ ಸಹಕಾರ ಸಂಘಗಳ ಪದಾಧಿಕಾರಿಗಳ ವಾರ್ಷಿಕ ವರಮಾನದ ವಿವರ

ಕೋಷ್ಟಕ : ೬.೬

| ಕ್ರ.ಸಂ. | ವರಮಾನದ ಪ್ರಮಾಣ ಶೇ. | ಅಧ್ಯಕ್ಷ | ಉಪಾಧ್ಯಕ್ಷ | ಪು.ನಿರ್ದೇಶಕ | ಮ.ನಿರ್ದೇಶಕ | ಕಾರ್ಯದರ್ಶಿ |
|---|---|---|---|---|---|---|
| ೦೧. | ೧ ಸಾವಿರದಿಂದ ೧೧ ಸಾವಿರದವರೆಗೆ | .... | .... | .... | .... | ೦೩ |
| ೦೨. | ೧೧ ಸಾವಿರದಿಂದ ೨೦ ಸಾವಿರದವರೆಗೆ | .... | .... | .... | .... | ೬೨ |
| ೦೩. | ೨೦ ಸಾವಿರದಿಂದ ೫೦ ಸಾವಿರದವರೆಗೆ | .... | .... | .... | ೦೯ | ೩೫ |
| ೦೪. | ೫೦ ಸಾವಿರದಿಂದ ೧ ಲಕ್ಷದವರೆಗೆ | ೧೨ | ೧೪ | ೩೨ | ೩೫ | .... |
| ೦೫. | ೧ ಲಕ್ಷದಿಂದ ೫ ಲಕ್ಷದವರೆಗೆ | ೨೮ | ೩೫ | ೪೮ | ೫೬ | .... |
| ೦೬. | ೫ ಲಕ್ಷಕ್ಕೆ ಮೇಲ್ಪಟ್ಟು | ೬೦ | ೫೧ | ೨೦ | .... | .... |
| ೦೭. | ಒಟ್ಟು | ೧೦೦ | ೧೦೦ | ೧೦೦ | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಇದೇ ಸ್ಥಿತಿಯನ್ನು ವರಮಾನದಲ್ಲೂ ಕಾಣಬಹುದು. ವರಮಾನದಲ್ಲಿ ಕ್ರಮವಾಗಿ ಅಧ್ಯಕ್ಷರು, ಉಪಾಧ್ಯಕ್ಷರು ಆದಿಕ್ಯವನ್ನು ಹೊಂದಿದ್ದಾರೆ. ಪುರುಷ ನಿರ್ದೇಶಕರು ಮತ್ತು ಮಹಿಳಾ ನಿರ್ದೇಶಕರು ಸರಿಸುಮಾರು ಒಂದೇ ಸ್ಥಿತಿಯಲ್ಲಿರುವುದು ಕಂಡುಬಂದರೂ ಮಹಿಳೆಯರು ಪುರುಷರಿಗಿಂತಲೂ ಕಡಿಮೆ ಆದಾಯ ಹೊಂದಿರುವುದು ಕೋಷ್ಟಕದಲ್ಲಿ ಸ್ಪಷ್ಟವಾಗುತ್ತದೆ. ಪದಾಧಿಕಾರಿಗಳಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು ಪುರುಷ ನಿರ್ದೇಶಕರು ಹಾಗೂ ಮಹಿಳಾ ನಿರ್ದೇಶಕರು ಬಡತನ ರೇಖೆಗಿಂತ ಕೆಳಗಿರುವವರು ಯಾರು ಇಲ್ಲ. ಈ ಪ್ರಕ್ರಿಯೆಗೆ ಇನ್ನುಳಿದ ಅಧಿಕಾರಿಗಳು ಹೊರತಾಗಿಲ್ಲ. ಎಲ್ಲರೂ ಈ ಎರಡೂ ರೇಖೆಗಳಿಗಿಂತ ಮೇಲಿದ್ದಾರೆ. ಅಂದರೆ ನೀ.ಬ.ಸ. ಸಂಘಗಳಲ್ಲಿ ಉನ್ನತ ಸ್ಥಾನಗಳಲ್ಲಿ ಸಣ್ಣ ಹಿಡುವಳಿದಾರರಿಗೆ ಮತ್ತು ಕಡಿಮೆ ಆದಾಯ ಉಳ್ಳವರಿಗೆ ಯಾವುದೇ ಅವಕಾಶ ಸಿಗುವುದಿಲ್ಲ ಎನ್ನುವುದು ಇದರಿಂದ ತಿಳಿಯುತ್ತದೆ. ಒಟ್ಟಾರೆ ನೀ.ಬ.ಸ. ಸಂಘಗಳಲ್ಲಿ ಮುಖ್ಯಸ್ಥಾನಗಳನ್ನು ಪಡೆದಿರುವವರು ಆರ್ಥಿಕವಾಗಿ, ಭೂ ಹಿಡುವಳಿಗಳ ಪ್ರಮಾಣದಲ್ಲಿ ಉಚ್ಛಾಯ ಸ್ಥಿತಿಯಲ್ಲಿರುವುದು ತಿಳಿಯುತ್ತದೆ. ಅನಂತರದ ಹುದ್ದೆಗಳಲ್ಲಿ ಇರುವವರು

ಅವರಿಗಿಂತಲೂ ಕೆಳಮಟ್ಟದಲ್ಲಿರುತ್ತಾರೆ ಎನ್ನುವುದು ನಿಜವಾಗಿದೆ. ಇವರಿಬ್ಬರ ಸ್ಥಾನಮಾನಗಳೊಂದಿಗೆ ಮಹಿಳೆಯ ಸ್ಥಾನವನ್ನು ಹೋಲಿಕೆ ಮಾಡಿದರೆ ಆಕೆಯದು ಕೊನೆಯ ಸ್ಥಾನ.

ನೀ.ಬ.ಸ. ಸಂಘಗಳಲ್ಲಿ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿರುವವರು ಸಣ್ಣ ಹಿಡುವಳಿದಾರರಾಗಿದ್ದು ಅತಿ ಕಡಿಮೆ ವರಮಾನವನ್ನು ಪಡೆಯುತ್ತಿದ್ದಾರೆ. ಇವರಿಗೆ ಬರುವ ಸಂಭಾವನೆಯು ಅತ್ಯಂತ ಕಡಿಮೆ. ಸಂಘಗಳ ಸ್ಥಾಪನೆಯ ಆರಂಭದಲ್ಲಿ ಕಾರ್ಯದರ್ಶಿಗಳ ಹುದ್ದೆಗಳು ಖಾಯಂ ಆಗಬಹುದೆಂದು ಸಂಘದ ಕಾರ್ಯಚಟುವಟಿಕೆಗಳಲ್ಲಿ ಅತ್ಯಂತ ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಜೊತೆಗೆ ತಮ್ಮ ಸ್ವಂತ ಖರ್ಚಿನಲ್ಲಿ ಸಂಘದ ಹಲವಾರು ವೆಚ್ಚಗಳನ್ನು ಸರಿದೂಗಿಸುತ್ತಿದ್ದರು. ಆದರೆ ಸಂಘಗಳಲ್ಲಿ ಯಾವುದೇ ಹಣಕಾಸಿನ ಚಟುವಟಿಕೆ ಸರಿಯಾಗಿ ನಡೆಯದ ಕಾರಣ ಮತ್ತು ತಮ್ಮ ಹುದ್ದೆಯ ಖಾಯಂ ಆಗುವ ಲಕ್ಷಣಗಳು ಕಾಣದ ಕಾರಣ ಅನೇಕರು ತಮ್ಮ ಹುದ್ದೆಗಳಿಗೆ ರಾಜೀನಾಮೆ ನೀಡಿರುವ ಪ್ರಕರಣಗಳು ನಮಗೆ ಸಾಕಷ್ಟು ಸಿಗುತ್ತವೆ. ಕೆಲವು ಸಂಘಗಳು ಕಾರ್ಯದರ್ಶಿಗಳನ್ನು ನೇಮಕ ಮಾಡಿಕೊಳ್ಳದೇ ಅಧ್ಯಕ್ಷರೋ ಅಥವಾ ಉಪಾಧ್ಯಕ್ಷರೋ ಕಾರ್ಯದರ್ಶಿಗಳ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

ಒಟ್ಟಾರೆ ನಿಯಮದಂತೆ ಯಾವುದೇ ಜಮೀನು ಇಲ್ಲದವರನ್ನು ಕಾರ್ಯದರ್ಶಿಗಳನ್ನಾಗಿ ನೇಮಕ ಮಾಡಬೇಕೆಂದಿದ್ದರೂ ಜಮೀನು ಇದ್ದಂತವರೇ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಕಾರ್ಯದರ್ಶಿಗಳಾಗಿರುವುದು ಕಂಡುಬರುತ್ತದೆ. ಅವರಿಗೆ ಬರುವ ಸಂಭಾವನೆಯು ಅತ್ಯಂತ ಅಲ್ಪಪ್ರಮಾಣದ್ದಾಗಿರುವುದರಿಂದ ಅನೇಕ ಸಂಘಗಳಲ್ಲಿ ಅವರು ಹೆಸರಿಗೆ ಮಾತ್ರ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ.

**೬.೨.೪. ನೀ.ಬ.ಸ. ಸಂಘಗಳ ಪದಾಧಿಕಾರಿಗಳು ಇತರೆ ಸಂಘ ಸಂಸ್ಥೆಗಳಲ್ಲಿ ಪಡೆದಿರುವ ಸ್ಥಾನ**

ಗ್ರಾಮೀಣ ಸಮಾಜದಲ್ಲಿ ಎರಡು ರೀತಿಯ ಸಂಘ-ಸಂಸ್ಥೆಗಳನ್ನು ಕಾಣಬಹುದು. ಜಾತಿವಾರು ಸಂಘಗಳು, ಯುವಕ ಸಂಘಗಳು, ಹಬ್ಬ-ಹರಿದಿನಗಳು ಉತ್ಸವಗಳ ಸಲುವಾಗಿರುವ ಸಾಂಸ್ಕೃತಿಕ ಸಂಘ ಸಂಸ್ಥೆಗಳು ಅನೌಪಚಾರಿಕ ಗುಂಪಿಗೆ ಬರುತ್ತವೆ. ಉಳಿದಂತೆ ಪಂ.ರಾ. ಸಂಸ್ಥೆಗಳು, ಕೃಷಿ ಸಹಕಾರ ಸಂಘಗಳು, ಮಾರುಕಟ್ಟೆ ಸಮಿತಿಗಳು, ಹಾಲು ಉತ್ಪಾದಕ ಸಹಕಾರ ಸಂಘ, ನೀ.ಬ.ಸ. ಸಂಘಗಳು ಇವೇ ಮುಂತಾದವು ಔಪಚಾರಿಕ ಗುಂಪಿಗೆ ಸೇರುತ್ತವೆ. ಈ ಎರಡೂ ರೀತಿಯ ಸಂಘ-ಸಂಸ್ಥೆಗಳಲ್ಲಿ ಅಧಿಕಾರ ಸ್ಥಾನ ಹೊಂದಿರುವ ವ್ಯಕ್ತಿಗಳು ಗ್ರಾಮದ ಎಲ್ಲ ಚಟುವಟಿಕೆಗಳಲ್ಲಿ ತಮ್ಮ ಪ್ರಭಾವವನ್ನು ಹೊಂದಿರುತ್ತಾರೆ. ಆ ಮೂಲಕ ತಮ್ಮ ಹಿತಾಸಕ್ತಿಗೆ ಧಕ್ಕೆಯಾಗದ ರೀತಿ ಸಂಘ-ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುವುದು ಸಹಜವಾದದ್ದೆ.

ಈ ನಿಟ್ಟಿನಲ್ಲಿ ನೀ.ಬ.ಸ. ಸಂಘಗಳಲ್ಲಿ ವಿವಿಧ ಹುದ್ದೆಗಳನ್ನು ಅಲಂಕರಿಸಿರುವವರು ಈಗಾಗಲೇ ಹಲವಾರು ಸಂಸ್ಥೆಗಳಲ್ಲಿ ಉನ್ನತ ಸ್ಥಾನಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರ ಬಗ್ಗೆ ಮತ್ತು ಹಾಲಿ ಕೆಲವು

ಸಂಘಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದರ ಹಿನ್ನೆಲೆಯಲ್ಲಿ ಅವರ ಅಧಿಕಾರ, ನಿಯಂತ್ರಣ ಮತ್ತು ಪ್ರಾಬಲ್ಯಗಳನ್ನು ಕಂಡುಕೊಳ್ಳುವುದು ಸೂಕ್ತವಾಗಿದೆ. ಅಂದರೆ ಗ್ರಾಮದ ಹಲವಾರು ಸಂಘ-ಸಂಸ್ಥೆಗಳು ಕೆಲವೇ ಕೆಲವು ವ್ಯಕ್ತಿಗಳ ಹಿಡಿತದಲ್ಲಿದ್ದು ಅದು ಪ್ರಜಾಸತ್ತಾತ್ಮಕ ಪ್ರಕ್ರಿಯೆಗೆ ಹಿನ್ನಡೆಯನ್ನುಂಟುಮಾಡುತ್ತದೆ. ಜೊತೆಗೆ ಅಧಿಕಾರ ವಿಕೇಂದ್ರೀಕರಣಕ್ಕೆ ಅವಕಾಶ ಕಲ್ಪಿಸದೆ ಅಧಿಕಾರ ಕೇಂದ್ರೀಕರಣಕ್ಕೆ ದಾರಿ ಮಾಡಿ ಕೊಡುತ್ತಲಿದೆ. ಹೀಗಾಗಿ ಅಪ್ರಜಾಸತ್ತಾತ್ಮಕತೆ ಮತ್ತು ಕೇಂದ್ರೀಕರಣವು ಅನೇಕ ಸಮಸ್ಯೆಗಳಿಗೆ ಕಾರಣವಾಗಿ ಸಹಕಾರ, ಸಮನ್ವಯತೆ, ಸ್ವಾತಂತ್ರ್ಯ ಮತ್ತು ಸಮಾನತೆಗೆ ಧಕ್ಕೆಯನ್ನುಂಟು ಮಾಡುತ್ತಲಿದೆ. ನೀ.ಬ.ಸ. ಸಂಘಗಳಲ್ಲೂ ಸಹ ಇಂತಹದೇ ಸ್ಥಿತಿ ಇದೆ ಎನ್ನುವುದನ್ನು ತಿಳಿದುಕೊಳ್ಳಲು ಕ್ಷೇತ್ರಕಾರ್ಯದಲ್ಲಿ ಈ ಮಾಹಿತಿಯನ್ನು ಪಡೆಯಲಾಗಿದೆ.

**ನೀ.ಬ.ಸ.ಸಂಘಗಳ ಪದಾಧಿಕಾರಿಗಳು ಇತರೆ ಸಂಘ ಸಂಸ್ಥೆಗಳಲ್ಲಿ ಹೊಂದಿರುವ ಸ್ಥಾನ**

**ಕೋಷ್ಟಕ : ೬.೭**

| ಕ್ರ.ಸಂ. | ಹೊಂದಿರುವ ಸ್ಥಾನ | ಅಧ್ಯಕ್ಷ | ಉಪಾಧ್ಯಕ್ಷ | ಪು.ನಿರ್ದೇಶಕ | ಮ.ನಿರ್ದೇಶಕ | ಕಾರ್ಯದರ್ಶಿ |
|---|---|---|---|---|---|---|
| ೦೧. | ಹಾಲಿ | ೩೨.೦೦ | ೩೨.೦೦ | ೮.೦೦ | ೪.೧೬ | .... |
| ೦೨. | ಮಾಜಿ | ೪೮.೦೦ | ೪೮.೦೦ | ೧೬.೦೦ | ೪.೧೬ | ೯.೦೯ |
| ೦೩. | ಯಾವುದೂ ಇಲ್ಲ | ೨೦.೦೦ | ೨೦.೦೦ | ೭೬.೦೦ | ೯೧.೬೬ | ೯೦.೯೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಕೋಷ್ಟಕದಲ್ಲಿ ಇರುವಂತೆ ನೀ.ಬ.ಸ. ಸಂಘಗಳು ಶೇಕಡ ೮೦ ರಷ್ಟು ಅಧ್ಯಕ್ಷ ಮತ್ತು ಉಪಾಧ್ಯಕ್ಷರು ಇತರೆ ಸಂಘ-ಸಂಸ್ಥೆಗಳಲ್ಲಿ ಹಾಲಿ ಇಲ್ಲವೇ ಮಾಜಿ ಸ್ಥಾನಗಳನ್ನು ಪಡೆದವರಾಗಿದ್ದಾರೆ. ಶೇಕಡ ೨೦ ರಷ್ಟು ಮಾತ್ರ ಯಾವುದೇ ಸ್ಥಾನ ಪಡೆಯದೇ ಇರುವುದು ಕಂಡುಬಂದಿದೆ. ಪುರುಷ ನಿರ್ದೇಶಕರಲ್ಲಿ ಶೇಕಡ ೨೫ ಕ್ಕಿಂತ ಕಡಿಮೆ ಮಂದಿ ಇತರೆ ಸಂಘ-ಸಂಸ್ಥೆಗಳಲ್ಲಿ ಹುದ್ದೆಗಳನ್ನು ಪಡೆದವರಾಗಿದ್ದಾರೆ. ಶೇಕಡ ೭೫ ಕ್ಕಿಂತ ಹೆಚ್ಚಿನವರು ಯಾವುದೇ ಪದವಿಯನ್ನು ಪಡೆದಿಲ್ಲ. ಮಹಿಳಾ ನಿರ್ದೇಶಕರಲ್ಲಿ ಒಬ್ಬರು ಹಾಲಿ ಮತ್ತೊಬ್ಬರು ಮಾಜಿ ಸ್ಥಾನ ಪಡೆದವರನ್ನು ಹೊರತು ಪಡಿಸಿದರೆ ಉಳಿದಂತೆ ಅವರು ಯಾವ ಸ್ಥಾನಮಾನಗಳಿಗೂ ಬಾಜನರಾಗಿಲ್ಲ. ಗ್ರಾಮದ ಅನೌಪಚಾರಿಕ ಮತ್ತು ಔಪಚಾರಿಕ ಸಂಘಸಂಸ್ಥೆಗಳಲ್ಲಿ ಮಹಿಳೆಗೆ ಯಾವುದೇ ಸ್ಥಾನ ಲಭ್ಯವಿಲ್ಲದೇ ಇರುವುದು ಅವರ ದುಃಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ.

ಕಾರ್ಯದರ್ಶಿಗಳು ಹಾಲಿ ಯಾವುದೇ ಸಂಘ-ಸಂಸ್ಥೆಯಲ್ಲಿ ಸ್ಥಾನ ಪಡೆದಿಲ್ಲ. ಕೇವಲ ಇಬ್ಬರು ಮಾತ್ರ ಇತರೆ ಸಂಸ್ಥೆಗಳಲ್ಲಿ ಅಥವಾ ಕೆಳಹಂತದ ಹುದ್ದೆಗಳನ್ನು ಪಡೆದವರಾಗಿದ್ದಾರೆ. ಹೀಗೆ ವಸ್ತುಸ್ಥಿತಿಯನ್ನು ಅವಲೋಕನ ಮಾಡಿದಾಗ ಅಧಿಕಾರ, ಹುದ್ದೆ, ಉಳ್ಳವರಿಗೆ ಮಾತ್ರ ಪ್ರಾಪ್ತವಾಗುವಂತಹದ್ದಾಗಿದ್ದು,

ತಳಮಟ್ಟದವರಿಗೆ ಇವುಗಳು ದೊರೆಯುವುದು ಅಸಂಭವವೆಂದು ತಿಳಿಯುತ್ತದೆ. ಮೇಲ್ನೋಟಕ್ಕೆ ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ಎಲ್ಲ ಪಾಲುದಾರರಿಗೆ ನ್ಯಾಯಬದ್ಧವಾದ, ಸಮಾನವಾದ ಅವಕಾಶಗಳು ಲಭಿಸುತ್ತವೆ. ಆ ಮೂಲಕ ನೀರಾವರಿ ನಿರ್ವಹಣೆಯಲ್ಲಿ ದಕ್ಷತೆಯನ್ನು ಉನ್ನತ ಕಾರ್ಯಕ್ಷಮತೆಯನ್ನು ಸಾಧಿಸಬಹುದೆಂದು ಕಲ್ಪಿಸಿಕೊಳ್ಳಲಾಗಿತ್ತು. ವಾಸ್ತವದಲ್ಲಿ ಅದು ಈ ಮೇಲ್ಕಂಡ ಎಲ್ಲ ಸಂಗತಿಗಳ ಹಿನ್ನೆಲೆಯಲ್ಲಿ ನಿರೀಕ್ಷಿತ ಮಟ್ಟದಲ್ಲಿ ಸಾಧ್ಯವಾಗದೇ ಇರುವುದು ದೃಢಪಡುತ್ತದೆ.

### ೬.೩. ನೀ.ಬ.ಸ. ಸಂಘಗಳ ಸದಸ್ಯರ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿ

ಭದ್ರಾ ಅಚ್ಚುಕಟ್ಟು ಪ್ರದೇಶ ವ್ಯಾಪ್ತಿಯಲ್ಲಿ ನೀ.ಬ.ಸ. ಸಂಘಗಳು ಹೇಗೆ ಕಾರ್ಯನಿರ್ವಹಿಸುತ್ತಿವೆ? ಎನ್ನುವುದನ್ನು ಆ ಸಂಘಗಳಲ್ಲಿ ಸದಸ್ಯತ್ವ ಪಡೆದಿರುವ ರೈತರ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿಯನ್ನು ಗಮನಿಸಿದರೆ ತಿಳಿಯುತ್ತದೆ. ಪ್ರಸ್ತುತ ಅಧ್ಯಯನ ಕ್ಷೇತ್ರದ ೨೫ ನೀ.ಬ.ಸ. ಸಂಘಗಳಲ್ಲಿ ಒಟ್ಟು ೩೭೫ ಸದಸ್ಯರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ಸಂಘದಿಂದ ಒಟ್ಟು ೧೫ ಸದಸ್ಯರನ್ನು ಕಾಲುವೆಯ ಮೇಲ್ತುದಿ, ಮಧ್ಯಭಾಗ ಹಾಗೂ ಕೆಳತುದಿಯಿಂದ ಆಯ್ದುಕೊಳ್ಳಲಾಗಿದೆ. ಕೆಳತುದಿಯಲ್ಲಿ ನೀರಾವರಿ ಸಮಸ್ಯೆಗಳು ಹೆಚ್ಚಾಗಿ ಕಂಡುಬರುವುದರಿಂದ ಒಟ್ಟು ಸದಸ್ಯರಲ್ಲಿ ಶೇಕಡ ೪೦ ರಷ್ಟು ರೈತರನ್ನು ಮಧ್ಯಭಾಗದಿಂದ ಶೇಕಡ ೩೫ ಸದಸ್ಯರನ್ನು, ಮೇಲ್ತುದಿಯಲ್ಲಿ ಶೇಕಡ ೨೫ ಸದಸ್ಯರನ್ನು ಅಧ್ಯಯನಕ್ಕೆ ಒಳಪಡಿಸಿದೆ. ಇದರಲ್ಲಿ ಎಲ್ಲಾ ಭಾಗಗಳಿಂದ ಶೇಕಡ ೮ ರಷ್ಟು ಮಹಿಳಾ ಸದಸ್ಯರನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಎಲ್ಲ ಸದಸ್ಯರನ್ನು ಸಣ್ಣ ಹಿಡುವಳಿದಾರರು, ಮಧ್ಯಮ ಗಾತ್ರ ಹಿಡುವಳಿದಾರರು ಮತ್ತು ದೊಡ್ಡ ಗಾತ್ರದ ಹಿಡುವಳಿದಾರರನ್ನಾಗಿ ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಅಲ್ಪಸಂಖ್ಯಾತ ಸಾಮಾನ್ಯ ಎಂದು ವರ್ಗೀಕರಿಸಿ ಮಾಹಿತಿ ಪಡೆಯಲಾಗಿದೆ. ಇದರ ಜೊತೆಗೆ ಪ್ರತಿ ನೀ.ಬ.ಸ. ಸಂಘ ವ್ಯಾಪ್ತಿಯಲ್ಲಿ ಕೆಳತುದಿ, ಮೇಲ್ತುದಿ ಮತ್ತು ಮಧ್ಯಭಾಗದಿಂದ ತಲಾ ೫ ಸದಸ್ಯೇತರ ರೈತರನ್ನು ಜಾತಿವಾರು, ಭೂಹಿಡುವಳಿವಾರು ವಿಂಗಡಿಸಿ ಮಾಹಿತಿ ಕಲೆಹಾಕಲಾಗಿದೆ.

ನೀ.ಬ.ಸ. ಸಂಘದ ಕಾರ್ಯನಿರ್ವಹಣೆಯ ದಕ್ಷತೆಯು ಆ ಸಂಘಗಳಲ್ಲಿರುವ ಸದಸ್ಯರ ಪಾಲ್ಗೊಳ್ಳುವಿಕೆಯನ್ನು ಅವಲಂಬಿಸಿರುತ್ತದೆ. ಈ ಸದಸ್ಯರ ಪಾಲ್ಗೊಳ್ಳುವಿಕೆಯು ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಅವಲಂಬಿಸಿರುತ್ತದೆ. ಈ ಎಲ್ಲ ಸಂಗತಿಗಳು ಅನುಕೂಲಕರವಾಗಿದ್ದರೆ ಸದಸ್ಯರ ಸಹಕಾರ ಉತ್ತಮಗೊಂಡು ಸಹಭಾಗಿತ್ವಕ್ಕೆ ಅವಕಾಶ ಕಲ್ಪಿಸುತ್ತದೆ. ಈ ಮೇಲ್ಕಂಡ ಸಂಗತಿಗಳು ದುಃಸ್ಥಿತಿಯಲ್ಲಿದ್ದರೆ ಸದಸ್ಯರ ಭಾಗವಹಿಸುವ ಮಟ್ಟವೂ ಕಡಿಮೆಯಾಗಿ ಸಹಕಾರಕ್ಕೆ ತೊಡಕಾಗುವ ಸಂದರ್ಭ ಹೆಚ್ಚು. ಇದರೊಂದಿಗೆ ಪದಾಧಿಕಾರಿಗಳ ಮತ್ತು ಸದಸ್ಯರ ನಡುವಿನ ಸಹಯೋಗ, ಸಮನ್ವಯತೆಯನ್ನು ಈ ಮೇಲ್ಕಂಡ ಸಂಗತಿಗಳು ಪ್ರಭಾವಿಸುತ್ತವೆ. ಹೀಗಾಗಿ ಇಂತಹ ಸ್ಥಿತಿಗಳನ್ನು ತಿಳಿಯುವುದು ಮುಖ್ಯವೆನಿಸುತ್ತದೆ.

ನೀ.ಬ.ಸ. ಸಂಘಗಳ ಸದಸ್ಯರ ಜಾತಿವಾರು ಸಂರಚನೆ

ಕೋಷ್ಟಕ : ೬.೮

| ಕ್ರ.ಸಂ. | ಜಾತಿಗಳ ವಿವರ | ಪುರುಷರು | ಮಹಿಳೆಯರು |
|---|---|---|---|
| ೦೧. | ಲಿಂಗಾಯಿತರು | ೩೨.೧೮ | ೨೯.೦೩ |
| ೦೨. | ಒಕ್ಕಲಿಗರು | ೧೪.೭೭ | ೧೬.೧೨ |
| ೦೩. | ಬ್ರಾಹ್ಮಣರು | ೨.೬೩ | ೦೦.೦೦ |
| ೦೪. | ಪ್ರವರ್ಗ-೧ | ೯.೨೩ | ೯.೬೭ |
| ೦೫. | ಪ್ರವರ್ಗ-೨ಎ | ೧೬.೦೯ | ೬.೪೫ |
| ೦೬. | ತಮಿಳುಗೌಂಡರ್ | ೧.೩೧ | ೬.೪೫ |
| ೦೭. | ಪರಿಶಿಷ್ಟ ಜಾತಿ | ೧೩.೧೯ | ೨೨.೫೮ |
| ೦೮. | ಪರಿಶಿಷ್ಟ ವರ್ಗ | ೪.೭೪ | ೦೦.೦೦ |
| ೦೯. | ಅಲ್ಪಸಂಖ್ಯಾತರು | ೪.೪೮ | ೬.೪೫ |
| ೧೦. | ಇತರೆ | ೧.೩೧ | ೩.೨೨ |
| | ಒಟ್ಟು | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ನೀ.ಬ.ಸ. ಸಂಘಗಳ ಸದಸ್ಯರ ಜಾತಿವಾರು ಸಂರಚನೆ ಕೋಷ್ಟಕ ೬.೮ ರಂತಿದೆ. ಇದರಲ್ಲಿ ಲಿಂಗಾಯತ ಸಮುದಾಯದವರೆ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಆ ನಂತರದ ಸ್ಥಾನದಲ್ಲಿ ಪ್ರವರ್ಗ - ೨ಎ, ಒಕ್ಕಲಿಗ ಹಾಗೂ ಪರಿಶಿಷ್ಟ ಜಾತಿಗಳು ಬರುತ್ತವೆ. ಉಳಿದಂತೆ ಪ್ರವರ್ಗ-೧ ಕೆಳಮಟ್ಟಿನ ಸ್ಥಾನವನ್ನು ಪಡೆದಿದೆ. ಅಲ್ಪಸಂಖ್ಯಾತರು ಮತ್ತು ಪರಿಶಿಷ್ಟವರ್ಗದವರು ಅತಿ ಕಡಿಮೆ ಸಂಖ್ಯೆಯಲ್ಲಿದ್ದಾರೆ.

ಮಹಿಳಾ ಸದಸ್ಯರ ಜಾತಿವಾರು ಸಂರಚನೆಯಲ್ಲಿಯೂ ಲಿಂಗಾಯಿತರು ಪ್ರಥಮ ಸ್ಥಾನದಲ್ಲಿದ್ದು, ಪರಿಶಿಷ್ಟ ಜಾತಿ ಮತ್ತು ಒಕ್ಕಲಿಗ ಸಮುದಾಯ ನಂತರದ ಸ್ಥಾನದಲ್ಲಿದ್ದಾರೆ. ಮುಖ್ಯವಾದ ಸಂಗತಿಯೆಂದರೆ ಸಾಮಾನ್ಯ ವರ್ಗದ ಬ್ರಾಹ್ಮಣರಲ್ಲಿ ಯಾವುದೇ ಮಹಿಳೆ ಸದಸ್ಯರಾಗಿಲ್ಲ ಮತ್ತು ಪರಿಶಿಷ್ಟ ವರ್ಗದಲ್ಲೂ ಮಹಿಳೆಗೆ ಅವಕಾಶವಾಗಿಲ್ಲದಿರುವುದು ಕಂಡುಬರುತ್ತದೆ. ಪ್ರವರ್ಗ-೧ ಕೆಲಮಟ್ಟಿಗೆ ಉತ್ತಮವಾಗಿದ್ದು ಉಳಿದಂತೆ ಎಲ್ಲ ವರ್ಗಗಳು ಕಡಿಮೆ ಸಂಖ್ಯೆಯ ಮಹಿಳೆಯರನ್ನು ಒಳಗೊಂಡಿದೆ.

ಇದರಿಂದ ತಿಳಿದುಬರುವ ಸಂಗತಿಯೆಂದರೆ ಸದಸ್ಯತ್ವ ಪಡೆಯುವಲ್ಲಿಯೂ ಪ್ರಬಲ ಜಾತಿಗಳು ಮುಖ್ಯ ಪಾತ್ರವಹಿಸುತ್ತವೆ ಎನ್ನುವುದು. ತಮ್ಮ ಸಮುದಾಯದವರನ್ನು ಸದಸ್ಯರನ್ನು ಮಾಡಿಕೊಳ್ಳುವ, ಸದಸ್ಯರಾಗುವಂತೆ ಪ್ರೇರೇಪಿಸುವ ಆ ಮೂಲಕ ಸಂಘಗಳಲ್ಲಿ ಮುಖ್ಯ ಸ್ಥಾನಗಳನ್ನು ಪದವಿಗಳನ್ನು ತಮ್ಮದಾಗಿಸಿಕೊಳ್ಳುವ ಪ್ರಕ್ರಿಯೆಗೆ ಚಾಲನೆ ದೊರೆಯುತ್ತದೆ ಎನ್ನುವುದು ತಿಳಿಯುತ್ತದೆ. ಅಂಚಿಗೆ ತಳ್ಳಲ್ಪಟ್ಟವರಿಗೆ ಸಂಘಗಳ ಇರುವಿಕೆಯ ಬಗೆಗೆ ಮಾಹಿತಿ ಇರುವುದಿಲ್ಲ. ಮಾಹಿತಿ ಇದ್ದರೂ ಅವರನ್ನು ಸದಸ್ಯತ್ವ ಪಡೆಯಬೇಕೆಂದು ಪ್ರೋತ್ಸಾಹಿಸುವ ಯಾವುದೇ ಬೆಂಬಲವಿರುವುದಿಲ್ಲ. ಇದರಿಂದ ಮುಖ್ಯ ಪದವಿಗಳನ್ನು ಅವರು ಪಡೆಯುವಲ್ಲಿ ವಿಫಲರಾಗುತ್ತಾರೆ. ಮಾತ್ರವಲ್ಲದೆ ಸಂಘಗಳಲ್ಲಿ ಅವರ ಭಾಗವಹಿಸುವಿಕೆಗೂ ಯಾವುದೇ ರೀತಿಯ ಅವಕಾಶಗಳು ದೊರೆಯುವುದಿಲ್ಲ. ಹೀಗಾಗಿ ಉತ್ತಮ ಭಾಗವಹಿಸುವಿಕೆಯ ಕೊರತೆಯಿಂದ ನೀ.ಬ.ಸ. ಸಂಘಗಳ ಕಾರ್ಯದಕ್ಷತೆ ಗರಿಷ್ಠಮಟ್ಟ ತಲುಪಲು ಸಾಧ್ಯವಾಗಿಲ್ಲ; ಸಾಧ್ಯವಾಗಲಾರದು ಸಹ. ಈ ನಿಟ್ಟಿನಲ್ಲಿ ಸರ್ವರಿಗೂ ಅವಕಾಶವಾಗುವಂತಹ, ಮಾಹಿತಿ ದೊರೆಯುವಂತಹ, ಪ್ರೋತ್ಸಾಹ ಸಿಗುವಂತಹ ಪರಿಸರವನ್ನು ನಿರ್ಮಾಣ ಮಾಡುವ ಅಗತ್ಯವಿದೆ. ಅಂತಹ ವಾತಾವರಣವನ್ನು ನಿರ್ಮಾಣ ಮಾಡುವುದಕ್ಕೆ ಇರಬಹುದಾದ ಸಲಹೆಗಳನ್ನು ಹಲವಾರು ವಿದ್ವಾಂಸರೊಂದಿಗೆ ಚರ್ಚೆ ಮಾಡಿ ಕೊಡಲಾಗಿದೆ.

### ೬.೩.೧. ನೀ.ಬ.ಸ. ಸಂಘಗಳ ಸದಸ್ಯರ ಶೈಕ್ಷಣಿಕ ಮಟ್ಟ

ನೀ.ಬ.ಸ. ಸಂಘಗಳ ಸದಸ್ಯರು ಯಾವ ಮಟ್ಟದ ಶಿಕ್ಷಣವನ್ನು ಹೊಂದಿದ್ದಾರೆ ಎನ್ನುವುದರ ಹಿನ್ನೆಲೆಯಲ್ಲಿ ಆ ಸಂಘ ಎಷ್ಟರ ಮಟ್ಟಿಗೆ ದಕ್ಷವಾಗಿ ಕಾರ್ಯನಿರ್ವಹಿಸುತ್ತದೆ ಎನ್ನುವುದನ್ನು ಅರಿಯಬಹುದು. ಶಿಕ್ಷಣದ ಮಟ್ಟ ಹೆಚ್ಚಾದಂತೆ ಸಂಘಗಳಲ್ಲಿ ಸಮಸ್ಯೆಗಳನ್ನು ಗುರುತಿಸಿ, ಅಂತಹ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೆ ಮಾಹಿತಿ ಪಡೆಯುವ ಸಾಮರ್ಥ್ಯವು ಹೆಚ್ಚುತ್ತದೆ. ಕಾನೂನಿನ ಅರಿವು ನಿಯಮಗಳ ಜ್ಞಾನ ಬರುತ್ತದೆ. ಇದರಿಂದ ಪ್ರಮುಖ ಸ್ಥಾನಗಳಲ್ಲಿರುವ ಪದಾಧಿಕಾರಿಗಳು ತಾರತಮ್ಯಯುತ ನಿರ್ಧಾರಗಳನ್ನು ಕೈಗೊಂಡಾಗ, ಅಂತಹ ನಿರ್ಧಾರಗಳಿಂದ ತಮಗೆ ಮೋಸವಾಗಿದೆ ಎಂದು ಪ್ರತಿಪಾದಿಸಿ, ನಿರ್ಧಾರಗಳನ್ನು ತಮ್ಮ ಹಿತಸಾಧನೆಗೆ ಅನುಕೂಲವಾಗುವಂತೆ, ಸರ್ವರಿಗೂ ಒಂದೇ ರೀತಿಯ ಅವಕಾಶ ಮತ್ತು ಅಗತ್ಯ ಸೌಲಭ್ಯಗಳು ಲಭ್ಯವಾಗುವಂತೆ ನೋಡಿಕೊಳ್ಳಲು ನೆರವಾಗುತ್ತದೆ. ಆದುದರಿಂದ ನೀ.ಬ.ಸ. ಸಂಘ ಸದಸ್ಯರ ಶೈಕ್ಷಣಿಕ ಮಟ್ಟವನ್ನು ಪದಾಧಿಕಾರಗಳ ಶಿಕ್ಷಣದೊಂದಿಗೆ ಹೋಲಿಸಿ ನೋಡಿದಾಗ ಕಂಡುಬರುವ ವ್ಯತ್ಯಾಸಗಳ ಆಧಾರದ ಮೇಲೆ ಸದಸ್ಯರ ಪಾಲ್ಗೊಳ್ಳುವಿಕೆಯ ಸಾಮರ್ಥ್ಯವನ್ನು ನಿರ್ಧರಿಸಬಹುದಾಗಿದೆ.

### ನೀರು ಬಳಕೆದಾರರ ಸಹಕಾರ ಸಂಘಗಳ ಸದಸ್ಯರ ಶಿಕ್ಷಣ ಮಟ್ಟ

**ಕೋಷ್ಟಕ : ೬.೯**

| ಕ್ರ.ಸಂ. | ಶಿಕ್ಷಣದ ವಿವರ | ಪುರುಷ ಸದಸ್ಯರು | ಮಹಿಳಾ ಸದಸ್ಯರು |
|---|---|---|---|
| ೦೧. | ಪ್ರಾಥಮಿಕ | ೨೮.೩೩ | ೨೨.೫೮ |
| ೦೨. | ಪ್ರೌಢ | ೩೬.೦೦ | ೧೯.೩೫ |
| ೦೩. | ಪದವಿಪೂರ್ವ | ೦೬.೩೩ | ೦೦.೦೦ |
| ೦೪. | ಪದವಿ | ೦೭.೩೩ | ೦೦.೦೦ |
| ೦೫. | ಸ್ನಾತಕೋತ್ತರ ಪದವಿ | ೦೨.೦೦ | ೩.೨೨ |
| ೦೬. | ನಿರಕ್ಷರಸ್ಥರು | ೨೦.೦೦ | ೫೮.೩೩ |
| | ಒಟ್ಟು | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಈ ಮೇಲಿನ ಕೋಷ್ಟಕದಿಂದ ನೀ.ಬ.ಸ. ಸಂಘಗಳಲ್ಲಿನ ಪುರುಷ ಮತ್ತು ಮಹಿಳಾ ಸದಸ್ಯರ ಶೈಕ್ಷಣಿಕ ಮಟ್ಟ ಅತ್ಯಂತ ಕೆಳಮಟ್ಟದಲ್ಲಿರುವುದು ತಿಳಿಯುತ್ತದೆ. ಪುರುಷ ಸದಸ್ಯರ ವಿದ್ಯಾಭ್ಯಾಸದ ಮಟ್ಟ ಪ್ರಾಥಮಿಕ ಮತ್ತು ಪ್ರೌಢ ಹಂತದಲ್ಲಿಯೇ ಶೇಕಡ ೬೪ಕ್ಕಿಂತ ಹೆಚ್ಚಾಗಿದ್ದು, ಆ ನಂತರದ ಉನ್ನತ ಶಿಕ್ಷಣ ಅತಿ ಕಡಿಮೆ ಇರುವುದು ಕಂಡುಬರುತ್ತದೆ. ಇದೇ ಸ್ಥಿತಿ ಮಹಿಳಾ ಸದಸ್ಯರಲ್ಲಿ ಇದೆಯಾದರೂ ಅವರ ಶಿಕ್ಷಣದ ಮಟ್ಟ ಇನ್ನು ದುಃಸ್ಥಿತಿಯಲ್ಲಿರುವುದು ತಿಳಿಯುತ್ತದೆ. ಮಹಿಳಾ ಸದಸ್ಯರು ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಮಾತ್ರ ಪಡೆದಿದ್ದು ಯಾರೂ ಪದವಿಪೂರ್ವ ಅಥವಾ ಪದವಿ ಪಡೆದವರು ಕಂಡುಬರುವುದಿಲ್ಲ.

ಒಂದು ಕುತೂಹಲದ ಸಂಗತಿಯೆಂದರೆ ಕೇವಲ ಒಬ್ಬ ಮಹಿಳೆ ಮಾತ್ರ ಸ್ನಾತಕ ಪದವಿ ಗಳಿಸಿರುವುದು ಕಂಡುಬರುತ್ತದೆ. ಇದೇ ಸಂಗತಿಯೂ ಸಂಘದ ಪದಾಧಿಕಾರಿಗಳಿಗೆ ಹೋಲಿಸಿ ನೋಡಿದಾಗ ಪರಿಸ್ಥಿತಿ ವಿಭಿನ್ನವಾಗಿರುವುದು ತಿಳಿಯುತ್ತದೆ. ಪದಾಧಿಕಾರಿಗಳ ಶಿಕ್ಷಣಮಟ್ಟ ಸದಸ್ಯರಿಗಿಂತ ಉತ್ತಮವಾಗಿದೆ. ಆದರೆ ಮಹಿಳಾ ಶಿಕ್ಷಣಮಟ್ಟದಲ್ಲಿ ಅಂತಹ ವ್ಯತ್ಯಾಸ ಕಂಡುಬರುವುದಿಲ್ಲ. ಮಹಿಳಾ ಪದಾಧಿಕಾರಿಗಳಲ್ಲಿ ಹೆಚ್ಚಿನ ಸಂಖ್ಯೆಯ ನಿರಕ್ಷರಸ್ಥರಿದ್ದಾರೆ. ಆದರೆ ಅದರ ಪ್ರಮಾಣ ಕಡಿಮೆ. ಸದಸ್ಯರಲ್ಲಿ ಅನಕ್ಷರಸ್ಥರ ಪ್ರಮಾಣ ಶೇಕಡ ೫೮ ಕ್ಕಿಂತ ಹೆಚ್ಚಾಗಿರುವುದು ದೊಡ್ಡ ಅಂತರವನ್ನು ಬಿಂಬಿಸುತ್ತದೆ. ಈ ಅಂತರ ಶೇಕಡ ೩೮ ಕ್ಕಿಂತ ಹೆಚ್ಚಾಗಿದೆ.

ಪುರುಷ ಪದಾಧಿಕಾರಿಗಳಲ್ಲಿ ಅನಕ್ಷರಸ್ಥರ ಪ್ರಮಾಣ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ ಇದ್ದರೆ, ಪುರುಷ ಸದಸ್ಯರಲ್ಲಿ ನಿರಕ್ಷರಸ್ಥರ ಪ್ರಮಾಣ ಶೇಕಡ ೨೦ ರಷ್ಟಿರುವುದು ತಿಳಿಯುತ್ತದೆ. ಅಂದರೆ ಸದಸ್ಯರಲ್ಲಿ ಶಿಕ್ಷಣದಿಂದ ವಂಚಿತರಾದವರ ಸಂಖ್ಯೆ ಹೆಚ್ಚಾಗಿದೆ. ಹೀಗಾಗಿ ಸದಸ್ಯರ ಪಾಲ್ಗೊಳ್ಳುವಿಕೆ ಸಾಮರ್ಥ್ಯ ಸಹಜವಾಗಿಯೇ ಕಡಿಮೆ ಇರುತ್ತದೆ. ಅದರ ಇನ್ನಷ್ಟು ದುಃಸ್ಥಿತಿ ಮಹಿಳೆಯರಲ್ಲಿ ಕಂಡುಬರುತ್ತದೆ. ಇದು ಅಂತಿಮವಾಗಿ ಸಂಘದ ನಿಷ್ಕ್ರಿಯೆಗೆ ಅವಕಾಶವಾಗುತ್ತದೆ.

### ೬.೩.೨. ನೀ.ಬ.ಸ. ಸಂಘಗಳ ಸದಸ್ಯರ ಭೂ ಹಿಡುವಳಿಗಳ ಪ್ರಮಾಣ

ನೀ.ಬ.ಸ. ಸಂಘಗಳ ಸದಸ್ಯರ ಭೂಹಿಡುವಳಿಗಳ ಪ್ರಮಾಣದ ಮೂಲಕ ಅವರು ಆರ್ಥಿಕವಾಗಿ ಯಾವ ಸ್ಥಿತಿಯಲ್ಲಿದ್ದಾರೆ ಎನ್ನುವುದನ್ನು ತಿಳಿಯಬಹುದಾಗಿದೆ. ಇದರಿಂದ ಅವರು ಸಂಘಗಳಲ್ಲಿ ಯಾವ ರೀತಿಯಲ್ಲಿ ಪಾಲ್ಗೊಳ್ಳುತ್ತಾರೆ ಎನ್ನುವುದನ್ನು ಕಂಡುಕೊಳ್ಳಬಹುದು. ಮುಖ್ಯವಾಗಿ ಮಹಿಳೆಯ ಭೂ ಹಿಡುವಳಿಗಳ ಪ್ರಮಾಣ ಹೇಗಿದೆ? ಅವರು ಆಸ್ತಿ ವಿಚಾರದಲ್ಲಿ ಎಷ್ಟರಮಟ್ಟಿಗೆ ಸಬಲರಾಗಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ. ಸದಸ್ಯರ ಸಹಭಾಗದಲ್ಲಿ ಸಂಘ ತನ್ನ ಮೇಲ್ಮೆಯನ್ನು ಸಾಧಿಸಲು ಸಾಧ್ಯ. ಈ ಉನ್ನತಿ ಸಾಧಿಸಲು ಸದಸ್ಯರ ಆರ್ಥಿಕ, ಸಾಮಾಜಿಕ, ಸ್ಥಿತಿಗಳೂ ಮುಖ್ಯವಾಗುತ್ತವೆ.

**ಸಂಘಗಳ ಸದಸ್ಯರ ಭೂಹಿಡುವಳಿಗಳ ಪ್ರಮಾಣ**

**ಕೋಷ್ಟಕ : ೬.೧೦**

| ಕ್ರ.ಸಂ. | ಭೂಹಿಡುವಳಿಗಳ ಪ್ರಮಾಣ ಶೇ. | ಪುರುಷ ಸದಸ್ಯರು | ಮಹಿಳೆ ಸದಸ್ಯರು |
|---|---|---|---|
| ೦೧. | ೧ ರಿಂದ ೪ ಎಕರೆ (ಸಣ್ಣ ಹಿಡುವಳಿದಾರರು) | ೫೬.೩೩ | ೭೭.೪೧ |
| ೦೨. | ೪ ರಿಂದ ೧೦ ಎಕರೆ (ಮಧ್ಯಮ ಹಿಡುವಳಿದಾರರು) | ೨೯.೦೦ | ೧೨.೯೦ |
| ೦೩. | ೧೦ರ ಮೇಲ್ಪಟ್ಟು (ದೊಡ್ಡ ಹಿಡುವಳಿದಾರರು) | ೧೪.೬೬ | ೯.೬೭ |
| ೦೪. | ಒಟ್ಟು | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಕೋಷ್ಟಕ ೬.೧೦ರಲ್ಲಿ ೧ ರಿಂದ ೪ ಎಕರೆ ಜಮೀನಿರುವವರನ್ನು ಸಣ್ಣ ಹಿಡುವಳಿದಾರರೆಂಬ ೪ ರಿಂದ ೧೦ ಎಕರೆ ಸಾಗುವಳಿದಾರರನ್ನು ಮಧ್ಯಮ ಹಿಡುವಳಿದಾರರೆಂದು ಹಾಗೂ ೧೦ ಎಕರೆ ಮೇಲ್ಪಟ್ಟವರನ್ನು ದೊಡ್ಡ ಹಿಡುವಳಿದಾರರೆಂದು ವಿಂಗಡಿಸಿಕೊಳ್ಳಲಾಗಿದೆ.

ಈ ಪ್ರಕಾರ ಸ್ತ್ರೀ.ಬ.ಸ. ಸಂಘಗಳ ಸದಸ್ಯರು ಶೇಕಡ ೫೬ಕ್ಕಿಂತ ಹೆಚ್ಚಿನವರು ಸಣ್ಣ ಹಿಡುವಳಿದಾರರಾಗಿದ್ದಾರೆ. ಉಳಿದಂತೆ ಶೇಕಡ ೪೨ ರಷ್ಟು ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರಿದ್ದಾರೆ. ಸದಸ್ಯರಲ್ಲಿ ದೊಡ್ಡ ಹಿಡುವಳಿದಾರರ ಸಂಖ್ಯೆ ಕಡಿಮೆಯಿದೆ. ಆದರೆ ಪದಾಧಿಕಾರಿಗಳಲ್ಲಿ ಇದು ವ್ಯತಿರಿಕ್ತವಾಗಿ ಕಂಡು ಬಂದಿರುವುದು ನಾವು ಈಗಾಗಲೇ ಕಂಡುಕೊಂಡಿದ್ದೇವೆ.

ಅದೇ ರೀತಿ ಮಹಿಳಾ ಸದಸ್ಯರ ಹಿಡುವಳಿಗಳ ಪ್ರಮಾಣ ಪುರುಷ ಸದಸ್ಯರಿಗಿಂತಲೂ ಕಡಿಮೆಯಿರುವುದು ವೇದ್ಯವಾಗುತ್ತದೆ. ಶೇಕಡ ೭೭ ಕ್ಕಿಂತ ಹೆಚ್ಚಿನ ಮಹಿಳೆಯರು ಸಣ್ಣ ಹಿಡುವಳಿದಾರರಾಗಿದ್ದಾರೆ. ಶೇಕಡ ೧೨ ರಷ್ಟು ಮಹಿಳೆಯರು ಮಧ್ಯಮ ಗಾತ್ರದ ಹಿಡುವಳಿಗಳನ್ನು ಪಡೆದಿದ್ದಾರೆ. ದೊಡ್ಡ ಹಿಡುವಳಿಗಳನ್ನು ಹೊಂದಿರುವವರು ಕೇವಲ ಶೇಕಡ ೯.೬೭ ರಷ್ಟು ಮಾತ್ರ. ಅಂದರೆ ಮಹಿಳೆಯರಿಗೆ ಆಸ್ತಿಯ ಹಕ್ಕು ದೊರೆತಿದ್ದರೂ ಅವರಿಗೆ ಭೂಮಾಲೀಕತ್ವ ಇನ್ನು ಸಂಪೂರ್ಣವಾಗಿ ದೊರೆತಿಲ್ಲ ಎನ್ನುವುದು ಇದರಿಂದ ಸಾಬೀತಾಗುತ್ತದೆ.

**೬.೩.೩. ಸ್ತ್ರೀ.ಬ.ಸ. ಸಂಘಗಳ ಸದಸ್ಯರ ವರಮಾನದ ಮಟ್ಟ**

ಸ್ತ್ರೀ.ಬ.ಸ. ಸಂಘಗಳ ಸದಸ್ಯರ ವರಮಾನದ ಪ್ರಮಾಣವು ಅವರ ಆರ್ಥಿಕ ಸ್ಥಾನಮಾನವನ್ನು ಪ್ರತಿಬಿಂಬಿಸುತ್ತದೆ. ಅದರ ಆರ್ಥಿಕ ಸ್ಥಿತಿಗತಿಯು ಸಂಘದಲ್ಲಿ ಅವರ ಪಾಲ್ಗೊಳ್ಳುವಿಕೆಯನ್ನು ನಿರ್ಧರಿಸುತ್ತದೆ. ಸದಸ್ಯರ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡಂತೆ ಅವರು ಸ್ತ್ರೀ.ಬ.ಸ. ಸಂಘಗಳಲ್ಲಿ ನಿರ್ಣಾಯಕ ಪಾತ್ರವಹಿಸಲು ಸಾಧ್ಯವಿರುತ್ತದೆ. ಇದಕ್ಕೆ ವಿರುದ್ಧವಾಗಿ ಸದಸ್ಯರ ಆದಾಯದ ಪ್ರಮಾಣ ಕಡಿಮೆಯಾದಂತೆ ಅವರ ಭಾಗವಹಿಸುವಿಕೆಗೆ ಹೆಚ್ಚಿನ ಅವಕಾಶ ಲಭ್ಯವಾಗುವುದಿಲ್ಲ. ಆದ್ದರಿಂದ ಅವರ ಧ್ವನಿಗೆ ಅಂತಹ ಬೆಲೆ ದೊರೆಯುವ ಸಾಧ್ಯತೆಗಳಿರುವುದಿಲ್ಲ. ಹೀಗಾಗಿ ಆರ್ಥಿಕ ಸ್ಥಿತಿಯಲ್ಲಿನ ವ್ಯತ್ಯಾಸಗಳು ಹೆಚ್ಚಾದಂತೆ ಸದಸ್ಯರ ಸಹಭಾಗಿತ್ವದಲ್ಲೂ ಬದಲಾವಣೆಗಳು ಕಂಡುಬರುತ್ತವೆ. ಅಂತಿಮವಾಗಿ ತಾರತಮ್ಯಯುತ ಪಾಲ್ಗೊಳ್ಳುವಿಕೆಯಿಂದ ಪರಿಪೂರ್ಣವಾದ ಸಕ್ರಿಯ ಸಹಭಾಗಿತ್ವಕ್ಕೆ ಧಕ್ಕೆಯುಂಟಾಗುತ್ತದೆ.

ನೀರು ಬಳಕೆದಾರರ ಸಹಕಾರ ಸಂಘಗಳ ಸದಸ್ಯರ ವರಮಾನದ ಮಟ್ಟ

ಕೋಷ್ಟಕ : ೬.೧೧

| ಕ್ರ.ಸಂ. | ವರಮಾನದ ವಿವರ | ಪುರುಷ ಸದಸ್ಯರು | ಮಹಿಳೆ ಸದಸ್ಯರು |
|---|---|---|---|
| ೦೧. | ೧ ಸಾವಿರದಿಂದ ೧೧ ಸಾವಿರದವರೆಗೆ | ೩೫.೧೦ | ೪೧.೯೩ |
| ೦೨. | ೧೧ ಸಾವಿರದಿಂದ ೨೦ ಸಾವಿರದವರೆಗೆ | ೨೯.೩೩ | ೨೪.೮೦ |
| ೦೩. | ೨೦ ಸಾವಿರದಿಂದ ೫೦ ಸಾವಿರದವರೆಗೆ | ೨೧.೩೩ | ೨೦.೧೮ |
| ೦೪. | ೫೦ ಸಾವಿರದಿಂದ ೧ ಲಕ್ಷದವರೆಗೆ | ೧೧.೦೦ | ೧೦.೬೭ |
| ೦೫. | ೧ ಲಕ್ಷದಿಂದ ೫ ಲಕ್ಷದವರೆಗೆ | ೩.೩೩ | ೨.೪೨ |
| ೦೬. | ೫ ಲಕ್ಷಕ್ಕೆ ಮೇಲ್ಪಟ್ಟು | ೦.೦೦ | ೦.೦೦ |
| ೦೭. | ಒಟ್ಟು | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯದ ಮಾಹಿತಿ.

ಕೋಷ್ಟಕ ೬.೧೧ ರಲ್ಲಿ ಇದ್ದಂತೆ ನೀ.ಬ.ಸ. ಸಂಘಗಳ ಸದಸ್ಯರ ವಾರ್ಷಿಕ ವರಮಾನ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವವರ ಪ್ರಮಾಣವೇ ಹೆಚ್ಚಾಗಿರುವುದು ಕಂಡುಬರುತ್ತದೆ. ಶೇಕಡ ೬೫ ರಷ್ಟು ಪುರುಷ ಸದಸ್ಯರ ವಾರ್ಷಿಕ ವರಮಾನ ೨೦ ಸಾವಿರದಿಂದ ಕೂಡಿದೆ. ಶೇಕಡ ೯೬ ರಷ್ಟು ಪುರುಷ ಸದಸ್ಯರ ವಾರ್ಷಿಕ ಆದಾಯ ಒಂದು ಲಕ್ಷಕ್ಕಿಂತಲೂ ಕಡಿಮೆ ಇರುವುದು ತಿಳಿಯುತ್ತದೆ. ೫ ಲಕ್ಷದಷ್ಟು ವರಮಾನ ವಿರುವವರು ಶೇಕಡ ೩.೩೩ ರಷ್ಟು ಮಾತ್ರ. ಈ ಫಲಿತಾಂಶವನ್ನು ಅಧ್ಯಕ್ಷರು ಮತ್ತು ಇತರ ಪದಾಧಿಕಾರಿ ಗಳೊಂದಿಗೆ ಹೋಲಿಸಿ ನೋಡಿದಾಗ ವರಮಾನದ ಅಂತರ ತೀವ್ರವಾಗಿರುವುದು ಕಂಡುಬರುತ್ತದೆ. ಪದಾಧಿಕಾರಿಗಳ ವರಮಾನ ಪ್ರಾರಂಭವಾಗುವುದೇ ೧ ಲಕ್ಷಕ್ಕೆ ಮೇಲ್ಪಟ್ಟು. ಅವರಲ್ಲಿ ಯಾರೂ ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಇಲ್ಲ. ಇದರಿಂದ ಮುಖ್ಯವಾಗಿ ತಿಳಿದುಬರುವ ಸಂಗತಿಯೆಂದರೆ ನೀ.ಬ.ಸ. ಸಂಘಗಳ ಮೂಲಹುದ್ದೆಗಳು ಶ್ರೀಮಂತರ ಪಾಲಾಗಿರುವುದು ಗೊತ್ತಾಗುತ್ತದೆ. ನಿರ್ಣಾಯಕ ಸ್ಥಾನಗಳು ಪ್ರಬಲರ ವಶಕ್ಕೆ ಹೋಗುತ್ತವೆ. ಮತ್ತು ದುರ್ಬಲರಿಗೆ ಮಹತ್ವವಲ್ಲದ ಪ್ರಾತಿನಿಧ್ಯ ದೊರೆಯುತ್ತವೆ ಎನ್ನುವುದು ಇದರಿಂದ ಪ್ರತಿಬಿಂಬಿತವಾಗುತ್ತದೆ.

ಮಹಿಳಾ ಸದಸ್ಯರ ವಿಷಯದಲ್ಲೂ ಇದೇ ಸ್ಥಿತಿ ಮುಂದುವರಿಕೆಯಾಗಿದೆ. ತಾರತಮ್ಯದ ಪ್ರಮಾಣವಂತು ಇನ್ನಷ್ಟು ತೀವ್ರಗೊಂಡಿರುವುದು ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಬಡತನ ರೇಖೆಗಿಂತ ಕೆಳಗಿನ ಮಹಿಳೆಯರ ಶೇಕಡವಾರು ಪ್ರಮಾಣ ಪುರುಷರಿಗಿಂತ ಹೆಚ್ಚಾಗಿದೆ. ಅದೇ ಸ್ಥಿತಿ ವರಮಾನದ ಇತರ ಸ್ಥಾನಗಳಲ್ಲಿಯೂ ಕಂಡುಬರುವುದು ತಿಳಿಯುತ್ತದೆ.

ಇದೇ ಸಂಗತಿಯನ್ನು ತೌಲನಿಕವಾಗಿ ಪುರುಷ ಪದಾಧಿಕಾರಿಗಳು ಮತ್ತು ಮಹಿಳಾ ಪದಾಧಿಕಾರಿಗಳೊಂದಿಗೆ ನೋಡಿದಾಗ ಪರಿಸ್ಥಿತಿ ಭಿನ್ನವಾಗಿರುವುದು ಕಂಡುಬರುತ್ತದೆ. ಪುರುಷ ಪದಾಧಿಕಾರಿಗಳಿಗೂ ಮಹಿಳಾ ಸದಸ್ಯರ ವರಮಾನಕ್ಕೂ ಅಜಗಜಾಂತರ ವ್ಯತ್ಯಾಸಗಳಿರುವುದು ತಿಳಿಯುತ್ತದೆ. ಪುರುಷ ಪದಾಧಿಕಾರಿಗಳ ಆರಂಭದ ವರಮಾನದಷ್ಟು ಇಲ್ಲಿ ಮಹಿಳಾ ಸದಸ್ಯರ ಅಂತಿಮ ವರಮಾನ ಇಲ್ಲದೆ ಇರುವುದನ್ನು ಕಾಣಬಹುದು. ಇದನ್ನೇ ಮಹಿಳಾ ಪಧಾದಿಕಾರಿಗಳು ಮತ್ತು ಮಹಿಳಾ ಸದಸ್ಯರಿಗೆ ಹೋಲಿಸಿದಾಗ ಕೆಲಮಟ್ಟಿನ ಆದಾಯದ ಅಂತರವನ್ನು ಗುರುತಿಸಬಹುದು. ಮಹಿಳಾ ಪದಾಧಿಕಾರಿಗಳ ಆರ್ಥಿಕ ಸ್ಥಿತಿ ಮಹಿಳಾ ಸದಸ್ಯರಿಗಿಂತ ಉತ್ತಮವಾಗಿದೆ.

ಹೀಗೆ ವರಮಾನದಲ್ಲಿ ಬಲಿಷ್ಠರಾಗಿದ್ದವರು ನೀ.ಬ.ಸ. ಸಂಘಗಳಲ್ಲಿ ವರ್ಚಸ್ವಿ ಸ್ಥಾನಗಳನ್ನು ಅಲಂಕರಿಸಲು ಸಾಧ್ಯವಾಗಿ ತಮ್ಮ ಕೆಳಹಂತದ ದುರ್ಬಲರನ್ನು ನಿಯಂತ್ರಣದಲ್ಲಿಡುವುದು ಕಂಡುಬರುತ್ತದೆ. ಅದೇ ರೀತಿ ಪುರುಷರ ಸ್ಥಾನಮಾನಗಳು ಮಹಿಳಾ ಸ್ಥಾನಮಾನಗಳಿಗಿಂತ ಉತ್ತಮವಾಗಿದ್ದು ನೀ.ಬ.ಸ. ಸಂಘಗಳಲ್ಲಿ ಪುರುಷ ಪ್ರಧಾನ ನಿರ್ಧಾರಗಳಿಗೆ ಅವಕಾಶವಾಗುತ್ತದೆ. ಮಹಿಳಾ ಸದಸ್ಯರು ಕೇವಲ ನೆಪಮಾತ್ರವಾಗಿದ್ದು ಅವರ ಹಿತಾಸಕ್ತಿಗಳು ಕಡೆಗಣಿಸಲ್ಪಡುವ ಸಾಧ್ಯತೆಗಳೇ ಹೆಚ್ಚಾಗಿರುತ್ತವೆ.

ಒಟ್ಟಂದದಲ್ಲಿ ನೀ.ಬ.ಸ. ಸಂಘಗಳ ಪ್ರಮುಖ ಆಡಳಿತ ಮಂಡಳಿಯಲ್ಲಿ ಪ್ರಬಲರಿಗೆ ಹೆಚ್ಚಿನ ಪ್ರಾಶಸ್ತ್ಯ ದೊರೆಯುತ್ತದೆ. ಅಲ್ಲಿಯೂ ಮಹಿಳೆಯರ ಸ್ಥಿತಿ ಉತ್ತಮವಾಗಿರುವುದಿಲ್ಲ. ಸಂಘಗಳ ಸಾಮಾನ್ಯ ಸದಸ್ಯರ ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿರುತ್ತವೆ. ಅವರು ಆರ್ಥಿಕ ಸ್ಥಿತಿಯಿಂದಾಗಿ ಸಂಘಗಳಲ್ಲಿ ತಮ್ಮ ಹಿತಾಸಕ್ತಿಗೆ ಒತ್ತುಕೊಡುವಷ್ಟು ಶಕ್ತಿ ಹೊಂದಿರುವುದಿಲ್ಲ. ಒಂದು ವೇಳೆ ಒತ್ತಾಯ ಮಾಡಿದರೂ ಅದನ್ನು ಪ್ರಬಲರು ಮಾನ್ಯ ಮಾಡುವುದಿಲ್ಲ. ಮಹಿಳೆ ಸದಸ್ಯರು ಪುರುಷರಿಗಿಂತ ಆರ್ಥಿಕವಾಗ ದುಃಸ್ಥಿತಿಯಲ್ಲಿರುತ್ತಾರೆ. ಅವರ ಧ್ವನಿಗೆ ಯಾವ ರೀತಿಯ ಪ್ರಾಮುಖ್ಯತೆ ಇರುವುದಿಲ್ಲ.

**೬.೩.೪. ನೀ.ಬ.ಸ. ಸಂಘಗಳ ಸದಸ್ಯರು ಇತರೆ ಸಂಘಸಂಸ್ಥೆಗಳಲ್ಲಿ ಹೊಂದಿರುವ ಸ್ಥಾನ**

ನೀ.ಬ.ಸ. ಸಂಘಗಳ ಸದಸ್ಯರು ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಯಾವ ಸ್ಥಿತಿಯಲ್ಲಿದ್ದಾರೆ ಎನ್ನುವುದನ್ನು ಅವರು ಇತರೆ ಸಂಘ-ಸಂಸ್ಥೆಗಳಲ್ಲಿ ಹೊಂದಿರುವ ಹಾಲಿ ಅಥವಾ ಮಾಜಿ ಸ್ಥಾನಗಳ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಸಂಘ-ಸಂಸ್ಥೆಗಳಲ್ಲಿ ಹೆಚ್ಚಿನ ಸ್ಥಾನಮಾನ ಪಡೆದಂತೆ

ಅವರ ಅಧಿಕಾರ ಮತ್ತು ಪ್ರಭಾವವೂ ಹೆಚ್ಚಾಗುತ್ತದೆ. ಈ ಸ್ಥಾನಮಾನಗಳು ಕಡಿಮೆಯಾದಂತೆ ಅವರ ಅಧಿಕಾರ ಮತ್ತು ಪ್ರಭಾವವೂ ಕಡಿಮೆಯಾಗುತ್ತದೆ. ನಮ್ಮ ಭಾರತೀಯ ಸಾಮಾಜಿಕ ಪರಿಸರದ ಸಂಘ-ಸಂಸ್ಥೆಗಳಲ್ಲಿ ಹೊಂದಿರುವ ಸ್ಥಾನ ಅತ್ಯಂತ ಮಹತ್ವದ ಪ್ರಭಾವ ಬೀರುತ್ತವೆ. ಆದುದರಿಂದ ಸಂಘಗಳ ಸದಸ್ಯರು ಗ್ರಾಮದ ಇತರೆ ಸಂಘ-ಸಂಸ್ಥೆಗಳಲ್ಲಿ ಯಾವ ಪ್ರಮಾಣದಲ್ಲಿ ಪ್ರತಿನಿಧಿಸಲ್ಪಟ್ಟಿದ್ದಾರೆ ಮತ್ತು ಅವರು ಪ್ರತಿನಿಧಿಸಲ್ಪಟ್ಟ ಸ್ಥಾನಗಳ ಅಂತಸ್ತು ಎಂತಹದ್ದು ಎಂಬುದನ್ನು ಮೌಲೀಕರಿಸಿದಾಗ ಅವರ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ.

ಅದೇ ರೀತಿ ನೀ.ಬ.ಸ. ಸಂಘಗಳಲ್ಲಿನ ಮಹಿಳಾ ಸದಸ್ಯರು ಗ್ರಾಮದ ಇತರೆ ಸಂಘ-ಸಂಸ್ಥೆಗಳಲ್ಲಿ ಯಾವ ಸ್ಥಾನಗಳನ್ನು ಪಡೆದಿದ್ದಾರೆ ಮತ್ತು ಅವುಗಳ ಪ್ರಮಾಣ ಹಾಗೂ ಪ್ರಭಾವಗಳನ್ನು ತಿಳಿದುಕೊಳ್ಳವುದು ಮುಖ್ಯ. ಏಕೆಂದರೆ ಮಹಿಳೆಯರ ಸ್ಥಾನಮಾನ ಯಾವ ಹಂತದವರಿಗೂ ತನ್ನ ಹಿಡಿತವನ್ನು ಸಾಧಿಸಲು ಶಕ್ಯವಾಗಿದೆ ಎನ್ನುವುದರ ಆಧಾರದ ಮೇಲೆ ಅವರ ಕಾರ್ಯ ಚಟುವಟಿಕೆಗಳ ಸಾಮರ್ಥ್ಯವನ್ನು ಗುರುತಿಸಲು ಸಾಧ್ಯ. ಪುರುಷ ಮತ್ತು ಮಹಿಳೆಯರ ನಡುವಿನ ಸ್ಥಾನಮಾನದ ಅಂತರವನ್ನು ಮನಗಾಣಲು ಇದು ಸಹಾಯಕವಾಗುತ್ತದೆ. ಆ ಮೂಲಕ ಪುರುಷ ಸದಸ್ಯರು ಹೊಂದಿರುವ ಸ್ಥಾನಮಾನಗಳ ಬಲಾಬಲಗಳನ್ನು ಹೋಲಿಸಿ ನೋಡಲು ಅನುಕೂಲವಾಗುತ್ತದೆ. ಹೀಗೆ ತೌಲನಿಕವಾಗಿ ಅಧ್ಯಯನ ಮಾಡಿದಾಗ ನೀ.ಬ.ಸ. ಸಂಘಗಳ ವಿವಿಧ ಹಂತದ ಪ್ರತಿನಿಧಿಗಳ ಸಾಮಾಜಿಕ ವಾತಾವರಣವನ್ನು ಮನದಟ್ಟು ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆಯ ಕಾರ್ಯಸಾಮರ್ಥ್ಯವನ್ನು ಗುರುತಿಸಬಹುದಾಗಿದೆ.

**ನೀ.ಬ.ಸ. ಸಂಘಗಳ ಸದಸ್ಯರು ಇತರೆ ಸಂಘ ಸಂಸ್ಥೆಗಳಲ್ಲಿ ಪಡೆದಿರುವ ಸ್ಥಾನಮಾನ**

**ಕೋಷ್ಟಕ : ೬.೧೨**

| ಕ್ರ.ಸಂ. | ಸಂಘ/ಸಂಸ್ಥೆ ಸ್ಥಾನ | ಪುರುಷರು | ಮಹಿಳೆಯರು |
|---|---|---|---|
| ೦೧. | ಹಾಲಿ | ೨೮.೬೬ | ೯.೬೭ |
| ೦೨. | ಮಾಜಿ | ೧೬.೬೬ | ೨೨.೫೮ |
| ೦೩. | ಯಾವುದೂ ಇಲ್ಲ | ೫೪.೬೬ | ೬೭.೭೪ |
| | ಒಟ್ಟು | ೧೦೦.೦೦ | ೧೦೦.೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಇತರೆ ಸಂಘ-ಸಂಸ್ಥೆಗಳಲ್ಲಿ ಇಲ್ಲಿನ ಪುರುಷರು ಮತ್ತು ಮಹಿಳೆಯರು ಮುಖ್ಯವಲ್ಲದ ಹುದ್ದೆಗಳಲ್ಲಿರುವುದು ಕಂಡುಬರುತ್ತದೆ. ಇಲ್ಲಿ ಯಾರೂ ಅಧ್ಯಕ್ಷ, ಉಪಾಧ್ಯಕ್ಷ, ನಿರ್ದೇಶಕ ಮತ್ತು

ಕಾರ್ಯದರ್ಶಿಯಂತಹ ಪ್ರಮುಖ ಸ್ಥಾನಗಳನ್ನು ಪಡೆದಿಲ್ಲ. ಬದಲಾಗಿ ಸದಸ್ಯರು ಮುಖ್ಯವಲ್ಲದ ನಾಮಮಾತ್ರ ಹುದ್ದೆಗಳಲ್ಲಿದ್ದಾರೆ. ನೀ.ಬ.ಸ. ಸಂಘಗಳ ಪದಾಧಿಕಾರಿಗಳು ಇತರೆ ಸಂಘ-ಸಂಸ್ಥೆಗಳಲ್ಲಿ ಮೂಲ ಹುದ್ದೆಗಳಲ್ಲಿ ಇರುವುದು ಕಂಡುಬರುತ್ತದೆ. ಹೀಗಾಗಿ ನೀ.ಬ.ಸ. ಸಂಘಗಳ ಸದಸ್ಯರು ಇತರೆ ಸಂಘ-ಸಂಸ್ಥೆಗಳಲ್ಲಿ ಹೊಂದಿರುವ ಸ್ಥಾನಗಳು ಪದಾಧಿಕಾರಿಗಳಿಗಿಂತ ಕೆಳಹಂತದ ಸ್ಥಾನಗಳಾಗಿರುವುದು ಕಂಡುಬರುತ್ತದೆ.

ಅದೇ ರೀತಿಯ ನೀ.ಬ.ಸ. ಸಂಘಗಳ ಪುರುಷ ಪದಾಧಿಕಾರಿಗಳು ಹೊಂದಿರುವ ಸ್ಥಾನಮಾನಗಳನ್ನು ಮಹಿಳಾ ಸದಸ್ಯರಿಗೆ ಹೋಲಿಕೆ ಮಾಡಿದಾಗ ಅಂತರ ಮತ್ತಷ್ಟು ಹೆಚ್ಚಾಗಿರುವುದು ತಿಳಿದುಬರುತ್ತದೆ. ಮಹಿಳಾ ಪದಾಧಿಕಾರಿಗಳನ್ನು ಮಹಿಳಾ ಸದಸ್ಯರಿಗೆ ಹೋಲಿಸಿದಾಗಲೂ ಕೆಲಮಟ್ಟಿನ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಕೋಷ್ಟಕ ೬.೧೨ ರಲ್ಲಿ ನೀ.ಬ.ಸ. ಸಂಘಗಳ ಪುರುಷ ಮತ್ತು ಮಹಿಳಾ ಸದಸ್ಯರು ಇತರೆ ಸಂಘ ಸಂಸ್ಥೆಗಳಲ್ಲಿ ಹೊಂದಿರುವ ಸ್ಥಾನಗಳ ಶೇಕಡಾವಾರು ಪ್ರಮಾಣವನ್ನು ನೀಡಲಾಗಿದೆ. ಹಾಲಿ ಸ್ಥಾನಗಳಲ್ಲಿ ಪುರುಷರು ಮಹಿಳೆಯರಿಗಿಂತ ಹೆಚ್ಚಿನ ಸ್ಥಾನಗಳನ್ನು ಹೊಂದಿದ್ದಾರೆ. ಮಾಜಿ ಸ್ಥಾನಗಳಲ್ಲಿ ಮಹಿಳೆಯರು ಪುರುಷರಿಗಿಂತ ಹೆಚ್ಚಿನ ಸ್ಥಾನಗಳನ್ನು ಪಡೆದಿದ್ದಾರೆ.

ಅದೇ ರೀತಿ ಶೇಕಡ ೪೫ ಕ್ಕಿಂತ ಹೆಚ್ಚಿನ ಪುರುಷ ಸದಸ್ಯರು ಒಂದಲ್ಲಾ ಒಂದು ಸ್ಥಾನ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ ಮಹಿಳಾ ಸದಸ್ಯರು ಪಡೆದಿರುವ ಸ್ಥಾನ ಶೇಕಡ ೩೩ ಕ್ಕಿಂತ ಕಡಿಮೆಯಾಗಿದೆ. ಇದರಿಂದ ಮಹಿಳೆಯರ ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನ ಪುರುಷರಿಗಿಂತ ಕೆಳಮಟ್ಟದಲ್ಲಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಇಲ್ಲಿ ಮಹಿಳಾ ಸದಸ್ಯರು ತಮ್ಮ ಸ್ವಂತ ವರ್ಚಸ್ಸಿನ ಮೇಲೆ ಈ ಸ್ಥಾನಗಳನ್ನು ಪಡೆದುಕೊಂಡಿಲ್ಲ ಎಂಬ ಮುಖ್ಯ ಸಂಗತಿ ತಿಳಿದುಬರುತ್ತದೆ. ಅಂದರೆ ಮಹಿಳಾ ಸದಸ್ಯರು ಮೀಸಲಾತಿಯ ಆಧಾರದ ಮೇಲೆ ಈ ಸ್ಥಾನಗಳನ್ನು ಪಡೆದಿದ್ದಾರೆ. ಆದುದರಿಂದ ಮಹಿಳಾ ಸದಸ್ಯರ ಸಾಮಾಜಿಕ ಸ್ಥಿತಿಗತಿ ಇನ್ನು ನಿರ್ಣಾಯಕ ಮಟ್ಟವನ್ನು ತಲುಪದೇ ಇರುವುದನ್ನು ನಾವು ಗುರುತಿಸಬಹುದು. ಇದರಿಂದ ಜನಯೋಜನೆ, ಜನರ ಸಹಭಾಗಿತ್ವ ಬಳಕೆದಾರರ ಪಾಲ್ಗೊಳ್ಳುವಿಕೆ, ವಿಕೇಂದ್ರೀಕರಣ ಇವೇ ಮುಂತಾದ ಪರಿಕಲ್ಪನೆಗಳಲ್ಲಿ ಮಹಿಳೆಯರ ಪ್ರಾತಿನಿಧ್ಯ ಇನ್ನು ದುರ್ಬಲ ವಾಗಿರುವುದನ್ನು ಕಾಣಬಹುದಾಗಿದೆ.

ಒಟ್ಟಾರೆ ನೀ.ಬ.ಸ. ಸಂಘಗಳಲ್ಲಿ ಸದಸ್ಯತ್ವ ಪಡೆದಿರುವ ಪುರುಷ ಮತ್ತು ಮಹಿಳೆಯರ ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಶೈಕ್ಷಣಿಕ ಸ್ಥಾನಮಾನ, ಸಂಘದ ಪದಾಧಿಕಾರಿಗಳ ಸ್ಥಾನಮಾನಕ್ಕಿಂತ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ಈ ಕಾರಣದಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ತಾರತಮ್ಯಯುತ ಪಾಲ್ಗೊಳ್ಳುವಿಕೆಯನ್ನು ಕಾಣಬಹುದಾಗಿದೆ. ಇದು ಅಂತಿಮವಾಗಿ ಅಪರಿಪೂರ್ಣ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುತ್ತದೆ. ಪರಿಪೂರ್ಣ ಸಹಭಾಗಿತ್ವದ ಗೈರುಹಾಜರಿಯಿಂದ ನೀ.ಬ.ಸ. ಸಂಘಗಳ ಕಾರ್ಯದಕ್ಷತೆಯು ಕುಗ್ಗುತ್ತದೆ.

ಅದರಲ್ಲೂ ಮುಖ್ಯವಾಗಿ ಸೀ.ಬ.ಸ. ಸಂಘಗಳ ಮಹಿಳಾ ಸದಸ್ಯರ ಮತ್ತು ಪದಾಧಿಕಾರಿಗಳ ಸಾಮಾಜಿಕ ವಾತಾವರಣವು ಪುರುಷರಿಗಿಂತ ದುಃಸ್ಥಿತಿಯಲ್ಲಿದೆ. ಇದರಿಂದ ಮಹಿಳೆಯರ ಸಹಭಾಗಿತ್ವಕ್ಕೆ ಅವಕಾಶಗಳೇ ಕಡಿಮೆಯಾಗಿವೆ. ಇರುವ ಅವಕಾಶಗಳನ್ನು ಪರಿಣಾಮಕಾರಿಯಾಗಿ ಬಳಕೆ ಮಾಡಿಕೊಳ್ಳಲು ಸಾಧ್ಯವಾಗಿಲ್ಲ.

**೬.೪. ಸೀ.ಬ.ಸ. ಸಂಘಗಳ ಕಾರ್ಯ ಚಟುವಟಿಕೆಗಳ ಮೇಲೆ ಸಾಮಾಜಿಕ ವಾತಾವರಣದ ಪ್ರಭಾವ**

ಈಗಾಗಲೇ ಕಂಡುಕೊಂಡಂತೆ ಸೀ.ಬ.ಸ. ಸಂಘ ಕಾರ್ಯನಿರ್ವಹಣೆಯು ಅಲ್ಲಿನ ಸಾಮಾಜಿಕ ವಾತಾವರಣವನ್ನು ಅವಲಂಬಿಸಿರುತ್ತದೆ. ನಮ್ಮ ಗ್ರಾಮೀಣ ಸಮಾಜದಲ್ಲಿ ಜಾತಿ ಸಂರಚನೆ, ವರ್ಗ ವ್ಯವಸ್ಥೆ ಹಾಗೂ ಶೈಕ್ಷಣಿಕ ಸ್ಥಿತಿಗತಿಗಳು ಏಕರೂಪವಾಗಿರದೇ, ಬಹುರೂಪತೆಯಿಂದ ಕೂಡಿದೆ. ಇದರಿಂದ ಸಾಮಾಜಿಕ ರಚನೆ, ಅಸಮಾನತೆಯಿಂದ ಸೀ.ಬ.ಸ. ಸಂಘಗಳಲ್ಲಿ ಎಲ್ಲ ರೀತಿ ಬಳಕೆದಾರರ ಪಾಲ್ಗೊಳ್ಳುವಿಕೆ ಏಕರೂಪತೆಯಿಂದ ಕೂಡಿರುವುದಿಲ್ಲ. ಬದಲಾಗಿ ಫಲಾನುಭವಿಗಳ ಭಾಗವಹಿಸುವಿಕೆಯು ಅಪರಿಪೂರ್ಣವಾಗಿದ್ದೂ, ಸಂಘ ಸಕ್ರಿಯ ಚಟುವಟಿಕೆಗಳಿಗೆ ಒಂದು ದೊಡ್ಡ ತೊಡಕಾಗಿದೆ. ಹೀಗಾಗಿ ಸೀ.ಬ.ಸ. ಸಂಘಗಳ ನಿರೀಕ್ಷಿಸಿದ ಮಟ್ಟದಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಎನ್ನುವುದು ಮೇಲ್ನೋಟಕ್ಕೆ ತಿಳಿದುಬರುತ್ತದೆ.

ಸಾಮಾಜಿಕವಾಗಿ, ರಾಜಕೀಯ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಮುಂದುವರಿದಿರುವ ಸಮುದಾಯಗಳ ಹಿಡಿತದಲ್ಲಿ ಸೀ.ಬ.ಸ. ಸಂಘಗಳು ಕಾರ್ಯನಿರ್ವಹಿಸಬೇಕಾಗಿದೆ. ಔಪಚಾರಿಕವಾಗಿ ಸರ್ವರ ಹಿತಸಾಧನೆಗೆ ಪ್ರಜಾಸತ್ತಾತ್ಮಕವಾಗಿ ಸಂಘಗಳನ್ನು ಸ್ಥಾಪಿಸಲಾಗಿದೆಯಾದರೂ ಅಧಿಕಾರ ವಿಕೇಂದ್ರೀಕರಣ ಕೆಳಹಂತದವರೆಗೂ ತಲುಪದೇ ಇರುವುದು ಒಂದು ದೊಡ್ಡ ಸಮಸ್ಯೆಯಾಗಿದೆ. ತಾತ್ವಿಕವಾಗಿ ಅಧಿಕಾರ ವಿಕೇಂದ್ರೀಕರಣಕ್ಕೆ ಅವಕಾಶವಿದೆಯಾದರೂ ನೈಜ ಸ್ಥಿತಿಯಲ್ಲಿ ಅದು ಕೆಲವೇ ಪ್ರಬಲ ಸಮುದಾಯಗಳಲ್ಲಿ ಮಡುಗಟ್ಟಿಕೊಂಡಿದೆ. ಇದರಿಂದ ನಿರ್ಲಕ್ಷಿತ ಸಮುದಾಯಗಳ ಸಕ್ರಿಯ ಪಾಲ್ಗೊಳ್ಳುವಿಕೆಗೆ ಅವಕಾಶವಾಗುತ್ತಿಲ್ಲ. ಪರಿಣಾಮವಾಗಿ ಈ ದುರ್ಬಲ ಸಮುದಾಯಗಳು ಸಹಭಾಗಿತ್ವಕ್ಕೆ ಪ್ರತಿರೋಧ ಒಡ್ಡುವ ಸಾಧ್ಯತೆಯಿರುತ್ತದೆ. ಅವರು ಕ್ರಿಯಾತ್ಮಕವಾಗಿ ಸಂಘಗಳಲ್ಲಿ ತೊಡಗಿಕೊಳ್ಳುವುದಿಲ್ಲ. ನಿಷ್ಕ್ರೀಯತೆಯಿಂದ ಸೀ.ಬ.ಸ. ಸಂಘಗಳ ಮೂಲಕ ಉದ್ದೇಶ ಈಡೇರಲು ಸಾಧ್ಯವಾಗುವುದಿಲ್ಲ. ಸಾಮಾಜಿಕ ವ್ಯವಸ್ಥೆ ಎಷ್ಟೇ ವಿಭಿನ್ನವಾಗಿದ್ದರೂ ಬಳಕೆದಾರರೆಲ್ಲರಲ್ಲೂ ಒಂದು ಸಾಮೂಹಿಕ ಒಗ್ಗಟ್ಟು ಕಂಡುಬಂದರೆ ಆಗ ಸೀ.ಬ.ಸ. ಸಂಘಗಳ ಕಾರ್ಯಸಾಮರ್ಥ್ಯ ಹೆಚ್ಚಾಗುತ್ತದೆ. ಇಂದಿನ ಸಾಮಾಜಿಕ ರಚನೆ, ಅಸಮಾನ ಶ್ರೇಣೀಕೃತ ವ್ಯವಸ್ಥೆಯಲ್ಲಿ ಇಂತಹ ಸಾಮೂಹಿಕ ಒಗ್ಗಟ್ಟು ಒಂದು ಅಪರೂಪದ ಸಂಗತಿಯಾಗಿದೆ. ಹೀಗೆ ಕೆಲವು ಸಂಘಗಳು ತಮ್ಮ ಸಾಧನೆಯನ್ನು ಮಾಡಿರುವುದನ್ನು ಕಾಣಬಹುದಾಗಿದೆ. ಆದರೆ ಬಹುತೇಕ ಸೀ.ಬ.ಸ. ಸಂಘಗಳು ಇಂತಹ ಸಾಮೂಹಿಕ ಒಗ್ಗಟ್ಟನ್ನು ಹೊಂದಿಲ್ಲ. ಇದರಿಂದ ಅವುಗಳು ಸ್ಥಗಿತ ಸ್ಥಿತಿ

/ ಜಡಸ್ಥಿತಿಯಲ್ಲೇ ಇವೆ. ಈ ಕುರಿತ ಅನೇಕ ಅಧ್ಯಯನಗಳು ಇದೇ ಸಂಗತಿಗಳನ್ನು ಬಿಂಬಿಸುತ್ತವೆ (ರತ್ನರೆಡ್ಡಿ ಮತ್ತು ಪೃಥ್ವೀಕರ್‌ರೆಡ್ಡಿ-೨೦೦೬).

ಅಸಮಾನ ಸಾಮಾಜಿಕ ಸ್ಥಿತಿ ಕೇವಲ ಜಾತಿ ಸಂರಚನೆ, ವರ್ಗ ವ್ಯವಸ್ಥೆ ಮತ್ತು ಶೈಕ್ಷಣಿಕವಾಗಿ ಮಾತ್ರವಿರದೆ ಅದು ಲಿಂಗಸಂಬಂಧಿತವಾಗಿರುವುದು ಮತ್ತೊಂದು ತೊಡಕಾಗಿದೆ. ಪುರುಷಪ್ರಧಾನ ವ್ಯವಸ್ಥೆಯಿಂದಾಗಿ ನೀ.ಬ.ಸ. ಸಂಘಗಳಲ್ಲಿ ಮಹಿಳೆಯರ ಪಾತ್ರ ಅತ್ಯಂತ ಕೆಳಮಟ್ಟದಲ್ಲಿದೆ. ಇದರಿಂದ ನೀ.ಬ.ಸ. ಸಂಘಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಸಾಂಕೇತಿಕ ಮನ್ನಣೆ ಮಾತ್ರವಿದೆ. ನಿಜಸ್ಥಿತಿಯಲ್ಲಿ ಎಲ್ಲ ಚಟುವಟಿಕೆಗಳೂ ಪುರುಷರಿಂದಲೇ ನೆರವೇರಿಸಲ್ಪಡುತ್ತವೆ. ಈಗಾಗಲೇ ಈ ನಿಟ್ಟಿನಲ್ಲಿ ನಡೆದಿರುವ ಅನೇಕ ಅಧ್ಯಯನಗಳು ಇದನ್ನು ಪುಷ್ಟೀಕರಿಸುತ್ತವೆ (ಅಹಮದ್ ಎಸ್.-೧೯೯೯, ವಿಜಯ ಶ್ಯಾಮಲ ಮತ್ತು ಸೀತಾಪತಿರಾವ್-೨೦೦೨).

ಲಿಂಗಸಂವೇದಿ ಪಾಲ್ಗೊಳ್ಳುವಿಕೆಯಿಲ್ಲದೆ ಸಹಭಾಗಿತ್ವ ನೀರಾವರಿ ನಿರ್ವಹಣೆ ಪರಿಪೂರ್ಣವಾಗಿ ಜಾರಿಗೊಳ್ಳಲು ಸಾಧ್ಯವಿಲ್ಲ. ನಾಮಮಾತ್ರ ಅಧಿಕಾರ ವಿಕೇಂದ್ರೀಕರಣ ಮತ್ತು ಮೀಸಲಾತಿಯಿಂದ ನೀ.ಬ.ಸ. ಸಂಘಗಳು ದಕ್ಷವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲ. ಅಪರೂಪಕ್ಕೆ ಕೆಲವು ಮಹಿಳೆಯರು ನಿರೀಕ್ಷಿತ ಸಾಧನೆಗಳನ್ನು ಸಾಧಿಸಿರಬಹುದಾದರೂ ಪ್ರಸ್ತುತ ಅಧ್ಯಯನದಲ್ಲಿ ಅಂತಹ ಯಾವುದೇ ಉದಾಹರಣೆ ದೊರೆಯುವುದಿಲ್ಲ. ಇದರಿಂದ ನಮ್ಮ ಸಾಮಾಜಿಕ ರಚನೆಯಲ್ಲಿಯೇ ಲೋಪವಿದ್ದು ಅದನ್ನು ಸರಿಪಡಿಸುವ ಅಗತ್ಯ ಕಂಡುಬರುತ್ತದೆ.

### ೬.೫. ಆಯ್ದ ಎರಡು ನೀ.ಬ.ಸ ಸಂಘಗಳ ಕಾರ್ಯನಿರ್ವಹಣೆಯ ತೌಲನಿಕ ನೋಟ

ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಒಡಂಬಡಿಕೆ ಒಪ್ಪಂದವಾಗಿರುವ ಎರಡು ನೀ.ಬ.ಸ. ಸಂಘಗಳನ್ನು ವಿಷಯಾಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನ ಕ್ಷೇತ್ರವಾದ ಶಿವಮೊಗ್ಗ ಮತ್ತು ಭದ್ರಾವತಿ ತಾಲ್ಲೂಕಿನ ತಲಾ ಒಂದು ನೀ.ಬ.ಸ. ಸಂಘವನ್ನು ಆಯ್ಕೆ ಮಾಡಿಕೊಳ್ಳ ಲಾಗಿದೆ. ಶಿವಮೊಗ್ಗ ತಾಲ್ಲೂಕಿನ ತುಂಗಾ ಜಲಾಶಯದ ಎಡದಂಡೆ ನಾಲೆಯ ಪ್ರಥಮ ವಿತರಣಾನಾಲೆಯ ವ್ಯಾಪ್ತಿಯ ಹೊಸಹಳ್ಳಿ ನೀ.ಬ.ಸ. ಸಂಘ ಹಾಗೂ ಭದ್ರಾವತಿ ತಾಲ್ಲೂಕಿನ ಭದ್ರಾ ಜಲಾಶಯದ ಬಲದಂಡೆ ನಾಲೆಯ ಕೆಳತುದಿಯ ೨೧ನೇ ವಿತರಣಾ ನಾಲೆಯ ವ್ಯಾಪ್ತಿಯಲ್ಲಿರುವ ಅರಹತೊಳಲು ನೀ.ಬ.ಸ. ಸಂಘವನ್ನು ವಿಶೇಷ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅಂದರೆ ಒಂದು ಮೇಲ್ತುದಿ ಸಂಘ ಮತ್ತು ಒಂದು ಕೆಳತುದಿ ನೀ.ಬ.ಸ. ಸಂಘವನ್ನು ವಿಷಯಾಧ್ಯಯನಕ್ಕೆ ಒಳಪಡಿಸಲಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಈ ಎರಡು ನೀ.ಬ.ಸ. ಸಂಘಗಳ ಸಾಮಾಜಿಕ ವಾತಾವರಣವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಎರಡೂ ಸಂಘಗಳ ಪದಾಧಿಕಾರಿಗಳ ಜಾತಿಸಂರಚನೆ, ಭೂಹಿಡುವಳಿಗಳ

ಪ್ರಮಾಣ, ಶಿಕ್ಷಣಮಟ್ಟ, ಆರ್ಥಿಕ ಸ್ಥಿತಿಗತಿ ಹಾಗೂ ರಾಜಕೀಯ ಸ್ಥಾನಮಾನಗಳನ್ನು ಗುರುತಿಸಲು ಪ್ರಯತ್ನ ಮಾಡಲಾಗಿದೆ. ಗ್ರಾಮೀಣ ಸಹಭಾಗಿತ್ವ ಸಮೀಕ್ಷೆ, ಅವಲೋಕನ ವಿಧಾನ, ಗುಂಪು ಚರ್ಚೆ, ಮುಖ್ಯ ವ್ಯಕ್ತಿಗಳ ಸಂದರ್ಶನ, ಸಭೆಗಳಲ್ಲಿ ಭಾಗವಹಿಸುವಿಕೆ, ಕ್ಷೇತ್ರ ಸಮೀಕ್ಷೆಗಳ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಸಂಘಗಳ ದಾಖಲೆಗಳ ಮೂಲಕ, ಜನಗಣತಿ ಮೂಲಕ, ಆನುಷಂಗಿಕ ಮಾಹಿತಿಯನ್ನು ಪಡೆದು ಸಂಘಗಳ ಹಣಕಾಸಿನ ಸ್ಥಿತಿ, ಸಹಭಾಗಿತ್ವದ ಪರಿಸ್ಥಿತಿಗಳನ್ನು ತಿಳಿದುಕೊಳ್ಳಲಾಗಿದೆ. ಪದಾಧಿಕಾರಿಗಳ ಜೊತೆಗೆ ಆಯ್ದು ಸದಸ್ಯರಿಂದ ಮತ್ತು ಸದಸ್ಯೇತರರಿಂದ ಪ್ರಶ್ನಾವಳಿಗಳ ಮೂಲಕ ಅವಶ್ಯಕ ಮಾಹಿತಿ ಸಂಗ್ರಹಿಸಲಾಗಿದೆ. ಆ ಮೂಲಕ ಈ ಎರಡೂ ಸಂಘಗಳ ಕಾರ್ಯನಿರ್ವಹಣಾ ಸಾಮರ್ಥ್ಯವನ್ನು ಅರಿತುಕೊಂಡು ಪರಸ್ಪರ ತೌಲನಿಕವಾಗಿ ಅವುಗಳನ್ನು ವಿಶ್ಲೇಷಿಸಲಾಗಿದೆ.

**೬.೫.೧. ಹೊಸಹಳ್ಳಿ ನೀ.ಬ.ಸ. ಸಂಘದ ಸಾಮಾಜಿಕ ವಾತಾವರಣ**

ಹೊಸಹಳ್ಳಿ ನೀ.ಬ.ಸ. ಸಂಘದ ವ್ಯಾಪ್ತಿಯಲ್ಲಿ ಒಟ್ಟು ೭ ಹಳ್ಳಿಗಳು ಬರುತ್ತವೆ. ಈ ೭ ಗ್ರಾಮಗಳಲ್ಲಿ ಒಟ್ಟು ೧೬೮೯ ಕುಟುಂಬಗಳಿವೆ. ೮೧೪೨ ಜನಸಂಖ್ಯೆಯಿದ್ದು ಇದರಲ್ಲಿ ೪೩೪೭ ಪುರುಷರು ಮತ್ತು ೩೭೯೫ ಮಹಿಳೆಯರಿದ್ದಾರೆ. ಅಂದರೆ ೫೫೨ ಮಹಿಳೆಯರು ಕಾಣೆಯಾಗಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಶೇ. ೨೦.೭೧ ರಷ್ಟು ಜನರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ. ಮತ್ತು ಶೇ. ೩.೪೭ ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಲಿಂಗಾನುಪಾತ ಕೆಲವು ಹಳ್ಳಿಗಳಲ್ಲಿ ಗರಿಷ್ಠ ೯೯೪ ಇದ್ದರೆ ಕೆಲವು ಹಳ್ಳಿಗಳಲ್ಲಿ ಅದು ಕನಿಷ್ಟ ೫೪೭ ರಷ್ಟಿರುವುದು ಕಂಡುಬರುತ್ತದೆ. ಪುರುಷರ ಸಾಕ್ಷರತಾ ಪ್ರಮಾಣ ಗರಿಷ್ಠ ಶೇ. ೮೯.೯ ರಷ್ಟಿದ್ದರೆ ಕನಿಷ್ಠ ಶೇ. ೫೩.೭ ರಷ್ಟಿರುವುದು ತಿಳಿದುಬರುತ್ತದೆ. ಮಹಿಳೆಯರ ಸಾಕ್ಷರತೆ ಪ್ರಮಾಣ ಗರಿಷ್ಟ ಶೇ. ೮೭.೨ ರಷ್ಟಿದ್ದು ಕನಿಷ್ಟ ಅದು ಶೇ. ೩೭.೩ ರಷ್ಟಿರುವುದು ಕಂಡುಬರುತ್ತದೆ. ಸೊನ್ನೆಯಿಂದ ಆರು ವರ್ಷದವರೆಗಿನ ಜನಸಂಖ್ಯೆ ಸರಾಸರಿ ಶೇ. ೬೩.೬೦ ರಷ್ಟಿದೆ. ದುಡಿಮೆಯಲ್ಲಿ ಭಾಗವಹಿಸುವ ಪುರುಷರ ಪ್ರಮಾಣ ಗರಿಷ್ಠ ಶೇ. ೬೩.೦೦ ರಷ್ಟಿದ್ದು, ಕನಿಷ್ಠ ಅದು ಶೇ. ೩೭.೯೦ ರಷ್ಟಿದೆ. ದುಡಿಮೆಯಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಗರಿಷ್ಠ ಶೇ. ೪೫.೭೦ ರಷ್ಟಿದ್ದು ಕನಿಷ್ಟ ಶೇ. ೯.೭೦ ರಷ್ಟಿರುವುದು ತಿಳಿದುಬರುತ್ತದೆ (ಜನಗಣತಿ, ೨೦೦೧).

ಹೊಸಹಳ್ಳಿ ನೀ.ಬ.ಸ. ಸಂಘದ ವ್ಯಾಪ್ತಿಯಲ್ಲಿರುವ ೭ ಗ್ರಾಮಗಳಲ್ಲಿ ಜನಸಂಖ್ಯೆ ಜಾತಿವಾರು ಸಂರಚನೆಯು ವೈವಿಧ್ಯತೆಯಿಂದ ಕೂಡಿದೆ. ಈ ಗ್ರಾಮಗಳಲ್ಲಿ ಹಿಂದೂ ಧರ್ಮೀಯರು ಬಹುತೇಕರಿದ್ದು, ಮುಸ್ಲಿಮರು ಎರಡನೇ ಸ್ಥಾನದಲ್ಲಿದ್ದಾರೆ. ಕೊನೆಯದಾಗಿ ಕ್ರೈಸ್ತರು ಅಲ್ಪಪ್ರಮಾಣದಲ್ಲಿದ್ದಾರೆ. ಹಿಂದೂ ಧರ್ಮದಲ್ಲಿ ಜಾತಿವಾರು ಹಂಚಿಕೆಯೂ ಪ್ರಮುಖವಾಗಿ ಬ್ರಾಹ್ಮಣರು, ಲಿಂಗಾಯತರು, ಒಕ್ಕಲಿಗರು ಪ್ರಧಾನ ಜಾತಿಗಳಾಗಿವೆ. ಕೆಲವು ಗ್ರಾಮಗಳಲ್ಲಿ ಉಪ್ಪಾರರು, ಮರಾಠರು, ಕುರುಬರು, ತಮಿಳುಗೌಂಡರ್, ಆಂಧ್ರಶೆಟ್ಟರು ಇರುವುದು ಕಂಡುಬರುತ್ತವೆ. ಭೂಹಿಡುವಳಿಗಳು ಪ್ರಮುಖವಾಗಿ ಬ್ರಾಹ್ಮಣರು, ಒಕ್ಕಲಿಗರು

ಮತ್ತು ಲಿಂಗಾಯಿತರ ಹಿಡಿತದಲ್ಲಿರುವುದು ತಿಳಿದುಬರುತ್ತದೆ. ಹೊಸಹಳ್ಳಿ ಗ್ರಾಮ ಬ್ರಾಹ್ಮಣರ ಇನ್ಾಮ್ತಿ ಗ್ರಾಮವಾದುದರಿಂದ ಬಹುತೇಕ ಭೂಮಿ ಬ್ರಾಹ್ಮಣರ ವಶದಲ್ಲಿದೆ. ಆನಂತರದಲ್ಲಿ ಭೂಮಿ ಲಿಂಗಾಯಿತರ ಮತ್ತು ಉಪ್ಪಾರರ ವಶದಲ್ಲಿದೆ. ಹೀಗಾಗಿ ಈ ಎಲ್ಲಾ ಗ್ರಾಮಗಳ ವ್ಯಾಪ್ತಿಯಲ್ಲಿನ ಅನೌಪಚಾರಿಕ ಮತ್ತು ಔಪಚಾರಿಕ ಸಂಘಸಂಸ್ಥೆಗಳಲ್ಲಿ ಈ ಪ್ರಬಲ ಜಾತಿಗಳ ಪ್ರಾಬಲ್ಯವೇ ಹೆಚ್ಚಾಗಿದೆ.

ಈ ಸಂಘದ ವ್ಯಾಪ್ತಿಯಲ್ಲಿ ಒಂದು ರಾಷ್ಟ್ರೀಕೃತ ಬ್ಯಾಂಕ್, ಒಂದು ವ್ಯವಸಾಯ ಸೇವಾ ಸಹಕಾರ ಬ್ಯಾಂಕು ಅಸ್ತಿತ್ವದಲ್ಲಿದೆ. ಹಲವಾರು ಯುವಕ ಸಂಘಗಳು, ಜಾತಿವಾರು ಸಂಘಗಳೂ ಇವೆ. ಈ ಸಂಘದ ವ್ಯಾಪ್ತಿಯಲ್ಲಿ ಮುಖ್ಯವಾಗಿ ಅಡಿಕೆ, ಭತ್ತ ಮತ್ತು ಕಬ್ಬನ್ನು ಬೆಳೆಯಲಾಗುತ್ತದೆ. ಈ ಸಂಘದ ಸ್ಥಾಪನೆಯು ೨೦೦೧ರಲ್ಲಿ ಆಗಿದ್ದು ಆಗಿನ ಆರಂಭಿಕ ಸದಸ್ಯರ ಸಂಖ್ಯೆ ೫೧ ಆಗಿದ್ದಿತು. ಈ ಸಂಘವು ೨೦೦೨ರಲ್ಲಿ ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದ ಮಾಡಿಕೊಂಡಿದ್ದು ನೀರು ದರ ವಸೂಲಾತಿ ಮತ್ತು ಕಾಮಗಾರಿಗಳನ್ನು ಕೈಗೊಳ್ಳುವ ಹಂತ ತಲುಪಿದೆ. ಸಂಘದಲ್ಲಿನ ಪ್ರಸ್ತುತ ಸದಸ್ಯರ ಸಂಖ್ಯೆ ೬೬೧ ಆಗಿದೆ. ಇದರಿಂದ ಸಂಘದ ಬೆಳವಣಿಗೆ ಪ್ರಗತಿದಾಯಕವಾಗಿದ್ದು, ನೀರು ದರ ವಸೂಲಾತಿ ಮತ್ತು ಕಾಮಗಾರಿಗಳನ್ನು ರೈತರ ಹಣಕಾಸಿನ ನೆರವಿನಿಂದಲೇ ಕೈಗೊಳ್ಳುತ್ತಿರುವುದರಿಂದ ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿಯೇ ಈ ಸಂಘ ಉತ್ತಮ ಕಾರ್ಯನಿರ್ವಹಿಸುತ್ತಿರುವ ಸಂಘವೆಂದು ಗುರುತಿಸಲ್ಪಟ್ಟಿದೆ. ಆದುದರಿಂದ ಈ ಸಂಘವನ್ನು ಯಶಸ್ವಿ ಸಂಘವೆಂದು ಆಯ್ಕೆ ಮಾಡಿಕೊಂಡು ವಿಷಯಾಧ್ಯಯನ ಮಾಡಲಾಗಿದೆ. ಜೊತೆ ಈ ಸಂಘದ ಪದಾಧಿಕಾರಿ ಮತ್ತು ಸದಸ್ಯರ ಸಾಮಾಜಿಕ ರಚನೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಗುರಿಪಡಿಸಲಾಗಿದೆ.

**೬.೫.೨. ಹೊಸಹಳ್ಳಿ ನೀ.ಬ.ಸ. ಸಂಘದ ಪದಾಧಿಕಾರಿಗಳ ಸಮಾಜೋ ಆರ್ಥಿಕ ಸ್ಥಿತಿಗತಿ**

ನೀ.ಬ.ಸ. ಸಂಘಗಳಲ್ಲಿನ ಪದಾಧಿಕಾರಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯ ಆಧಾರದ ಮೇಲೆ ಸಂಘದ ಕಾರ್ಯ ಚಟುವಟಿಕೆಗಳನ್ನು ಅಳತೆ ಮಾಡಬಹುದಾಗಿದೆ. ಜೊತೆಗೆ ಯಾವ ವರ್ಗದ ಹಿಡಿತದಲ್ಲಿ ಸಂಘವು ಇರುತ್ತದೆ ಎನ್ನುವುದನ್ನು ತಿಳಿಯಬಹುದಾಗಿದೆ. ಆದುದರಿಂದ ಹೊಸಹಳ್ಳಿ ನೀ.ಬ.ಸ. ಸಂಘದ ಆಡಳಿತ ಮಂಡಳಿಯ ಪ್ರಮುಖ ಹುದ್ದೆಗಳು ಜಾತಿವಾರು ಹೇಗೆ ಹಂಚಿಕೆಯಾಗಿವೆ ಎನ್ನುವುದನ್ನು ಕೋಷ್ಟಕ ೬.೧೩ರಲ್ಲಿ ನೀಡಲಾಗಿದೆ.

## ಹೊಸಹಳ್ಳಿ ಸೀ.ಬ.ಸ.ಸಂಘದ ಪದಾಧಿಕಾರಿಗಳ ಸಮಾಜೋ ಆರ್ಥಿಕ ಸ್ಥಿತಿಗತಿ

**ಕೋಷ್ಟಕ : ೬.೧೩**

| ಪದಾಧಿಕಾರಿಗಳ ವಿವರ | ಜಾತಿ | ಭೂಹಿಡುವಳಿ ಪ್ರಮಾಣ (ಎಕರೆಗಳಲ್ಲಿ) | ವಾರ್ಷಿಕ ವರಮಾನ | ಶೈಕ್ಷಣಿಕ ಮಟ್ಟ | ಇತರೆ ಸಂಘ ಸಂಸ್ಥೆಗಳಲ್ಲಿ ಸ್ಥಾನ | |
|---|---|---|---|---|---|---|
| | | | | | ಹಾಲಿ | ಮಾಜಿ |
| ಅಧ್ಯಕ್ಷ | ಬ್ರಾಹ್ಮಣ | ೯ | ೧೦ ಲಕ್ಷ | ಪದವಿ | ೫ | ೩ |
| ಉಪಾಧ್ಯಕ್ಷ | ಉಪ್ಪಾರ | ೨೫ | ೨೦ ಲಕ್ಷ | ಪ್ರೌಢ | ೨ | ೨ |
| ನಿರ್ದೇಶಕ (ಪ.ಜಾ.) | ಭೋವಿ | ೨ | ೧೫ ಸಾವಿರ | ಪ್ರಾಥಮಿಕ | ... | ... |
| ನಿರ್ದೇಶಕ (ಪ.ಪಂ.) | ಲಿಂಗಾಯಿತ | ೧೦ | ೮ ಲಕ್ಷ | ಪ್ರೌಢ | ... | ... |
| ನಿರ್ದೇಶಕ | ಲಿಂಗಾಯಿತ | ೧೬ | ೧೨ ಲಕ್ಷ | ಪ್ರಾಥಮಿಕ | ೧ | ೪ |
| ನಿರ್ದೇಶಕ | ಕುರುಬ | ೨ | ೨೦ ಸಾವಿರ | ಪ್ರೌಢ | ... | ... |
| ನಿರ್ದೇಶಕ | ಬ್ರಾಹ್ಮಣ | ೧೪ | ೧೧ ಲಕ್ಷ | ಪದವಿ | ೧ | ೧ |
| ನಿರ್ದೇಶಕ | ಬ್ರಾಹ್ಮಣ | ೩ | ೨ ಲಕ್ಷ | ಪದವಿ | ೧ | ೧ |
| ಕಾರ್ಯದರ್ಶಿ | ಲಿಂಗಾಯಿತ | ... | ೨೫ ಸಾವಿರ | ಪದವಿ | ೧ | ೧ |

ಮೂಲ : ಕ್ಷೇತ್ರಕಾರ್ಯ ಮಾಹಿತಿ.

ಕೋಷ್ಟಕದಲ್ಲಿ ಸೂಚಿಸಿರುವಂತೆ ಹೊಸಹಳ್ಳಿ ನೀ.ಬ.ಸ.ಸಂಘದ ಆಡಳಿತ ಮಂಡಳಿಯ ಪ್ರಮುಖ ಹುದ್ದೆಗಳು ಆ ಸಂಘದ ವ್ಯಾಪ್ತಿಯ ಪ್ರಧಾನ ಜಾತಿಗಳಿಗೆ ಸೇರಿವೆ. ಈ ಹುದ್ದೆಗಳಲ್ಲಿರುವ ಪ್ರಧಾನ ಜಾತಿಗಳ ಪದಾಧಿಕಾರಿಗಳ ಭೂಹಿಡುವಳಿಗಳ ಪ್ರಮಾಣ ದೊಡ್ಡದಾಗಿವೆ. ಅದೇ ರೀತಿ ಅವರ ವಾರ್ಷಿಕ ವರಮಾನವೂ ಹೆಚ್ಚಾಗಿದೆ. ಅವರು ಪಡೆದಿರುವ ಶಿಕ್ಷಣವು ಬಹುತೇಕ ಇತರರಿಗಿಂತ ಉನ್ನತವಾಗಿರುವುದು ಕಂಡುಬರುತ್ತದೆ. ಈ ಪ್ರಧಾನ ಜಾತಿಗಳು ಪ್ರಬಲ ಜಾತಿಗಳಾಗಿದ್ದು ಆಯಾ ಗ್ರಾಮಗಳ ವ್ಯಾಪ್ತಿಯ ಅನೌಪಚಾರಿಕ ಮತ್ತು ಔಪಚಾರಿಕ ಸಂಘ ಸಂಸ್ಥೆಗಳಲ್ಲಿ ಪ್ರಮುಖ ಹುದ್ದೆಗಳಲ್ಲಿರುವುದು ತಿಳಿಯುತ್ತದೆ. ಅಧ್ಯಕ್ಷರು ವಿವಿಧ ಸಂಘ ಸಂಸ್ಥೆಗಳಲ್ಲಿ ಅಧ್ಯಕ್ಷ, ನಿರ್ದೇಶಕ, ಸದಸ್ಯರಾಗಿ ಐದು ಸ್ಥಾನಗಳಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅದೇ ರೀತಿ ಮಾಜಿಯು ೩ ಮುಖ್ಯ ಸ್ಥಾನಗಳಲ್ಲಿ ಕಾರ್ಯನಿರ್ವಹಿಸಿರುವ ಅನುಭವ ಅವರಿಗಿದೆ. ಉಪಾಧ್ಯಕ್ಷರು ಇದೇ ಸ್ಥಾನಮಾನವನ್ನು ಪಡೆದಿದ್ದಾರೆ. ಪ್ರಬಲ ಜಾತಿಗೆ ಸೇರಿದ ಸರಿಸುಮಾರು ಎಲ್ಲ ನಿರ್ದೇಶಕರು ಒಂದಲ್ಲ ಒಂದು ಹುದ್ದೆಯನ್ನು ಪಡೆದವರೇ ಆಗಿದ್ದಾರೆ. ಆದರೆ ಮಹಿಳಾ ನಿರ್ದೇಶಕರು ಪ್ರಬಲ ಜಾತಿಗೆ ಸೇರಿದವರಾಗಿದ್ದರೂ ಇತರ ಸಂಘಸಂಸ್ಥೆಗಳಲ್ಲಿ ಯಾವುದೇ ಸ್ಥಾನಮಾನ ಪಡೆದಿಲ್ಲ. ಅದರಂತೆಯೇ ಪ್ರಧಾನವಲ್ಲದ ಇತರೆ ಜಾತಿಯ ನಿರ್ದೇಶಕರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಕೆಳಮಟ್ಟದಲ್ಲಿದ್ದಾರೆ.

ಕಾರ್ಯದರ್ಶಿ ಆಡಳಿತ ಮಂಡಳಿಯ ವ್ಯಾಪ್ತಿಗೆ ಬರದೇ ಇದ್ದರೂ ನೀ.ಬ.ಸ. ಸಂಘ ದಿನನಿತ್ಯದ ಕಾರ್ಯನಿರ್ವಹಣೆಯಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾನೆ. ಆದುದರಿಂದ ಇದು ಅಧಿಕಾರೇತರ ಪ್ರಮುಖ ಹುದ್ದೆಯಾಗಿದೆ. ಹೊಸಹಳ್ಳಿ ನೀ.ಬ.ಸ. ಸಂಘದಲ್ಲಿ ಕಾರ್ಯದರ್ಶಿಯು ಉತ್ತಮ ಶಿಕ್ಷಣ ಪಡೆದಿದ್ದು, ಸಹಕಾರದ ವಿಷಯದಲ್ಲಿ ತರಬೇತಿಯನ್ನು ಪಡೆದವರಾಗಿದ್ದಾರೆ. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇಲ್ಲದಿದ್ದರೂ ಇತರೆ ಸಂಘಸಂಸ್ಥೆಗಳಲ್ಲಿ ಪ್ರಮುಖವಲ್ಲದ ಕೆಲಸ್ಥಾನಗಳನ್ನು ಪಡೆದಿದ್ದಾರೆ.

ಹೊಸಹಳ್ಳಿ ನೀ.ಬ.ಸ.ಸಂಘದ ಕಾರ್ಯದರ್ಶಿಯ ಒಂದು ವಿಶೇಷವೆಂದರೆ ಇವರು ಈ ಸಂಘದ ವ್ಯಾಪ್ತಿಯ ಯಾವ ಗ್ರಾಮಕ್ಕೂ ಸೇರಿದವರಾಗದೆ ಹೊರಗಿನಿಂದ ನೇಮಕವಾಗಿದ್ದಾರೆ. ಆದುದರಿಂದ ಅವರಿಗೆ ಈ ಪ್ರದೇಶದಲ್ಲಿ ಯಾವುದೇ ಭೂಹಿಡುವಳಿಯಿಲ್ಲ. ಸರಕಾರಿ ನೌಕರರ ರೀತಿಯಲ್ಲಿ ಯಾವ ಸಂಬಂಧಗಳಿಗೂ ಅಂಟಿಕೊಳ್ಳದೆ ಕಾರ್ಯನಿರ್ವಹಿಸಲು ಸಾಧ್ಯವಾಗಿದೆ.

ಹೊಸಹಳ್ಳಿ ನೀ.ಬ.ಸ. ಸಂಘದಲ್ಲಿ ಈ ಹಿಂದೆ ಇದ್ದ ಆಡಳಿತ ಮಂಡಳಿಯಲ್ಲಿ ಅಧ್ಯಕ್ಷ ಸ್ಥಾನ ಲಿಂಗಾಯಿತರಿಗೆ ಸೇರಿದ್ದು, ಉಪಾಧ್ಯಕ್ಷ ಸ್ಥಾನ ಬ್ರಾಹ್ಮಣರಿಗೆ ಸೇರಿತ್ತು. ಉಳಿದಂತೆ ಇಬ್ಬರು ನಿರ್ದೇಶಕರು ಬ್ರಾಹ್ಮಣರಾಗಿದ್ದು, ಇಬ್ಬರು ಉಪ್ಪಾರ ಸಮುದಾಯದವರಾಗಿದ್ದಾರೆ. ಮಹಿಳಾ ನಿರ್ದೇಶಕರ ಸ್ಥಾನ ಒಕ್ಕಲಿಗ ಜಾತಿಗೆ ಸೇರಿರುವುದು ತಿಳಿಯುತ್ತದೆ. ಪ.ಪಂಗಡದ ಒಬ್ಬರು ನಿರ್ದೇಶಕರ ಸ್ಥಾನ ಪಡೆದಿರುವುದು ಕಂಡುಬರುತ್ತದೆ. ಅನಂತರ ಆಯ್ಕೆಯಾದ ಆಡಳಿತ ಮಂಡಳಿಯಲ್ಲಿ ಈ ಹಿಂದೆ ನಿರ್ದೇಶಕ ಸ್ಥಾನ ಹೊಂದಿದ್ದ ಬ್ರಾಹ್ಮಣರೇ ಅಧ್ಯಕ್ಷರಾಗಿದ್ದಾರೆ, ಅಧ್ಯಕ್ಷರಾಗಿದ್ದರೂ ಸಹ ನಿರ್ದೇಶಕ ಹುದ್ದೆಯನ್ನು ಅಲಂಕರಿಸಿದ್ದಾರೆ. ಹೀಗೆ ನಿರ್ಣಾಯಕ ಸ್ಥಾನಗಳಲ್ಲಿ ಮುಂದುವರಿದ ಸಮುದಾಯದವರೇ ಇರುವುದು ಸಾಮಾನ್ಯ ಸಂಗತಿಯಾಗಿದೆ. ಅದೇ ರೀತಿ ಹಳೆಯ ಆಡಳಿತ ಮಂಡಳಿಯ ಪದಾಧಿಕಾರಿಗಳ ಸಾಮಾಜಿಕ, ಆರ್ಥಿಕ, ಭೂಹಿಡುವಳಿ ಹಾಗೂ ರಾಜಕೀಯ ಸ್ಥಾನಮಾನಗಳು ಸರಿಸುಮಾರು ಒಂದೇ ರೀತಿಯಲ್ಲಿರುವುದು ಕಂಡುಬರುತ್ತದೆ.

**೬.೫.೩. ಹೊಸಹಳ್ಳಿ ನೀ.ಬ.ಸ. ಸಂಘದ ಸದಸ್ಯರ ಸಮಾಜೋ ಆರ್ಥಿಕ ಸ್ಥಾನಮಾನ**

ಹೊಸಹಳ್ಳಿ ನೀ.ಬ.ಸ. ಸಂಘದಲ್ಲಿ ಅತಿಹೆಚ್ಚು ಸದಸ್ಯತ್ವ ಹೊಂದಿರುವವರೆಂದರೆ ಬ್ರಾಹ್ಮಣರು, ನಂತರದ ಸ್ಥಾನದಲ್ಲಿ ಉಪ್ಪಾರರು, ಲಿಂಗಾಯಿತರು, ಪರಿಶಿಷ್ಟ ಜಾತಿ ಮತ್ತು ಒಕ್ಕಲಿಗರು ಬರುತ್ತಾರೆ. ಶಿಕ್ಷಣದಲ್ಲಿ ಪ್ರಥಮ ಸ್ಥಾನ ಬ್ರಾಹ್ಮಣರದ್ದಾಗಿದ್ದು ಶೇ. ೯೫ಕ್ಕಿಂತ ಹೆಚ್ಚಿನವರು ಅಕ್ಷರಸ್ಥರಾಗಿದ್ದಾರೆ. ಉಳಿದಂತೆ ಲಿಂಗಾಯಿತರು, ಒಕ್ಕಲಿಗರು. ಉಪ್ಪಾರರು ಶೇ. ೮೦ರಷ್ಟು ಶಿಕ್ಷಣ ಪಡೆದಿರುವುದು ತಿಳಿದುಬರುತ್ತದೆ. ಉಳಿದಂತೆ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಶೇ. ೬೫ ರಷ್ಟು ಸಾಕ್ಷರತೆ ಹೊಂದಿದ್ದಾರೆ. ಭೂಹಿಡುವಳಿಗಳಲ್ಲಿ ಬ್ರಾಹ್ಮಣರು ಪ್ರಥಮರಾಗಿದ್ದು ಉಪ್ಪಾರರು, ಲಿಂಗಾಯಿತರು ಎರಡನೆಯ ಸ್ಥಾನದಲ್ಲಿದ್ದಾರೆ. ನಂತರ ಸ್ಥಾನಗಳಲ್ಲಿ ಒಕ್ಕಲಿಗರು, ತಮಿಳುಗೌಂಡರ್, ಮರಾಠರು ಬರುತ್ತಾರೆ.

ಪರಿಶಿಷ್ಟ ಜಾತಿಯವರು ಪರಿಶಿಷ್ಟ ಪಂಗಡಕ್ಕಿಂತ ಹೆಚ್ಚಿನ ಭೂಹಿಡುವಳಿಗಳನ್ನು ಹೊಂದಿರುವುದು ಕಂಡುಬರುತ್ತದೆ. ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ.

**೬.೫.೪. ಅರಹತೊಳಲು ನೀ.ಬ.ಸ. ಸಂಘದ ಸಾಮಾಜಿಕ ವಾತಾವರಣ**

ಅರಹತೊಳಲು ನೀ.ಬ.ಸ.ಸಂಘದ ವ್ಯಾಪ್ತಿಯ ಒಟ್ಟು ೪ ಗ್ರಾಮಗಳಿವೆ. ಈ ೪ ಗ್ರಾಮಗಳಲ್ಲಿ ಒಟ್ಟು ೧೭೦೦ ಕುಟುಂಬಗಳಿವೆ. ಒಟ್ಟು ಜನಸಂಖ್ಯೆ ೮೫೭೮ ಇದ್ದು ಇದರಲ್ಲಿ ೪೩೯೧ ಪುರುಷರು ಮತ್ತು ೪೧೦೭ ಮಹಿಳೆಯರಿದ್ದಾರೆ. ಅಂದರೆ ೨೮೪ ಮಹಿಳೆಯರು ಕಾಣೆಯಾಗಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಶೇ. ೨೬.೬೧ ರಷ್ಟು ಪರಿಶಿಷ್ಟ ಜಾತಿಯವರಿದ್ದಾರೆ. ಕುತೂಹಲದ ಸಂಗತಿಯೆಂದರೆ ಪರಿಶಿಷ್ಟ ಜಾತಿಯಲ್ಲಿ ಲಿಂಗಾನುಪಾತ ಸರಿಸಮಾನವಾಗಿದೆ. ಅಂದರೆ ಪುರುಷರಷ್ಟೇ ಮಹಿಳೆಯರಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡದ ಜನಸಂಖ್ಯೆಯ ಪ್ರಮಾಣ ಶೇ. ೧೮.೬೧ರಷ್ಟಿದೆ. ಗ್ರಾಮಗಳನ್ನು ಗಮನಿಸಿದಾಗ ಕೆಲವು ಗ್ರಾಮಗಳಲ್ಲಿ ಲಿಂಗಾನುಪಾತ ಗರಿಷ್ಟ ೯೯೮ ಇದ್ದರೆ ಕೆಲವು ಗ್ರಾಮಗಳಲ್ಲಿ ಅದು ಕನಿಷ್ಟ ೯೨೦ ರಷ್ಟಿರುವುದು ಕಂಡುಬರುತ್ತದೆ. ಅದೇ ರೀತಿ ಸಾಕ್ಷರತೆಯ ಪ್ರಮಾಣ ಗರಿಷ್ಟ ಶೇ. ೬೬.೯ ರಷ್ಟಿದ್ದರೆ ಕನಿಷ್ಟ ಶೇ. ೫೬.೦ ರಷ್ಟಿರುವುದು ತಿಳಿದುಬರುತ್ತದೆ. ಲಿಂಗಾವಾರು ಸಾಕ್ಷರತೆಯನ್ನು ಗಮನಿಸಿದರೆ ಪುರುಷರಲ್ಲಿ ಗರಿಷ್ಟ ಶೇ. ೮೫.೭ ರಷ್ಟಿದ್ದು ಕನಿಷ್ಟ ಶೇ. ೬೬.೧ ರಷ್ಟಿದೆ. ಮಹಿಳೆಯಲ್ಲಿ ಗರಿಷ್ಟ ಶೇ. ೬೭.೫ ರಷ್ಟಿದ್ದು ಕನಿಷ್ಟ ೪೪.೯ ರಷ್ಟಿರುವುದು ತಿಳಿಯುತ್ತದೆ. ದುಡಿಮೆಯಲ್ಲಿ ಭಾಗವಹಿಸುವ ಪುರುಷರ ಪ್ರಮಾಣ ಗರಿಷ್ಟ ಶೇ. ೬೬.೧ ರಷ್ಟಿದೆ. ಕನಿಷ್ಟ ಶೇ. ೫೪.೧ ರಷ್ಟಾಗಿದೆ. ಮಹಿಳೆಯರ ದುಡಿಮೆಯ ಭಾಗವಹಿಸುವಿಕೆ ಗರಿಷ್ಟ ಶೇ. ೪೨.೪ ರಷ್ಟಿದ್ದರೆ ಕೆಲಗ್ರಾಮಗಳಲ್ಲಿ ಅದು ಕನಿಷ್ಟ ಶೇ. ೧೧.೪ ರಷ್ಟಿರುವುದು ಕಂಡುಬರುತ್ತದೆ. ಒಟ್ಟಾರೆ ಜನಸಂಖ್ಯೆಯ ಸ್ಥಿತಿಗತಿಗಳಲ್ಲಿ ಮಹಿಳೆಯರು ಹೆಚ್ಚಿನ ದುಸ್ಥಿತಿಯಲ್ಲಿರುವುದು ತಿಳಿದುಬರುತ್ತದೆ. ಅದೇ ರೀತಿ ಪರಿಶಿಷ್ಟರ ಸ್ಥಿತಿಗತಿಗಳು ಶೋಚನೀಯವಾಗಿದೆ.

ಅರಹತೊಳಲು ನೀರು ಬಳಕೆದಾರರ ಸಹಕಾರ ಸಂಘದ ವ್ಯಾಪ್ತಿಯಲ್ಲಿರುವ ೪ ಗ್ರಾಮಗಳಲ್ಲಿ ಜನಸಂಖ್ಯೆಯ ಜಾತಿವಾರು ಸಂರಚನೆಯು ವಿಭಿನ್ನವಾಗಿದೆ. ಎಲ್ಲ ಗ್ರಾಮಗಳಲ್ಲಿ ಹಿಂದೂಗಳೇ ಪ್ರಧಾನವಾಗಿರುವುದು ಕಂಡುಬರುತ್ತದೆ. ಕೆಲಗ್ರಾಮಗಳಲ್ಲಿ ಅಲ್ಪಸಂಖ್ಯಾತ ಮುಸ್ಲಿಮರು ಕಡಿಮೆ ಪ್ರಮಾಣದಲ್ಲಿದ್ದಾರೆ. ಹಿಂದೂ ಧರ್ಮದಲ್ಲಿ ಜನಸಂಖ್ಯೆಯ ಜಾತಿವಾರು ಹಂಚಿಕೆಯು ಪ್ರಮುಖವಾಗಿ ಲಿಂಗಾಯಿತರು, ನಾಯಕರು, ಮರಾಠರು, ಅಗಸರು, ಪರಿಶಿಷ್ಟ ಜಾತಿ ಮತ್ತು ಮೇದಾರರು ಇರುವುದು ಕಂಡುಬರುತ್ತದೆ.

ಭೂಹಿಡುವಳಿಗಳು ಮುಖ್ಯವಾಗಿ ಲಿಂಗಾಯಿತರು, ನಾಯಕರು ಹಾಗೂ ಮರಾಠ ಸಮುದಾಯಗಳ ಹಿಡಿತದಲ್ಲಿದೆ. ಉಳಿದಂತೆ ಸಣ್ಣ ಪ್ರಮಾಣದ ಹಿಡುವಳಿಗಳು ಅಗಸರು, ಪರಿಶಿಷ್ಟರು ಮತ್ತು ಮುಸ್ಲಿಮರ

ವಶದಲ್ಲಿವೆ. ಗ್ರಾಮಗಳಲ್ಲಿ ಅನೌಪಚಾರಿಕ ಮತ್ತು ಔಪಚಾರಿಕ ಸಂಘ ಸಂಸ್ಥೆಗಳಲ್ಲಿ ಗ್ರಾಮದ ಪ್ರಧಾನ ಜಾತಿಗಳ ಪ್ರಾಬಲ್ಯ ಎದ್ದುಕಾಣುತ್ತದೆ. ಈ ಗ್ರಾಮಗಳಲ್ಲಿ ಕೃಷಿಕಾರ್ಮಿಕರ ಕೂಲಿ ಪುರುಷರಿಗೆ ಸರಾಸರಿ ರೂ. ೫೦ ಇದ್ದರೆ ಸ್ತ್ರೀಯರಿಗೆ ಅದು ಕೇವಲ ರೂ. ೩೦ ಆಗಿದೆ. ಗ್ರಾಮಗಳಲ್ಲಿ ಅನೇಕ ಯುವಕ ಸಂಘಗಳು, ಸ್ತ್ರೀಶಕ್ತಿ ಸಂಘ, ಸ್ವಸಹಾಯ ಸಂಘಗಳು, ಒಂದು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ಅಸ್ತಿತ್ವದಲ್ಲಿದೆ. ಕುಡಿಯುವ ನೀರಿಗಾಗಿ, ವಿದ್ಯುತ್‌ಗಾಗಿ ಅನೇಕ ಹೋರಾಟ ಚಳುವಳಿಗಳನ್ನು ಮಾಡಿರುವ ಇತಿಹಾಸ ಈ ಗ್ರಾಮಗಳಿಗಿದೆ. ಅರಹತೊಳಲು ಗ್ರಾಮದಲ್ಲಿ ಜನರ ಹೋರಾಟದ ಮೂಲಕ ಸಾರಾಯಿ ಅಂಗಡಿಯನ್ನು ತೆಗೆಸಿರುವುದು ಕಂಡುಬರುತ್ತದೆ.

ಈ ಸಂಘದ ವ್ಯಾಪ್ತಿಯಲ್ಲಿ ಮುಖ್ಯವಾಗಿ ಭತ್ತ, ಕಬ್ಬು, ಅಡಿಕೆ, ರಾಗಿ, ಬಾಳೆ, ಮೆಕ್ಕೆಜೋಳ ಮೊದಲಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಸಂಘದ ಸ್ಥಾಪನೆಯು ೨೦೦೧ ರಲ್ಲಿ ಆಗಿದ್ದು ಆರಂಭದ ಸದಸ್ಯರ ಸಂಖ್ಯೆ ೯೪ ಆಗಿದ್ದು, ಪ್ರಸ್ತುತ ಸದಸ್ಯರ ಸಂಖ್ಯೆ ಕೇವಲ ೧೫೦ ಆಗಿದೆ. ೨೦೦೨ ರಲ್ಲಿ ಸಂಘವು ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದವನ್ನು ಮಾಡಿಕೊಂಡಿದೆ. ಆದರೆ ಇಲ್ಲಿಯ ತನಕ ನೀರು ದರ ವಸೂಲಿ ಮಾಡಲು ಸಂಘಕ್ಕೆ ಸಾಧ್ಯವಾಗಿಲ್ಲ. ರೈತರ ಸಹಭಾಗಿತ್ವದಲ್ಲಿ ಯಾವುದೇ ರೀತಿಯ ಕಾಮಗಾರಿಯನ್ನು ಕೈಗೊಳ್ಳಲು ಸಾಧ್ಯವಾಗದೇ ಇರುವುದು ತಿಳಿದುಬರುತ್ತದೆ. ಹಣಕಾಸಿನ ಸೌಲಭ್ಯ ಪಡೆಯುವಲ್ಲಿ, ಕಾಮಗಾರಿಗಳನ್ನು ಕೈಗೊಳ್ಳುವಲ್ಲಿ, ಕರ ವಸೂಲಾತಿ ಮಾಡುವಲ್ಲಿ ಹಾಗೂ ಸದಸ್ಯತ್ವವನ್ನು ಹೆಚ್ಚಿಸುವಲ್ಲಿ ಸಂಘ ಬಹಳ ಹಿಂದುಳಿದಿರುವುದು ತಿಳಿದುಬರುತ್ತದೆ. ಆದುದರಿಂದ ವೈಫಲ್ಯ ಸ್ಥಿತಿ ನಿರ್ಮಾಣವಾಗಿದೆ. ಅಧ್ಯಯನಕ್ಕೆ ಈ ಸಂಘವನ್ನು ವೈಫಲ್ಯದ ದೃಷ್ಟಿಯಿಂದ ಆಯ್ದು ಕೊಳ್ಳಲಾಗಿದೆ.

**೬.೫.೫. ಅರಹತೊಳಲು ನೀ.ಬ.ಸ. ಸಂಘದ ಪದಾಧಿಕಾರಿಗಳ ಸಮಾಜೋ ಆರ್ಥಿಕ ಸ್ಥಿತಿಗತಿ**

ನೀ.ಬ.ಸ. ಸಂಘದ ಆಡಳಿತ ಮಂಡಳಿಯಲ್ಲಿ ಯಾವ ಸಮುದಾಯದವರಿಗೆ ಸ್ಥಾನಗಳು ಸಿಕ್ಕಿವೆ ಎನ್ನುವ ಆಧಾರದ ಮೇಲೆ ಆ ಪದಾಧಿಕಾರಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬಹುದು. ಯಾವ ಜಾತಿಗಳ ಹಿಡಿತದಲ್ಲಿ ಸಂಘ ತನ್ನ ಕಾರ್ಯನಿರ್ವಹಿಸುತ್ತದೆ ಎನ್ನುವುದನ್ನು ಅರ್ಥಮಾಡಿಕೊಳ್ಳಬಹುದು. ಅರಹತೊಳಲು ನೀ.ಬ.ಸ. ಸಂಘದ ಆಡಳಿತ ಮಂಡಳಿಯ ಪ್ರಮುಖ ಹುದ್ದೆಗಳು ಲಿಂಗಾಯಿತರ ವಶದಲ್ಲಿರುವುದು ತಿಳಿದುಬರುತ್ತದೆ.

## ಅರಹತೊಳಲು ನೀ.ಬ.ಸ.ಸಂಘದ ಪದಾಧಿಕಾರಿಗಳ ಸಮಾಜೋ ಆರ್ಥಿಕ ಸ್ಥಿತಿ

ಕೋಷ್ಟಕ : ೬.೧೪

| ಪದಾಧಿಕಾರಿಗಳ ವಿವರ | ಜಾತಿ | ಭೂಹಿಡುವಳಿ ಪ್ರಮಾಣ (ಎಕರೆಗಳಲ್ಲಿ) | ವಾರ್ಷಿಕ ವರಮಾನ | ಶೈಕ್ಷಣಿಕ ಮಟ್ಟ | ಇತರ ಸಂಘ ಸಂಸ್ಥೆಗಳಲ್ಲಿ ಸ್ಥಾನ | |
|---|---|---|---|---|---|---|
| | | | | | ಹಾಲಿ | ಮಾಜಿ |
| ಅಧ್ಯಕ್ಷ | ಲಿಂಗಾಯಿತ | ೧೨ | ೭ ಲಕ್ಷ | ಪ್ರೌಢ | ... | ೨ |
| ಉಪಾಧ್ಯಕ್ಷ | ವಾಲ್ಮೀಕಿ | ೧ | ೩೫ ಸಾವಿರ | ಸ್ನಾತಕ ಪದವಿ | ... | ... |
| ನಿರ್ದೇಶಕ | ಲಿಂಗಾಯಿತ | ೮ | ೫ ಲಕ್ಷ | ಕಾನೂನು ಪದವಿ | ೧ | ೨ |
| ನಿರ್ದೇಶಕ (ಮಹಿಳೆ) | ಲಿಂಗಾಯಿತ | ೬ | ೪ ಲಕ್ಷ | ಪ್ರಾಥಮಿಕ | ... | ... |
| ನಿರ್ದೇಶಕ | ಮರಾಠಿ | ೧೪ | ೯ ಲಕ್ಷ | ಪ್ರಾಥಮಿಕ | ... | ೧ |
| ನಿರ್ದೇಶಕ (ಪ.ಪಂ) | ವಾಲ್ಮೀಕಿ | ೭ | ೩ ಲಕ್ಷ | ಪ್ರಾಥಮಿಕ | ... | ೧ |
| ನಿರ್ದೇಶಕ | ಮುಸ್ಲಿಂ | ೮ | ೪.೫ ಲಕ್ಷ | ಅನಕ್ಷರಸ್ಥ | ... | ... |
| ನಿರ್ದೇಶಕ | ಮರಾಠಿ | ೭ | ೫ ಲಕ್ಷ | ಪದವಿ | ... | ... |
| ಕಾರ್ಯದರ್ಶಿ | ಲಿಂಗಾಯಿತ | ೨ | ೧೦ ಸಾವಿರ | ಪದವಿ | ... | ... |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಕೋಷ್ಟಕದಲ್ಲಿ ನೀಡಿರುವಂತೆ ಅರಹತೊಳಲು ನೀ.ಬ.ಸ. ಸಂಘದ ಆಡಳಿತ ಮಂಡಳಿಯ ಪ್ರಮುಖ ಸ್ಥಾನಗಳು ಪ್ರಧಾನ ಜಾತಿಗಳ ವಶದಲ್ಲಿವೆ. ಮುಖ್ಯ ಹುದ್ದೆಗಳಲ್ಲಿರುವ ಪ್ರಧಾನ ಜಾತಿಗಳ ಪದಾಧಿಕಾರಿಗಳ ಭೂಹಿಡುವಳಿಗಳ ಪ್ರಮಾಣವೂ ದೊಡ್ಡದಾಗಿದೆ. ಅವರು ವಾರ್ಷಿಕವಾಗಿ ಗಳಿಸುವ ವರಮಾನ ಅಧಿಕವಾಗಿದೆ. ಶೈಕ್ಷಣಿಕವಾಗಿಯೂ ಅವರ ಸಾಧನೆ ಇತರರಿಗಿಂತ ಉತ್ತಮವಾಗಿದೆ. ಈ ಪ್ರಧಾನ ಜಾತಿಗಳು ಪ್ರಬಲ ಜಾತಿಗಳಾಗಿದ್ದು ಆಯಾ ಗ್ರಾಮಗಳ ವ್ಯಾಪ್ತಿಯ ಅನೌಪಚಾರಿಕ ಮತ್ತು ಔಪಚಾರಿಕ ಸಂಘ-ಸಂಸ್ಥೆಗಳಲ್ಲಿ ಪ್ರಮುಖ ಹುದ್ದೆಗಳಲ್ಲಿರುವುದು ಕಂಡುಬರುತ್ತದೆ. ಆಯಾ ಗ್ರಾಮಗಳಲ್ಲಿ ಕೆಲವು ಕೆಳಜಾತಿಗಳು ಬಹುಸಂಖ್ಯೆಯಲ್ಲಿ ಇರುವುದರಿಂದ ಅಲ್ಲಿ ಅದೇ ಜಾತಿ ಸಮುದಾಯ ಹೆಚ್ಚಿನ ಅಧಿಕಾರ, ನಿಯಂತ್ರಣ ಹೊಂದಿರುವುದನ್ನು ಕಾಣಬಹುದಾಗಿದೆ. ಹಾಲಿ ಮತ್ತು ಮಾಜಿಯಾಗಿ ಕೆಲವು ಸ್ಥಾನಗಳು ಪ್ರಧಾನ ಜಾತಿಗೆ ಸೇರಿದ ಪದಾಧಿಕಾರಿಗಳಿಗೆ ಲಭ್ಯವಾಗಿರುವುದು ಅವರು ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಉನ್ನತ ಮಟ್ಟದಲ್ಲಿರುವುದರ ಪ್ರತಿಬಿಂಬವಾಗಿದೆ. ಉಳಿದಂತೆ ಇತರೆ ಜಾತಿ ಸಮುದಾಯದವರು ಸಾಮಾಜಿಕ ಮತ್ತೆ ರಾಜಕೀಯವಾಗಿ ಅಷ್ಟೇನು ಉತ್ತಮ ಸ್ಥಿತಿಯಲ್ಲಿರದಿರುವುದು ಕಂಡುಬರುತ್ತದೆ.

ನೀ.ಬ.ಸ. ಸಂಘದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿ ಕಾರ್ಯದರ್ಶಿ ಕೆಲಸ ನಿರ್ವಹಿಸುತ್ತಾರೆ. ಸಂಘದ ದೈನಂದಿನ ಚಟುವಟಿಕೆಗಳ ನಿರ್ವಹಣೆಯಲ್ಲಿ ಕಾರ್ಯದರ್ಶಿಯ ಪಾತ್ರ ಪ್ರಮುಖವಾಗಿರುತ್ತದೆ. ಪ್ರಸ್ತುತ ಅರಹತೊಳಲು ನೀ.ಬ.ಸ. ಸಂಘದ ಕಾರ್ಯದರ್ಶಿಯು ಅದೇ ಗ್ರಾಮಕ್ಕೆ ಸೇರಿದವರಾಗಿದ್ದು ಮೇಲ್ವರ್ಗಕ್ಕೆ ಸೇರಿದವರಾಗಿದ್ದಾರೆ. ಆರ್ಥಿಕವಾಗಿ ಅಂತಹ ಉತ್ತಮ ಸ್ಥಿತಿಯಲ್ಲಿ ಇಲ್ಲದಿದ್ದರೂ ಶೈಕ್ಷಣಿಕವಾಗಿ ಅವರು ಪದವಿ ಪಡೆದವರಾಗಿರುವುದು ತಿಳಿದುಬರುತ್ತದೆ. ವಾಣಿಜ್ಯ ಪದವಿಯನ್ನು ಪಡೆದಿರುವುದರಿಂದ ಪೆಚ್ಚ ಪತ್ರ ನಿರ್ವಹಣೆಗೆ ಹೆಚ್ಚಿನ ಅನುಕೂಲವಾಗಿರುವುದು ತಿಳಿದುಬರುತ್ತದೆಯಾದರೂ ಸಂಘದ ಪ್ರಗತಿ ತೃಪ್ತಿದಾಯಕವಾಗಿಲ್ಲ.

ಮಹಿಳಾ ನಿರ್ದೇಶಕಿ ಹುದ್ದೆಯೂ ಪ್ರಧಾನ ಜಾತಿಗೆ ಸೇರಿದ್ದು, ಅವರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವುದು ತಿಳಿದುಬರುತ್ತದೆ. ಆದರೆ ಶಿಕ್ಷಣದಲ್ಲಿ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ಅದೇ ರೀತಿ ಅಲ್ಪಸಂಖ್ಯಾತ ನಿರ್ದೇಶಕರು ಆರ್ಥಿಕವಾಗಿ ಉನ್ನತ ಸ್ಥಿತಿಯಲ್ಲಿದ್ದರೂ ಅನಕ್ಷರಸ್ಥರಾಗಿದ್ದಾರೆ.

ಹೀಗೆ ಕೆಲವು ಸಂಗತಿಗಳಲ್ಲಿ ಉತ್ತಮ ಸ್ಥಿತಿಯಲ್ಲಿದ್ದು ಉಳಿದಂತೆ ಹಲವಾರು ಸಂಗತಿಗಳಲ್ಲಿ ಸಂಘವು ದುಸ್ಥಿತಿಯಲ್ಲಿದೆ. ಇಲ್ಲಿಯ ತನಕ ಇಲ್ಲಿ ಯಾವುದೇ ಚುನಾವಣೆಗಳು ನಡೆಯದಿರುವುದು ಒಂದು ಸಮಸ್ಯೆಯಾಗಿದೆ. ಅದೇ ರೀತಿ ಸಂಘದಲ್ಲಿ ಸದಸ್ಯತ್ವವನ್ನು ಅಧಿಕಗೊಳಿಸುವಲ್ಲಿ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ನೀರು ದರ ಸಂಗ್ರಹದಲ್ಲಿ ಸಾಧನೆ ಶೂನ್ಯ. ಇನ್ನು ಸಂಘವು ಯಾವುದೇ ಕಾಮಗಾರಿಯನ್ನು ಕೈಗೊಂಡಿಲ್ಲ. ಈ ದೃಷ್ಟಿಯಿಂದ ಸಂಘವೂ ತನ್ನ ಕಾರ್ಯನಿರ್ವಹಣೆಯಲ್ಲಿ ಸಂಪೂರ್ಣವಾಗಿ ವಿಫಲವಾಗಿದೆ. ಸಂಘವು ನಾಮಮಾತ್ರವಾಗಿದ್ದು ಸ್ಥಗಿತ ಸ್ಥಿತಿಯಲ್ಲಿದೆ. ಆಡಳಿತ ಮಂಡಳಿಯ ಸಭೆಗಳು ನಿಯಮಿತವಾಗಿ ನಡೆಯುತ್ತಿಲ್ಲ. ಅದೇ ರೀತಿ ಸರ್ವಸದಸ್ಯರ ಸಭೆಗಳೂ ಕೇವಲ ಸಾಂಕೇತಿಕವಾಗಿ ನಡೆಯುತ್ತವೆ. ಹೀಗಾಗಿ ಸಂಘವು ತನ್ನ ಕಾರ್ಯನಿರ್ವಹಣೆಯಲ್ಲಿ ಯಾವುದೇ ಪ್ರಗತಿ ಸಾಧಿಸಲು ಸಾಧ್ಯವಾಗಿಲ್ಲ.

**೬.೫.೬. ಅರಹತೊಳಲು ನೀ.ಬ.ಸ. ಸಂಘದ ಸದಸ್ಯರ ಸಮಾಜೋ ಆರ್ಥಿಕ ಸ್ಥಿತಿಗತಿ**

ಈ ನೀರು ಬಳಕೆದಾರರ ಸಹಕಾರ ಸಂಘದಲ್ಲಿ ಲಿಂಗಾಯಿತರು ಹೆಚ್ಚಿನ ಸದಸ್ಯತ್ವ ಹೊಂದಿದ್ದು ಮೊದಲ ಸ್ಥಾನದಲ್ಲಿದ್ದಾರೆ. ಅವರು ಹೆಚ್ಚಿನ ಭೂಹಿಡುವಳಿಗಳನ್ನು ಹೊಂದಿದವರಾಗಿದ್ದು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವುದು ತಿಳಿದುಬರುತ್ತದೆ. ಉಳಿದಂತೆ ಮರಾಠರು, ವಾಲ್ಮೀಕಿ ನಾಯಕರು ಕೆಲಮಟ್ಟಿಗೆ ಉತ್ತಮವಾಗಿರುವುದು ಕಂಡುಬರುತ್ತದೆ. ಪರಿಶಿಷ್ಟ ಜಾತಿ ಮತ್ತು ಅಲ್ಪಸಂಖ್ಯಾತರಾದ ಮುಸ್ಲಿಂರು ದುಸ್ಥಿತಿಯಲ್ಲಿದ್ದಾರೆ. ಮಹಿಳೆಯರ ಸ್ಥಾನಮಾನವೂ ಇತರ ಎಲ್ಲರಿಗಿಂತಲೂ ಕೆಳಮಟ್ಟದಲ್ಲಿದೆ.

ಒಟ್ಟಾರೆ ಈ ಎಲ್ಲ ಸಂಗತಿಗಳನ್ನು ಗಮನಿಸಿದಾಗ ಅಧಿಕಾರ, ನಿಯಂತ್ರಣ, ಸ್ಥಾನಮಾನಗಳು ಮುಂದುವರಿದ ಜಾತಿ ಸಮುದಾಯಗಳಲ್ಲಿ ಮಡುಗಟ್ಟಿದೆ. ನಿರ್ಧಾರಗಳನ್ನು ಕೈಗೊಳ್ಳುವಾಗ ಇದರ

ಪರಿಣಾಮ ಕಂಡುಬರುತ್ತದೆ. ಮೇಲ್ವರ್ಗದ ಹಿತಾಸಕ್ತಿಗಳಿಗೆ ಅನುಗುಣವಾಗಿಯೇ ಸಂಘಗಳು ಕಾರ್ಯ ನಿರ್ವಹಿಸುವ ಸಾಧ್ಯತೆ ಹೆಚ್ಚಾಗಿರುತ್ತದೆ. ನೀ.ಬ.ಸ. ಸಂಘಗಳಲ್ಲಿನ ಪ್ರಮುಖ ಹುದ್ದೆಗಳು ಆಯಾ ಪ್ರದೇಶದ ಪ್ರಧಾನ ಜಾತಿಗಳ ವಶದಲ್ಲಿರುವುದು ಸರ್ವೇ ಸಾಮಾನ್ಯವಾದ ಸಂಗತಿಯಾಗಿದೆ. ಇದರಿಂದ ಪ್ರಜಾಸತ್ತಾತ್ಮಕ ಪ್ರಕ್ರಿಯೆ ಎಲ್ಲಾ ವರ್ಗಗಳಿಗೂ ಸಮಾನವಾಗಿ ಹರಿಯಲು ಸಾಧ್ಯವಿಲ್ಲ. ವಿಕೇಂದ್ರೀಕರಣ ಮೇಲ್ವರ್ಗದವರಲ್ಲಿ ಮಾತ್ರ ಸುತ್ತು ಹೊಡೆಯುತ್ತಿರುವುದರಿಂದ ತಳವರ್ಗಗಳಿಗೆ ಹೆಚ್ಚಿನ ಅನುಕೂಲ ವಾಗದಿರುವುದು ಒಂದು ತೊಡಕಾಗಿ ಪರಿಣಮಿಸಿದೆ.

ನೀ.ಬ.ಸ. ಸಂಘಗಳಲ್ಲಿ ಮೀಸಲಾತಿಯ ಮೂಲಕ ಅಂಚಿಗೆ ತಳ್ಳಲ್ಪಟ್ಟ ಜನ ಸಮುದಾಯಗಳಿಗೆ ಅವಕಾಶ ಕಲ್ಪಿಸಲಾಗಿದೆಯಾದರೂ ಇಂತಹ ಮೀಸಲಾತಿಯಿಂದ ಆ ವರ್ಗದ ಹಿತಾಸಕ್ತಿ ಸಾಧ್ಯವಾಗದಿರುವುದು ಕಂಡುಬರುತ್ತದೆ. ಗ್ರಾಮಸಮಾಜದಲ್ಲಿನ ವಿಣಿಶ್ರೇಣಿಗಳು ಅಸಮಾನತೆಗೆ ಕಾರಣವಾಗಿದ್ದು ಯಾವುದೇ ಸುಧಾರಣೆಗಳು ನಿರೀಕ್ಷಿಸಿದ ಫಲಿತ ನೀಡುತ್ತಿಲ್ಲ. ಇಂದಿನ ಜಾಗತಿಕ ಸಂದರ್ಭದಲ್ಲಿ ಈ ಅಸಮಾನತೆಯು ಇನ್ನಷ್ಟು ಹೆಚ್ಚಾಗಿರುವುದನ್ನು ಗಮನಿಸಬೇಕಾದ ಸಂಗತಿಯಾಗಿದೆ. ಪ್ರಸ್ತುತ ಜಾತಿವಾರು ವಿಣಿಶ್ರೇಣಿಯು ವರ್ಗವಾರು ವಿಣಿಶ್ರೇಣಿಗೆ ಅವಕಾಶ ನೀಡಿ, ಉಳ್ಳವರು ಎಲ್ಲ ಕ್ಷೇತ್ರಗಳಲ್ಲಿ ಹೆಚ್ಚಿನ ಅವಕಾಶ ಮತ್ತು ಅನುಕೂಲಗಳನ್ನು ಹೊಂದುತ್ತಿದ್ದು, ಇಲ್ಲದವರಿಗೆ ಎಲ್ಲ ಕ್ಷೇತ್ರಗಳಲ್ಲಿ ಅವಕಾಶ ವಂಚಿತರಾಗಿದ್ದಾರೆ ಮತ್ತು ಅನಾನುಕೂಲ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಹೀಗಾಗಿ ಸಾಮಾಜಿಕ ಅಸಮಾನತೆ ಮತ್ತು ವಿಣಿಶ್ರೇಣಿ ವ್ಯವಸ್ಥೆ ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆಗೆ ತೊಡಕಾಗಿವೆ.

ಇನ್ನೊಂದು ಮುಖ್ಯ ಸಂಗತಿಯೆಂದರೆ ಜನಸಂಖ್ಯೆಯಲ್ಲಿ ಅರ್ಧಪಾಲನ್ನು ಪಡೆದಿರುವ ಮಹಿಳೆಯರಿಗೆ ನೀ.ಬ.ಸ.ಸಂಘಗಳಲ್ಲಿ ಯಾವುದೇ ಸ್ಥಾನಮಾನ ದಕ್ಕಿಲ್ಲ. ಪುರುಷರಿಗಿಂತ ಹೆಚ್ಚಿನ ದುಡಿಮೆಯನ್ನು ಮಾಡುವ ಮಹಿಳೆಯರು ಸಂಘಗಳಲ್ಲಿ ಯಾವುದೇ ಅವಕಾಶ ಪಡೆದಿಲ್ಲ. ಅಧ್ಯಯನ ಕ್ಷೇತ್ರದಲ್ಲಿ ಯಾವುದೇ ನೀ.ಬ.ಸ. ಸಂಘದಲ್ಲಿ ಮೀಸಲಾತಿಯನ್ನು ಹೊರತುಪಡಿಸಿದರೆ ಅಧ್ಯಕ್ಷ ಅಥವಾ ಉಪಾಧ್ಯಕ್ಷ ಸ್ಥಾನ ಮಹಿಳೆಗೆ ದೊರೆತಿಲ್ಲ. ಕೃಷಿಯಲ್ಲಿ ಹೆಚ್ಚಿನ ಕಾರ್ಯನಿರ್ವಹಿಸುವ, ನೀರಿನೊಂದಿಗೆ ಅನ್ಯೋನ್ಯ ಸಂಬಂಧ ಹೊಂದಿರುವ ಮಹಿಳೆಗೆ ನೀ.ಬ.ಸ. ಸಂಘದಲ್ಲಿ ಅವಕಾಶ ನೀಡದೇ ಇರುವುದು ನಮ್ಮ ವ್ಯವಸ್ಥೆಯ ಒಂದು ಲೋಪವಾಗಿದೆ. ಈ ಮೀಸಲಾತಿಯಲ್ಲಿಯೂ ಮುಂದುವರಿದ ಜಾತಿಗಳು ಹೆಚ್ಚಿನ ಪಾಲನ್ನು ಪಡೆದಿವೆ. ಅಂಚಿಗೆ ತಳ್ಳಲ್ಪಟ್ಟ ಜಾತಿ ಸಮುದಾಯದ ಮಹಿಳೆಯರಿಗೆ ಯಾವುದೇ ಸ್ಥಾನ ಲಭಿಸಿಲ್ಲ. ದೊರೆತಿರುವ ಅವಕಾಶಗಳೂ ನಾಮಮಾತ್ರವಾಗಿದ್ದು ಮಹಿಳೆಯರ ನಿರ್ಧಾರಗಳಿಗೆ ಯಾವ ಮಾನ್ಯತೆಯೂ ದೊರೆಯುತ್ತಿಲ್ಲ. ಇದರಿಂದ ಮಹಿಳೆಯರ ಒಟ್ಟಾರೆ ಪರಿಸ್ಥಿತಿ ದುಸ್ಥಿತಿಗೆ ತಳ್ಳಲ್ಪಟ್ಟಿದೆ. ಅದರಲ್ಲೂ ದುರ್ಬಲ ವರ್ಗದ ಮಹಿಳೆಯರು ಹೆಚ್ಚಿನ ದುಸ್ಥಿತಿಗೆ ಗುರಿಯಾಗಿದ್ದಾರೆ.

ವಿಕೇಂದ್ರೀಕರಣದ ಮೂಲಕ ಜನರ ಸಹಭಾಗಿತ್ವ ಎಲ್ಲ ಸಮುದಾಯದ ಹಿತಾಸಕ್ತಿಗಳನ್ನು ಬಿಂಬಿಸಬೇಕು. ಆದರೆ ಅದು ಪ್ರಜಾಸತ್ತಾತ್ಮಕವಾಗಿರದೇ ಇದ್ದರೆ ಕೆಲವೇ ವರ್ಗಗಳ ಹಿತಾಸಕ್ತಿಯನ್ನು ಕಾಪಾಡಿ ಉಳಿದ ತಳಮಟ್ಟದ ಸಮುದಾಯಗಳನ್ನು ಹೊರದೂಡುವ ಸಾಧ್ಯತೆ ಹೆಚ್ಚಾಗಿರುತ್ತದೆ. ಮಹಿಳೆ ಮತ್ತು ದುರ್ಬಲ ವರ್ಗದ ಜನರನ್ನು ವಿಕೇಂದ್ರೀಕರಣ ಒಳಗೊಳ್ಳಬೇಕಾದರೆ ಪ್ರಜಾಸತ್ತಾತ್ಮಕ ಪ್ರಕ್ರಿಯೆ ಸಂಪೂರ್ಣವಾಗಿ ಜಾರಿಗೊಳ್ಳಬೇಕಾಗುತ್ತದೆ. ತಳಮಟ್ಟ ಜನರನ್ನು ಮತ್ತು ಮಹಿಳೆಯರನ್ನು ಸಬಲೀಕರಣಗೊಳಿಸಿದರೆ ಮಾತ್ರ ಅವರು ತಮಗೆ ದೊರಕಬೇಕಾದ ಸ್ಥಾನಗಳನ್ನು ಧಾರಣೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಧಾರಣ ಶಕ್ತಿಯಿಲ್ಲದೆ ಈ ವರ್ಗಗಳ ಅಭಿವೃದ್ಧಿ ಸಾಧ್ಯವಿಲ್ಲ ಎನ್ನುವುದು ಈ ಅಧ್ಯಾಯದ ಮೂಲಕ ತಿಳಿಯುತ್ತದೆ.

ಈ ಅಧ್ಯಾಯದ ಒಟ್ಟು ವಿವರಗಳನ್ನು ಮುಂದಿಟ್ಟುಕೊಂಡರೆ ಕೆಲವು ಅಂಶಗಳು ತಿಳಿದುಬರುತ್ತವೆ. ಇಂದು ಗ್ರಾಮವನ್ನು ನೋಡುವ, ಅರ್ಥೈಸುವ ವಿಧಾನವೇ ಬದಲಾಗಬೇಕಿದೆ. ಅಂತೆಯೇ ಈ ಅಧ್ಯಯನದಲ್ಲಿ ಗ್ರಾಮವನ್ನು ಹಲವು ಕವಲುಗಳ ಮೂಲಕ ನೋಡಲಾಗಿದೆ. ಜಾತಿ ಶ್ರೇಣೀಕರಣ, ಆರ್ಥಿಕ ಶ್ರೇಣೀಕರಣ, ಲಿಂಗಾಧಾರಿತ ನೆಲೆ, ಜಾತಿಯ ಹಿಮ್ಮುಖ ಚಲನೆ, ಸ್ತ್ರೀಯ ಹಕ್ಕು ಸ್ವಾತಂತ್ರ್ಯದ ನೆಲೆ, ಅವಕಾಶ ವಂಚಿತರ ಅಧೀನತೆ, ಅವಕಾಶ ಪಡೆದವರ ಪ್ರಧಾನತೆ ಜನರ ಜೀವನ ವಿಧಾನ, ಅವರ ಸಾಂಸ್ಕೃತಿಕ ಬದಲಾವಣೆಯ ಸ್ವರೂಪ, ಜಾಗತಿಕ ಮಾರುಕಟ್ಟೆಯ ಪರಿಣಾಮ, ನೀರು ಒಂದು ಗ್ರಾಮದಲ್ಲಿ ಹೇಗೆ ಬದುಕಿನ ಭಾಗವಾಗಿದೆ, ಇಂತಹ ಹತ್ತಾರು ಅಂಶಗಳನ್ನಿಟ್ಟುಕೊಂಡು ಗ್ರಾಮವನ್ನು ನೋಡಲಾಗಿದೆ.

ಇಲ್ಲಿ ಮುಖ್ಯವಾಗಿ ನೀರು ಬಳಕೆದಾರರ ಸಹಕಾರ ಸಂಘಗಳ ಸಾಮಾಜಿಕ ಸಂರಚನೆಯನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ. ನೀರು ಮುಖ್ಯವಾಗಿ ಆರ್ಥಿಕತೆ ಮತ್ತು ಆಧುನಿಕತೆಯನ್ನು ನಿರ್ಧರಿಸುತ್ತದೆ. ಆರ್ಥಿಕತೆಯನ್ನು ಗ್ರಾಮದ ದೊಡ್ಡ ಹಿಡುವಳಿದಾರರು ಮೊದಲು ವಶಪಡಿಸಿಕೊಳ್ಳುತ್ತಾರೆ. ನೀರು ಬಳಕೆದಾರರ ಸಂಘಗಳು ಮೇಲುನೋಟಕ್ಕೆ ಪ್ರಜಾಪ್ರಭುತ್ವ ಮಾದರಿಯ ಅಧಿಕಾರ ವಿಕೇಂದ್ರೀಕರಣದ ಘಟಕಗಳಂತೆ ಕಾಣುತ್ತವೆ. ತಾಂತ್ರಿಕವಾಗಿ ಹಾಗೆಯೇ ಇರುತ್ತವೆ. ಆದರೆ ಅದರ ಸೂಕ್ಷ್ಮ ವಿವರಗಳನ್ನು ಶೋಧಿಸುತ್ತ ಹೊರಟರೆ ಈ ಸಂಘಗಳ ಒಳಗಿರುವ ಇನ್ನೊಂದು ಜಗತ್ತು ಕಾಣಿಸಿಕೊಳ್ಳುತ್ತದೆ. ಇಲ್ಲಿ ಮೀಸಲಾತಿಯ ಪ್ರಕಾರವೇ ಸದಸ್ಯತ್ವವಿರುತ್ತದೆ. ಆದರೆ ಅಂತಿಮವಾಗಿ ಈ ಸಂಘಗಳನ್ನು ನಿರ್ಧರಿಸುವವರು ಯಾರು ಎನ್ನುವುದು ಮುಖ್ಯ. ಲಿಂಗಾಧಾರಿತ ನೆಲೆಯಲ್ಲಿ ಪುರುಷನ ಪ್ರಾಬಲ್ಯವೇ ಇಲ್ಲಿ ಅಧಿಕ. ಸ್ತ್ರೀಯು ಹೆಸರಿಗೆ ಮಾತ್ರದ ಸದಸ್ಯತ್ವ. ಕಾರಣ ಭೂಮಿಯ ಹಕ್ಕು ಸ್ತ್ರೀಗೆ ಇಲ್ಲದಿರುವುದು, ಅಂತೆಯೇ ಪಿತ್ರಾರ್ಜಿತ ಆಸ್ತಿ ಹಕ್ಕು ಕೇವಲ ಕಾನೂನಿನಲ್ಲಿ ಮಾತ್ರ ಉಳಿಯುವಂತಾಗಿರುವುದು. ಇನ್ನು ಜಾತಿಯಾಧಾರಿತ ನೆಲೆಯಲ್ಲಿ ನೋಡಿದರೆ ಸಂಘಗಳನ್ನು ಈಗಲೂ ಮೇಲ್ವರ್ಗದ ಜಾತಿಗಳೇ ಬಹುಪಾಲು ನಿರ್ಧರಿಸುತ್ತಿದ್ದಾರೆ. ಪ.ಪಂ., ಪ.ಜಾ. ಇತರೆ ಹಿಂದುಳಿದ ವರ್ಗಗಳ ಪ್ರಾತಿನಿಧ್ಯವೂ ಇನ್ನು ಪ್ರಬಲತೆಯನ್ನು ಪಡೆದಿಲ್ಲ. ಹಾಗೆಯೇ

ಆರ್ಥಿಕ ಶ್ರೇಣೀಕರಣವೂ ಸಂಘಗಳನ್ನು ಪ್ರಭಾವಿಸುತ್ತದೆ. ದಲಿತರಲ್ಲಿ ಒಂದಷ್ಟು ಹೆಚ್ಚು ಭೂಮಿ ಹೊಂದಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವವನೇ ತನ್ನ ಸಮುದಾಯದ ನಾಯಕತ್ವ ವಹಿಸುತ್ತಾನೆ. ಅಂತೆಯೇ ಆ ಸಮುದಾಯದ ನಾಯಕನಂತೆ ಕಾಣುತ್ತಲೇ ಮೇಲ್ವರ್ಗದವರೊಂದಿಗೆ ರಾಜಿ ಮಾಡಿ ಕೊಳ್ಳುತ್ತಾನೆ. ಈ ಅಧ್ಯಯನದ ಸೂಕ್ಷ್ಮ ವಿವರಗಳನ್ನು ನೋಡಿದರೆ ಭಾರತದಲ್ಲಿ ಪ್ರಜಾಪ್ರಭುತ್ವ ಮಾದರಿ ಅತ್ಯಂತ ದುರ್ಬಲ ಸ್ಥಿತಿಯಲ್ಲಿರುವುದು ತಿಳಿಯುತ್ತದೆ. ಇನ್ನು ಅಧಿಕಾರ ವಿಕೇಂದ್ರೀಕರಣ ಎನ್ನುವುದು ಇನ್ನು ಜನಪರವಾಗದಿರುವುದು ತಿಳಿಯುತ್ತದೆ. ಇನ್ನು ಅಭಿವೃದ್ಧಿ ಎನ್ನುವ ಪದ ಕೇವಲ ನಗರ, ಕೈಗಾರಿಕೆ, ತಂತ್ರಜ್ಞಾನ ಎನ್ನುವ ಅರ್ಥ ಪಡೆಯುತ್ತದೆ. ಇದರ ಎಲ್ಲ ಬಗೆಯ ಪರಿಣಾಮಗಳನ್ನು ನೀರು ಬಳಕೆದಾರರ ಸಂಘಗಳ ಸಾಮಾಜಿಕ ಸಂರಚನೆಯ ಚರ್ಚೆಯಲ್ಲಿ ಕಾಣಬಹುದು.

॥

# ಅಧ್ಯಾಯ ಏಳು

## ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯನಿರ್ವಹಣೆ

೭.೧. ಅಧ್ಯಯನ ಕ್ಷೇತ್ರದ ಭೌತಿಕ ವಿವರಗಳು

೭.೨. ಸಂಘಗಳ ಸಂಘಟನೆಯ ಪೂರ್ವಭಾವಿ ಕಾರ್ಯಗಳು

೭.೩. ಸಂಘಗಳ ಸದಸ್ಯತ್ವ ಮತ್ತು ಆಡಳಿತ ವೈಖರಿ

೭.೪. ಸಂಘಗಳ ಆರ್ಥಿಕ ಸಂಪನ್ಮೂಲಗಳ ಸಂಚಯನ ಮತ್ತು ಸ್ವಾವಲಂಬನೆ

೭.೫. ಸಂಘಗಳ ಮೂಲ ಸೌಕರ್ಯಗಳು ಮತ್ತು ಸೇವೆಗಳು

೭.೬. ಸಂಘಗಳ ನೀರಾವರಿ ನಿರ್ವಹಣೆ

೭.೭. ಸರ್ಕಾರ ಮತ್ತು ಇತರೆ ಇಲಾಖೆಗಳೊಂದಿಗೆ ಸಂಘಗಳ ಸಂಬಂಧ

೭.೮. ಸಂಘಗಳ ಸುಸ್ಥಿರತೆ / ನಿರಂತರತೆ ಸವಾಲುಗಳು

೭.೯. ಸಂಘಗಳ ಉತ್ತರದಾಯಿತ್ವ ಮತ್ತು ಪಾರದರ್ಶಕತೆ

೭.೧೦. ಸಂಘಗಳ ಸಾಧನೆ ಮತ್ತು ವೈಫಲ್ಯಗಳು

## ಅಧ್ಯಾಯ ೭

# ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯ ನಿರ್ವಹಣೆ

### ಪ್ರಸ್ತಾವನೆ

ನೀರಿನ ಸಮಯೋಚಿತ ಬಳಕೆಗಾಗಿ ಹಲವು ಪ್ರಯತ್ನಗಳು ನಡೆಯುತ್ತಿವೆ. ಇತ್ತೀಚಿನವರೆಗೂ ಸರಕಾರದ ವಶದಲ್ಲಿದ್ದ ನೀರು ಮತ್ತು ಅದರ ನಿರ್ವಹಣೆಯೂ ಖಾಸಗಿಯತ್ತ ಮತ್ತು ಸಮುದಾಯಗಳತ್ತ ವಾಲುತ್ತಿದೆ. ಈಗಾಗಲೇ ಅದರ ನಿರ್ವಹಣೆಯನ್ನು ಸಹಕಾರ ಸಂಘಗಳಿಗೆ ವಹಿಸಿಕೊಡಲಾಗಿದೆ. ಸಹಕಾರ ಮತ್ತು ಸಮುದಾಯ ತತ್ವಗಳ ಹಿನ್ನೆಲೆಯಲ್ಲಿ ಪ್ರಜಾತಾಂತ್ರಿಕ, ಪ್ರಜಾಸತ್ತಾತ್ಮಕ ಪದ್ಧತಿಯ ಮೂಲಕ ನೀರನ್ನು ಬಳಸುವುದರಿಂದ, ಅದು ಎಲ್ಲರಿಗೂ ಅಗತ್ಯಕ್ಕೆ ಅನುಗುಣವಾಗಿ ದೊರೆಯಬಲ್ಲದು ಎನ್ನುವ ಹಿನ್ನೆಲೆಯಲ್ಲಿ ನೀರಿನ ನಿರ್ವಹಣೆಯನ್ನು ಬಳಕೆದಾರರ ಸಹಕಾರ ಸಂಘಗಳಿಗೆ ಬಿಟ್ಟುಕೊಡಲಾಗಿದೆ.

ಯಾವುದೇ ಸಂಸ್ಥೆ ಅಥವಾ ಸಂಘ ಅಸ್ತಿತ್ವದಲ್ಲಿ ಬಂದನಂತರ ಅದು ತನ್ನ ಉದ್ದೇಶಗಳನ್ನು ಈಡೇರಿಸಿಕೊಳ್ಳುವುದಕ್ಕೆ ಆದ್ಯ ಗಮನವನ್ನು ಕೊಡುತ್ತದೆ. ಇವತ್ತು ನೀರು ಬಳಕೆದಾರರ ಸಹಕಾರ ಸಂಘಗಳು ತಮ್ಮ ಸ್ಥಾಪನೆಯ ಉದ್ದೇಶಗಳನ್ನು ಈಡೇರಿಸಿಕೊಳ್ಳಬೇಕಾದರೆ, ಉತ್ತಮ ಸಾಧನೆಯನ್ನು ಮಾಡಬೇಕು. ಆ ಉತ್ತಮ ಸಾಧನೆಯು ಅವುಗಳ ಕಾರ್ಯನಿರ್ವಹಣೆಯನ್ನು ಅವಲಂಬಿಸಿರುತ್ತದೆ. ಸಂಘಗಳ ಉದ್ದೇಶ ಈಡೇರುವುದಕ್ಕೆ ಅವುಗಳ ಕಾರ್ಯನಿರ್ವಹಣೆ ಮತ್ತು ಅವುಗಳ ಸಾಧನೆಗಳ ನಡುವೆ ಪರಸ್ಪರ ಸಂಬಂಧವಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಕಾರ್ಯ ನಿರ್ವಹಣೆಯನ್ನು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

ಬಳಕೆದಾರರ ಸಹಕಾರ ಸಂಘಗಳ ಸಾಧನೆಯನ್ನು ಉತ್ತಮಪಡಿಸುವುದು ಅವುಗಳ ಕಾರ್ಯ ನಿರ್ವಹಣೆಯನ್ನು ಉತ್ತಮಪಡಿಸದೇ ಸಾಧ್ಯವಿಲ್ಲ. ಈ ಸಂಘಗಳ ಕಾರ್ಯನಿರ್ವಹಣೆಯನ್ನು ಅರಿತಾಗ ಮಾತ್ರ ಸಂಘಗಳು ಎದುರಿಸುತ್ತಿರುವ ಸಮಸ್ಯೆಗಳೇನು? ಅವುಗಳನ್ನು ಪರಿಹರಿಸಬಹುದಾದ ಬಗೆ ಹೇಗೆ? ಎಂಬಿತ್ಯಾದಿ ಸಂಗತಿಗಳನ್ನು ಅರಿಯಲು ಸಾಧ್ಯ. ಕಾರ್ಯನಿರ್ವಹಣೆಯಲ್ಲಿ ಸಾಧನೆ ಮತ್ತು ವೈಫಲ್ಯಗಳನ್ನು ಗುರುತಿಸಿದಾಗ ಮಾತ್ರ ಅವುಗಳ ನಿವಾರಣೆಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳಬಹುದು. ಆ ಮೂಲಕ ಸಂಘಗಳ ಕಾರ್ಯಸಾಧನೆಯನ್ನು ಉತ್ತಮಮಟ್ಟಕ್ಕೆ ತೆಗೆದುಕೊಂಡು ಹೋಗಿ, ಬಳಕೆದಾರರಿಗೆ ಅದರ ಫಲಗಳನ್ನು ನ್ಯಾಯಬದ್ಧವಾಗಿ ದೊರೆಯುವಂತೆ ಮಾಡಲು ಸಾಧ್ಯವಾಗುತ್ತದೆ. ಈ ಅಂಶಗಳ ಹಿನ್ನೆಲೆಯಲ್ಲಿ

ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಅಧ್ಯಯನ ಪ್ರಸ್ತುತ ಹಾಗೂ ಅಗತ್ಯವೆನಿಸುತ್ತದೆ.

ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯನಿರ್ವಹಣೆ ಕುರಿತಂತೆ ಎರಡು ವಿಭಿನ್ನ ಅಭಿಪ್ರಾಯಗಳಿವೆ. ಒಂದನೇ ಅಭಿಪ್ರಾಯದ ಪ್ರಕಾರ, ನೀರು ಬಳಕೆದಾರರ ಸಹಕಾರ ಸಂಘಗಳು ತಮ್ಮ ಸಂಘಗಳನ್ನು ನಿರ್ವಹಿಸುವಲ್ಲಿ ಮತ್ತು ತಮ್ಮ ಉದ್ದೇಶಗಳನ್ನು ಈಡೇರಿಸುವಲ್ಲಿ ಸಂಪೂರ್ಣವಾಗಿ ವಿಫಲಗೊಂಡಿವೆ. ಇವುಗಳ ಕಾರ್ಯವೈಖರಿಯ ವೈಫಲ್ಯದಿಂದಾಗಿ ನೀರಿನ ಸಮಯೋಚಿತ ಬಳಕೆಯಲ್ಲಿ ಸಹಕಾರ ಸಂಘಗಳು ಯಶಸ್ಸನ್ನು ಸಾಧಿಸಿಲ್ಲ. ಎರಡನೆಯ ವಾದದ ಪ್ರಕಾರ ನೀ.ಬ.ಸ.ಸಂಘಗಳು ಇತ್ತೀಚೆಗೆ ತಾನೆ ಸ್ವತಂತ್ರವಾಗಿ ಪ್ರಜಾಸತ್ತಾತ್ಮಕ ಚೌಕಟ್ಟಿನಲ್ಲಿ ಕಾರ್ಯಗಳನ್ನು ನಿರ್ವಹಿಸುತ್ತಿರುವುದರಿಂದ, ಅವುಗಳ ಕಾರ್ಯನಿರ್ವಹಣೆಯು ಅಷ್ಟೇನೂ ಕೆಳಹಂತದಲ್ಲಿಲ್ಲ ಎಂಬ ವಾದಗಳೂ ಸಹ ಇವೆ. ಆದರೆ ಸಹಕಾರ ಸಂಘಗಳು ತಮ್ಮ ಉದ್ದೇಶಗಳನ್ನು ಈಡೇರಿಸುವಲ್ಲಿ ಎಷ್ಟರಮಟ್ಟಿಗೆ ಯಶಸ್ಸನ್ನು ಕಂಡಿವೆ ಎಂಬುದನ್ನು ಅವುಗಳ ಕಾರ್ಯನಿರ್ವಹಣೆಯ ವಿವಿಧ ಮಗ್ಗಲುಗಳನ್ನು ಅರಿತಾಗ ಮಾತ್ರ ತಿಳಿಯಲು ಸಾಧ್ಯ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ನಾವು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಭದ್ರಾ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯಲ್ಲಿನ ಒಡಂಬಡಿಕೆ ಒಪ್ಪಂದವಾಗಿರುವ ೨೫ ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯನಿರ್ವಹಣೆಯನ್ನು ವಿಮರ್ಶಾತ್ಮಕವಾಗಿ ಪರಿಶೀಲನೆ ಮಾಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಈ ರೀತಿಯ ಅಧ್ಯಯನದಿಂದಾಗಿ ಆಯ್ಕೆ ಮಾಡಿಕೊಂಡ ಸಹಕಾರ ಸಂಘಗಳು ತಮ್ಮ ಮುಖ್ಯ ಉದ್ದೇಶಗಳನ್ನು ಈಡೇರಿಸುವಲ್ಲಿ ಎಷ್ಟರಮಟ್ಟಿಗೆ ಸಾಫಲ್ಯವನ್ನು ಸಾಧಿಸಿವೆ ಎಂಬುದನ್ನು ಅರಿಯಲು ಸಾಧ್ಯ. ಅಲ್ಲದೆ ಕಾರ್ಯನಿರ್ವಹಣೆಯಲ್ಲಿ ಕೆಲ ತೊಡಕುಗಳಿದ್ದರೆ ಅವುಗಳನ್ನು ಗುರುತಿಸಿ ನಿವಾರಣೆಗೆ ಯಾವ ಅಗತ್ಯ ಕ್ರಮಗಳನ್ನು ಕೈಗೊಳ್ಳಬಹುದು ಎಂಬುದರ ಬಗ್ಗೆ ಗಮನಹರಿಸಬಹುದು. ಈ ರೀತಿಯ ಅಧ್ಯಯನದಿಂದ ಸಂಘಗಳು ತಮ್ಮ ಉದ್ದೇಶಗಳನ್ನು ಸಾಧಿಸುವಲ್ಲಿ ಮತ್ತು ನಿರಂತರತೆಯನ್ನು ಕಾಯ್ದುಕೊಳ್ಳುವಲ್ಲಿ ನೆರವಾಗುವ ಸಾಧ್ಯತೆಯಿದೆ.

ಈ ಹಿಂದಿನ ಅಧ್ಯಾಯದಲ್ಲಿ ನೀರು ಬಳಕೆದಾರರ ಸಂಘಗಳ ಸದಸ್ಯರ ಸಾಮಾಜಿಕ ಸ್ಥಿತಿಗತಿಗಳನ್ನು ಅರಿಯಲು ಪ್ರಯತ್ನಿಸಿ, ಅವುಗಳು ಸಂಘಗಳ ಕಾರ್ಯನಿರ್ವಹಣೆಯ ಮೇಲೆ ಯಾವ ರೀತಿ ಪ್ರಭಾವ ಬೀರಬಲ್ಲವು ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಹಿಂದಿನ ಅಧ್ಯಾಯದ ಮುಂದುವರಿದ ಭಾಗವಾಗಿ, ಈ ಅಧ್ಯಾಯವನ್ನು ಪರಿಭಾವಿಸಿಕೊಂಡು ಸಂಘಗಳ ಕಾರ್ಯನಿರ್ವಹಣೆಯನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಾಯವು ಒಟ್ಟು ಹತ್ತು ಭಾಗಗಳಿಂದ ಕೂಡಿದೆ. ಮೊದಲ ಭಾಗದಲ್ಲಿ ಅಧ್ಯಯನ ಕ್ಷೇತ್ರದ ಭೌತಿಕ ವಿವರಗಳನ್ನು ಮತ್ತು ಎರಡನೇ ಭಾಗದಲ್ಲಿ ನೀ.ಬ.ಸ.ಸಂಘಗಳ ಪೂರ್ವಭಾವಿ ಕಾರ್ಯಗಳನ್ನು ಚರ್ಚಿಸಲಾಗಿದೆ. ನೀ.ಬ.ಸ.ಸಂಘಗಳ ಸದಸ್ಯತ್ವ ಮತ್ತು ಆಡಳಿತ ವೈಖರಿಯನ್ನು ಮೂರನೇಯ ಭಾಗದಲ್ಲಿ, ನಾಲ್ಕನೇ ಭಾಗದಲ್ಲಿ ಸಂಘಗಳ ಆರ್ಥಿಕ ಸಂಪನ್ಮೂಲಗಳ ಸಂಚಯನ ಮತ್ತು ಸ್ವಾವಲಂಬನೆಯನ್ನು ವಿವರಿಸಲಾಗಿದೆ. ಸಂಘಗಳ ಮೂಲಭೂತ ಸೌಕರ್ಯಗಳು ಮತ್ತು ಸೇವೆಗಳನ್ನು ಐದನೇ ಭಾಗದಲ್ಲಿ ವಿವರಿಸಲಾಗಿದೆ. ಸಂಘಗಳ ನೀರಾವರಿ ನಿರ್ವಹಣೆಯನ್ನು ಆರನೇ ಭಾಗದಲ್ಲಿ, ಏಳನೇ ಭಾಗದಲ್ಲಿ ಸರಕಾರ ಮತ್ತು ಇತರೆ ಇಲಾಖೆಗಳೊಂದಿಗೆ ಸಂಘಗಳ ಸಂಬಂಧವನ್ನು ಚರ್ಚಿಸಲಾಗಿದೆ. ಎಂಟನೇ ಭಾಗದಲ್ಲಿ ಸಂಘಗಳ ಸುಸ್ಥಿರತೆ ಮತ್ತು ನಿರಂತರತೆಯ ಸವಾಲುಗಳನ್ನು, ಒಂಬತ್ತನೇ ಭಾಗದಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಉತ್ತರದಾಯಿತ್ವ ಮತ್ತು ಪಾರದರ್ಶಕತೆಯ್ನು ವಿವರಿಸಲಾಗಿದೆ. ಕೊನೆಯ ಭಾಗದಲ್ಲಿ ಒಟ್ಟಾರೆ ಸಂಘಗಳ ಸಾಧನೆ ಮತ್ತು ವೈಫಲ್ಯಗಳನ್ನು ವಿಶ್ಲೇಷಿಸಲಾಗಿದೆ.

### ೭.೧. ಅಧ್ಯಯನ ಕ್ಷೇತ್ರದ ಭೌತಿಕ ವಿವರಗಳು

ಅಧ್ಯಯನಕ್ಕೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ಮತ್ತು ಶಿವಮೊಗ್ಗ ತಾಲ್ಲೂಕುಗಳ ಒಡಂಬಡಿಕೆ ಒಪ್ಪಂದವಾಗಿರುವ ೨೫ ನೀ.ಬ.ಸ. ಸಂಘಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಭದ್ರಾ ಜಲಾಶಯದ ಬಲದಂಡೆ ನಾಲೆಯ ವ್ಯಾಪ್ತಿಯಲ್ಲಿ ೧೧, ಎಡದಂಡೆ ನಾಲೆಯ ೯, ನೀ.ಬ.ಸಂಘಗಳನ್ನು ಮತ್ತು ತುಂಗಾ ಜಲಾಶಯದ ಬಲದಂಡೆ ನಾಲೆಯ ವ್ಯಾಪ್ತಿಯಲ್ಲಿ ೨, ಎಡದಂಡೆ ನಾಲೆಗಳ ವ್ಯಾಪ್ತಿಯ ೩, ನೀ. ಬ.ಸಂಘಗಳನ್ನು ಒಡಂಬಡಿಕೆ ಒಪ್ಪಂದವಾಗಿರುವ ಸಂಘಗಳ ಪ್ರಮಾಣಕ್ಕೆ ಅನುಗುಣವಾಗಿ ಆರಿಸಿಕೊಳ್ಳಲಾಗಿದೆ.

ಪ್ರತಿಯೊಂದು ನೀ.ಬ.ಸ.ಸಂಘದ ವ್ಯಾಪ್ತಿಯಲ್ಲಿ ಕಾಲುವೆಯ ಮೇಲ್ತುದಿ, ಮಧ್ಯಭಾಗ ಮತ್ತು ಕೆಳತುದಿ ಸಾಮಾನ್ಯವಾಗಿ ಇದ್ದೇ ಇರುತ್ತದೆ. ವಿತರಣೆ ನಾಲೆಗಳು ಜಲಾಶಯದ ಹತ್ತಿರವಿದ್ದರೆ ಅವುಗಳಿಗೆ ಅಧಿಕ ನೀರು ದೊರೆಯುತ್ತದೆ. ದೂರ ಸಾಗಿದ್ದಂತೆ ನೀರು ತಲುಪುವ ವೇಳೆ ಅಧಿಕವಾಗಿ ನೀರಿನ ಪ್ರಮಾಣ ಕಡಿಮೆಯಾಗುತ್ತದೆ. ಹೀಗಾಗಿ ವಿತರಣೆ ನಾಲೆಗಳಿಗೆ ಅನುಗುಣವಾಗಿ ಪ್ರದೇಶವಾರು ಮೇಲ್ತುದಿ, ಮಧ್ಯಭಾಗ ಮತ್ತು ಕೆಳತುದಿ ಎಂದು ನೀ.ಬ.ಸಂಘಗಳನ್ನು ವರ್ಗೀಕರಿಸಲಾಗಿದೆ. ಈ ಸಂಘಗಳ ಸಂಖ್ಯೆಯು ಕ್ರಮವಾಗಿ ೬, ೮ ಮತ್ತು ೧೧ ಸಂಘಗಳನ್ನು ವಿವಿಧ ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಕಾಲುವೆಯ ಮೇಲ್ತುದಿಯಲ್ಲಿ ಕಡಿಮೆ ಸಂಘಗಳನ್ನು ಅನಂತರ ಭಾಗಗಳಲ್ಲಿ ಹೆಚ್ಚಿನ ಸಂಘಗಳನ್ನು ಆಯ್ದುಕೊಳ್ಳಲಾಗಿದೆ.

## ಅಧ್ಯಯನ ಕ್ಷೇತ್ರದ ಭೌತಿಕ ಸಂಗತಿಗಳ ವಿವರ

**ಕೋಷ್ಟಕ ೭.೧**

| ಕ್ರ.ಸಂ. | ವಿವರ | ಒಟ್ಟು | ಗರಿಷ್ಠ | ಕನಿಷ್ಠ | ಸರಾಸರಿ |
|---|---|---|---|---|---|
| ೧. | ಅಧ್ಯಯನ ಕ್ಷೇತ್ರ ಒಟ್ಟು ನೀರಾವರಿ ಕ್ಷೇತ್ರ (ಹೆಕ್ಟೇರ್‌ಗಳಲ್ಲಿ) | ೧೧೨೦೭ | ೬೪೦ | ೨೨೯ | ೪೪೦ |
| ೨. | ೨೫ ನೀ.ಬ.ಸ.ಸಂಘಗಳಿಗೆ ಪೂರೈಕೆ ಯಾಗುವ ನೀರಿನ ಪ್ರಮಾಣ (ಕ್ಯೂಸೆಕ್ಸ್) | ೬೦೭.೬೮ | ೩೯.೭೮ | ೧೨.೨೫ | ೨೨.೦೦ |
| ೩. | ನೀ.ಬ.ಸ.ಸಂಘಗಳ ಆರಂಭದ ಸದಸ್ಯರ ಸಂಖ್ಯೆ | ೨೭೪೪ | ೩೮೦ | ೨೦ | ೧೨೦ |
| ೪. | ನೀ.ಬ.ಸ.ಸಂಘಗಳ ಪ್ರಸ್ತುತ ಸದಸ್ಯರ ಸಂಖ್ಯೆ (೩೧.೦೩.೨೦೦೭ರವರೆಗೆ) | ೬೬೭೨ | ೫೮೦ | ೧೫೦ | ೨೭೫ |

**ಮೂಲ : ನೀ.ಬ.ಸ.ಸಂಘಗಳ ವಿವಿಧ ದಾಖಲೆ ಪತ್ರಗಳು**

ಕೋಷ್ಟಕ ೭.೧ ರಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಒಟ್ಟು ಪ್ರದೇಶ, ನೀರಿನ ಹರಿವಿನ ಪ್ರಮಾಣವನ್ನು ಗರಿಷ್ಠ, ಕನಿಷ್ಠ ಮತ್ತು ಸರಾಸರಿ ಪ್ರಮಾಣವನ್ನು ಸೂಚಿಸಲಾಗಿದೆ. ೨೦೦೦-೦೧ನೇ ಸಾಲಿನಿಂದ ನೀ.ಬ.ಸ.ಸಂಘಗಳಲ್ಲಿನ ಸದಸ್ಯತ್ವ ಪ್ರಮಾಣ, ೨೦೦೬-೦೭ ರಲ್ಲಿ ಸದಸ್ಯರ ಪ್ರಮಾಣವನ್ನು ತೌಲನಿಕವಾಗಿ ನೀಡಲಾಗಿದೆ. ಸದಸ್ಯತ್ವರಲ್ಲಿ ಶೇ. ೪೧ ರಷ್ಟು ಹೆಚ್ಚಳವಾಗಿರುವುದು ಕಂಡುಬರುತ್ತದೆ. ಅಂದರೆ ಸದಸ್ಯತ್ವ ಪಡೆಯುವುದರಲ್ಲಿ ಕೆಲವು ಸಂಘಗಳು ಶೇ. ೧೦೦ ರಷ್ಟು ಸಾಧನೆ ಮಾಡಿದ್ದರೆ ಮತ್ತೆ ಕೆಲವು ಶೇ. ೫೫ಕ್ಕಿಂತ ಕಡಿಮೆ ಮಾಡಿರುವುದು ತಿಳಿದುಬರುತ್ತದೆ. ಒಟ್ಟಾರೆಯಾಗಿ ಸದಸ್ಯತ್ವದಲ್ಲಿ ಆಶಾದಾಯಕ ಬೆಳವಣಿಗೆ ಕಂಡುಬಂದಿದೆ.

### ೭.೨. ಸಂಘಗಳ ಸಂಘಟನೆಯ ಪೂರ್ವಭಾವಿ ಕಾರ್ಯಗಳು

ನೀ.ಬ.ಸ.ಸಂಘಗಳ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ೧೯೫೯ ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ ೧೯೬೦ ರಂತೆ ನೋಂದಣಿ ಮಾಡಿಕೊಂಡು ತಮ್ಮ ಅಸ್ತಿತ್ವವನ್ನು ಪಡೆದುಕೊಳ್ಳುತ್ತವೆ. ಕೇವಲ ಸಂಘಗಳ ನೊಂದಣಿಯಿಂದ ನೀ.ಬ.ಸ.ಸಂಘಗಳಿಗೆ ಅಧಿಕಾರ ಪ್ರಾಪ್ತವಾಗುವುದಿಲ್ಲ. ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದವಾದ ನಂತರ ಸಂಘಗಳಿಗೆ ಅಧಿಕಾರ ಹಸ್ತಾಂತರವಾಗುತ್ತದೆ. ಒಡಂಬಡಿಕೆ ಒಪ್ಪಂದವಾಗಬೇಕಾದರೆ ಸಂಘಗಳು ಕೆಲವು ಷರತ್ತುಗಳನ್ನು ಪೂರೈಸಬೇಕಾಗುತ್ತದೆ. ಮುಖ್ಯವಾಗಿ ನೀ.ಬ.ಸ.ಸಂಘದ ವ್ಯಾಪ್ತಿಯ ಶೇ. ೬೧ ರಷ್ಟು ರೈತರು ಸಂಘದ ಸದಸ್ಯತ್ವ ಪಡೆದಿರಬೇಕು ಅಥವಾ ಸಂಘದ ವ್ಯಾಪ್ತಿಯ ಶೇ. ೫೧ ರಷ್ಟು ಸಾಗುವಳಿ ಭೂಮಿ ಸಂಘದ ವ್ಯಾಪ್ತಿಗೆ ಬಂದಿರಬೇಕು. ಈ ಷರತ್ತು ಪೂರೈಕೆಯಾದ ಸಂಘ ಒಡಂಬಡಿಕೆ ಒಪ್ಪಂದಕ್ಕೆ ಅರ್ಹವಾಗುತ್ತದೆ.

ಓೀಗೆ ಒಡಂಬಡಿಕೆ ಒಪ್ಪಂದವಾಗುವ ಪೂರ್ವದಲ್ಲಿ ಕಾಡಾ ಅಧಿಕಾರಿಗಳು, ಜಲಸಂಪನ್ಮೂಲ ಇಲಾಖೆ ಹಾಗೂ ಸಂಘಗಳ ಸಹಯೋಗದಲ್ಲಿ ಸಂಘದ ವ್ಯಾಪ್ತಿಯ ಅಚ್ಚುಕಟ್ಟು ಪ್ರದೇಶ ಮತ್ತು ಸದಸ್ಯತ್ವ ಬಗ್ಗೆ ಜಂಟಿ ತಪಾಸಣೆ ನಡೆಯುತ್ತದೆ. ಸಂಘದಿಂದ ಮೇಲಿನ ಷರತ್ತುಗಳು ಪೂರೈಕೆಯಾದ ನಂತರ ಸಂಘದ ವ್ಯಾಪ್ತಿಯಲ್ಲಿನ ನೀರಾವರಿ ಕಾಲುವೆಗಳ ತೂಬುಗಳ ಸುಸ್ಥಿರತೆಯನ್ನು ಪರಿಶೀಲಿಸಲಾಗುತ್ತದೆ. ಆನಂತರ ಅಗತ್ಯವಾದ ದುರಸ್ಥಿಯನ್ನು ಮಾಡಿ ಒಡಂಬಡಿಕೆ ಒಪ್ಪಂದ ಮಾಡಿಕೊಳ್ಳಬೇಕು ಎಂಬ ಷರತ್ತು ಜಲಸಂಪನ್ಮೂಲ ಇಲಾಖೆಗೆ ಇದೆ. ಆದರೆ ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿ ಜಲಸಂಪನ್ಮೂಲ ಇಲಾಖೆ ಇಂತಹ ಷರತ್ತು ಪೂರೈಸದೇ ನೀ.ಬ.ಸ.ಸಂಘಗಳಿಗೆ ಅಧಿಕಾರ ಹಸ್ತಾಂತರ ಮಾಡುತ್ತಿದೆ. ಸರಕಾರದಿಂದ ಹಣಕಾಸು ಲಭ್ಯವಾಗದ ಕಾರಣ ಸದ್ಯಕ್ಕೆ ಅಧಿಕಾರ ಹಸ್ತಾಂತರ ನಡೆಯಲಿ ಎಂದು, ಸರಕಾರ ಹಣ ಒದಗಿಸಿದಾಗ ದುರಸ್ಥಿ ಮಾಡಿಕೊಡಲಾಗುವುದು ಭರವಸೆ ನೀಡಲಾಗಿದೆ. ಇದರಿಂದ ಒಡಂಬಡಿಕೆ ಒಪ್ಪಂದಕ್ಕೆ ಯಾವುದೇ ಅರ್ಥ ಮಹತ್ವ ಕಂಡುಬಂದಿಲ್ಲ. ಸಂಘಗಳ ಷರತ್ತುಗಳಿಗೆ ಬದ್ಧವಾಗಿರುವುದನ್ನು ಮಾತ್ರ ಖಾತ್ರಿಪಡಿಸಿಕೊಳ್ಳಲಾಗಿದೆ ಹೊರತು ಜಲಸಂಪನ್ಮೂಲ ಇಲಾಖೆ ತನ್ನ ಷರತ್ತು ಪೂರೈಸುವಲ್ಲಿ ಯಾವುದೇ ಬದ್ಧತೆಯನ್ನು ತೋರಿಸಿಲ್ಲ. ಇದರಿಂದ ಯಾವುದೇ ಭೌತಿಕ ವ್ಯವಸ್ಥೆಯ ಸುಧಾರಣೆಯಿಲ್ಲದೆ ರೈತರು ನೀ.ಬ.ಸ. ಸಂಘಗಳ ಸದಸ್ಯತ್ವ ಪಡೆಯಲು ಇಚ್ಛೆಪಡುತ್ತಿಲ್ಲ.

ಇದು ನೀ.ಬ.ಸ. ಸಂಘಗಳ ಪ್ರಾಥಮಿಕ ಕಾರ್ಯಗಳಿಗೆ ದೊಡ್ಡ ತೊಡಕಾಗಿ ಪರಿಣಮಿಸಿದೆ. ಸಂಪೂರ್ಣವಾಗಿ ಶಿಥಿಲವಾಗಿರುವ ನೀರಾವರಿ ಜಾಲವನ್ನು ಸುಸ್ಥಿತಿಗೆ ತರದೇ ರೈತರ ಮನೋಭಾವವನ್ನು, ಆಸಕ್ತಿಯನ್ನು, ಅಸಡ್ಡೆಯನ್ನು ಪರಿವರ್ತಿಸಲು ಸಾಧ್ಯವಿಲ್ಲ. ಕೆಳತುದಿ ಮತ್ತು ಮೇಲ್ತುದಿ ರೈತರ ನಡುವೆ ನ್ಯಾಯಸಮ್ಮತವಾಗಿ ನೀರು ಸರಬರಾಜಾಗದೇ, ನೀರಿನ ಕೊರತೆ ನಿವಾರಣೆಯಾಗದೆ ಸಂಘದ ಸದಸ್ಯತ್ವ ಏಕೆ ಪಡೆಯಬೇಕು ಎನ್ನುವ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಆದುದರಿಂದ ಆರಂಭದಲ್ಲಿಯೇ ನೀ.ಬ.ಸ.ಸಂಘಗಳ ಏಳಿಗೆಗೆ ಸೂಕ್ತವಾದ ವಾತಾವರಣ ನಿರ್ಮಾಣವಾಗದೇ ಇರುವುದನ್ನು ನಾವು ಗಮನಿಸಬಹುದು. ಪರಿಣಾಮವಾಗಿ ಆನಂತರ ನಡೆಯಬೇಕಾಗಿದ್ದ ಪ್ರಗತಿದಾಯಕ ಚಟುವಟಿಕೆಗಳಿಗೆ ಉತ್ತೇಜನ ದೊರಯದೇ ಬಹುತೇಕ ಸಂಘಗಳು ಹಿಂದಿನಂತೆ ಜಡವಾಗಿರುವುದು ಕಂಡುಬರುತ್ತದೆ.

### ೭.೩. ಸಂಘಗಳ ಸದಸ್ಯತ್ವ ಮತ್ತು ಆಡಳಿತ ವೈಖರಿ

ಯಾವುದೇ ಒಂದು ಸಂಘ-ಸಂಸ್ಥೆ ಉತ್ತಮವಾಗಿ ಕಾರ್ಯನಿರ್ವಹಿಸಬೇಕಾದರೆ ಆ ಸಂಸ್ಥೆಯ ಎಲ್ಲ ಬಳಕೆದಾರರು ಸದಸ್ಯತ್ವ ಹೊಂದಿರಬೇಕು. ಏಕೆಂದರೆ ಸಾಮೂಹಿಕ ಪ್ರಯತ್ನಗಳಿಂದ ಉದ್ದೇಶಿತ ಗುರಿಗಳನ್ನು ತಲುಪಲು ಹೆಚ್ಚು ಸಾಧ್ಯ. ಕೆಲವೇ ಮಂದಿ ಸದಸ್ಯತ್ವ ಪಡೆದು, ಉಳಿದವರು ಸದಸ್ಯತ್ವ ಪಡೆಯದೇ ಸಂಘಟನೆಯಿಂದ ದೂರ ಉಳಿದರೆ ಅದು ನಿರೀಕ್ಷಿತ ಗುರಿ ತಲುಪಲು ಸಾಧ್ಯವಿಲ್ಲ. ಅದರಲ್ಲೂ ಮುಖ್ಯವಾಗಿ ನಿಸರ್ಗದತ್ತ ಸಂಪನ್ಮೂಲವಾದ ನೀರಿನ ನಿರ್ವಹಣೆಯ ಭಾಗಶಃ ಬಳಕೆದಾರರ

ಪಾಲ್ಗೊಳ್ಳುವಿಕೆಯಿಂದ ಹೆಚ್ಚು ಫಲಪ್ರದವಾಗಲಾರದು. ಸಮುದಾಯದ ಸಾಮಾನ್ಯ ಸ್ವತ್ತಿನ ನಿರ್ವಹಣೆಯಲ್ಲಿ ಐಚ್ಛಿಕ ಸದಸ್ಯತ್ವ ಅಕ್ರಮ ಚಟುವಟಿಕೆಗಳಿಗೆ ದಾರಿಯಾಗುತ್ತದೆ. ಕರ್ನಾಟಕದ ನೀ.ಬ.ಸ.ಸಂಘಗಳನ್ನು ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆಯ ಅನ್ವಯ ಸ್ಥಾಪನೆ ಮಾಡುತ್ತಿರುವುದರಿಂದ ಸದಸ್ಯತ್ವವನ್ನು ಕಡ್ಡಾಯಗೊಳಿಸಲು ಸಾಧ್ಯವಿಲ್ಲ. ಸಹಕಾರ ತತ್ವದಲ್ಲಿ ಫಲಾನುಭವಿಯನ್ನು ಒತ್ತಾಯದಿಂದ ಸದಸ್ಯನನ್ನಾಗಿ ಮಾಡುವುದರಿಂದ ಹೆಚ್ಚಿನ ಲಾಭವಾಗಲಾರದು ಎನ್ನುವ ದೃಷ್ಟಿಯನ್ನು ಹೊಂದಲಾಗಿದೆ. ಸಮಾನ ಉದ್ದೇಶಗಳ ಸಾಧನೆಗಾಗಿ ಸಂಬಂಧಿಸಿದ ಎಲ್ಲರೂ ಒಗ್ಗೂಡಿದರೆ ಮಾತ್ರ ಅದು ಯಶಸ್ವಿಯಾಗುತ್ತದೆ. ಪುಕ್ಕಟೆಯಾಗಿ ದೊರೆಯುವ ನೀರಿನ ನಿರ್ವಹಣೆಯನ್ನು ಕೆಲವರಿಗೆ ವಹಿಸುವುದರಿಂದ ಸಫಲತೆಗಿಂತ ವಿಫಲತೆ ಹೆಚ್ಚು. ಇದರ ಸತ್ಯತೆ ಸದ್ಯದ ನೀ.ಬ.ಸ.ಸಂಘಗಳ ಕಾರ್ಯನಿರ್ವಹಣೆಯಿಂದ ತಿಳಿಯುತ್ತದೆ.

ನೀ.ಬ.ಸ.ಸಂಘಗಳ ಸದಸ್ಯತ್ವ ಹೊಂದದೇ ಇದ್ದರೂ ಅಂತಹ ಬಳಕೆದಾರನಿಗೆ ಯಾವುದೇ ಅನಾನುಕೂಲತೆ ಅಥವಾ ನಷ್ಟವಿಲ್ಲದ ಕಾರಣ ತಾನು ನಿರಂತರವಾಗಿ ಸದಸ್ಯೇತರನಾಗಿಯೇ ಉಳಿಯುತ್ತಾನೆ. ಇಂತಹ ಸಂದರ್ಭದಲ್ಲಿ ಸಂಘವು ತನ್ನ ಸ್ವಾಯತ್ತತೆಯನ್ನು ಕಳೆದುಕೊಳ್ಳುತ್ತದೆ. ಕ್ರಮೇಣ ಉಳಿದವರೂ ಹಿಂದೆ ಸರಿಯುವುದರಿಂದ ಸಂಘಗಳು ಅವನತಿಯ ಹಾದಿ ಹಿಡಿಯುತ್ತವೆ. ಹೀಗಾಗಿ ಪ್ರಾಕೃತಿಕ ಸಂಪತ್ತಿನ ನಿರ್ವಹಣೆ ಮತ್ತು ಸಂರಕ್ಷಣೆಯಲ್ಲಿ ಸಂಬಂಧಿಸಿದ ಎಲ್ಲ ಫಲಾನುಭವಿಗಳು ಸಮಾನ ಪಾತ್ರ ವಹಿಸಲು ಸಾಧ್ಯವಿರುವ ಕಾಯ್ದೆಯನ್ನು ರಚಿಸಿ ಸದಸ್ಯತ್ವವನ್ನು ಕಡ್ಡಾಯಗೊಳಿಸಿದರೆ ಹೆಚ್ಚಿನ ಯಶಸ್ಸು ಸರಕಾರದ ನಿಯಮ ಪಾಲನೆಗೆ ಕಡ್ಡಾಯವೇ ಒಂದು ಅಸ್ತ್ರವಾಗಿದ್ದರೆ ಉತ್ತಮ. ಸದಸ್ಯೇತರ ಮನವೊಲಿಸುವ ಪ್ರಕ್ರಿಯೆ ಗ್ರಾಮೀಣ ಪ್ರದೇಶದಲ್ಲಿ ಅಷ್ಟಾಗಿ ಯಶಸ್ಸು ಕಾಣುವುದಿಲ್ಲ. ಜೊತೆಗೆ ಈ ಮನವೊಲಿಕೆ ಕಾರ್ಯಕ್ಕೆ ಸರಕಾರೇತರ ಸಂಸ್ಥೆಗಳನ್ನು ಬಳಕೆ ಮಾಡಿಕೊಳ್ಳುವ ಪರಿಸ್ಥಿತಿ ಉದ್ಭವಿಸುತ್ತದೆ. ಅಲ್ಪಾವಧಿಯಲ್ಲಿ ಇದು ಸಾಧ್ಯವಾಗುವುದಿಲ್ಲ. ದೀರ್ಘಾವಧಿಯತನಕ ಕಾಯುವುದರಿಂದ ಅಮೂಲ್ಯವಾದ ನೈಸರ್ಗಿಕ ಸಂಪತ್ತಿನ ಅಪಬಳಕೆಗೆ ದಾರಿಮಾಡಿಕೊಡುತ್ತದೆ.

ಪ್ರಸ್ತುತ ಭದ್ರಾ ಅಚ್ಚುಕಟ್ಟು ಪ್ರದೇಶದ ನೀ.ಬ.ಸ.ಸಂಘಗಳ ಸ್ಥಾಪನೆಗೆ ಆ ಸಂಘಗಳ ಪದಾಧಿಕಾರಿಗಳು ವೈಯಕ್ತಿಕವಾಗಿ ಆಸಕ್ತಿ ವಹಿಸಿ ಅನೇಕ ರೈತರ ಮನವೊಲಿಸಿ ಸದಸ್ಯತ್ವ ಮಾಡಿದ್ದಾರೆ. ಎಷ್ಟೋ ರೈತರಿಗೆ ಇಚ್ಛೆಯಿಲ್ಲದಿದ್ದರೂ ಪದಾಧಿಕಾರಿಗಳಿಗೆ ತಮ್ಮ ಸ್ವಂತ ಹಣದಿಂದ ಇತರರ ಷೇರುಧನ ನೀಡಿ ಸದಸ್ಯತ್ವ ಮಾಡಿಸಿರುವುದು ಒಂದು ಸಾಮಾನ್ಯ ಸಂಗತಿಯಾಗಿದೆ. ಸರಕಾರದ ಕಡ್ಡಾಯ ನಿಯಮವಿಲ್ಲದಿದ್ದಾಗ ಸದಸ್ಯತ್ವ ಏಕೆ ಪಡೆದುಕೊಳ್ಳಬೇಕು ಎನ್ನುವ ಉದಾಸೀನ ಬಹುಸಂಖ್ಯಾತರಲ್ಲಿದೆ. ಸದಸ್ಯತ್ವ ಪಡೆದರೂ, ಪಡೆಯದೇ ಇದ್ದರೂ ಯಾವುದೇ ಲಾಭ ಅಥವಾ ನಷ್ಟವಿಲ್ಲ ಎನ್ನುವ ತಿರಸ್ಕಾರ ಹೆಚ್ಚಿನ ರೈತರಿಂದ ವ್ಯಕ್ತವಾಗಿದೆ. ಈ ಎಲ್ಲಾ ಕಾರಣಗಳಿಗಾಗಿ ಸದಸ್ಯತ್ವವನ್ನು ಕಡ್ಡಾಯಗೊಳಿಸಬೇಕಾಗಿದೆ.

ಈಗಾಗಲೇ ಒಡಂಬಡಿಕೆ ಒಪ್ಪಂದ ಮಾಡಿಕೊಂಡಿರುವ ನೀ.ಬ.ಸ.ಸಂಘಗಳಿಗೆ ಕಾಪಾ ಇಡುಗಂಟಿನಲ್ಲಿ ಕಾಲುವೆಯ ಜಾಲ, ಅಚ್ಚುಕಟ್ಟಿನಲ್ಲಿ ಹಾಸಿಗೆ ಒಳಗಾಗಿರುವ ಎಲ್ಲ ವ್ಯವಸ್ಥೆಯನ್ನು ಸುಸ್ಥಿತಿಗೆ ತಂದು, ನಂತರ ಅಧಿಕಾರ ಹಸ್ತಾಂತರ ಮಾಡಬೇಕೆಂಬ ಷರತ್ತು ಇದೆ. ಆದರೆ ಸರಕಾರದಿಂದ ದುರಸ್ತಿಗೆ ಅಗತ್ಯವಾದ ಹಣ ಬಂದಿಲ್ಲವೆಂಬ ಕಾರಣ ನೀಡಿ ಷರತ್ತನ್ನು ಪಾಲಿಸಿದ ದುಸ್ಥಿತಿಯಲ್ಲಿಯೇ ಅಧಿಕಾರ ವರ್ಗಾವಣೆ ಮಾಡಿರುವುದು ಬಳಕೆದಾರರ ಸದಸ್ಯತ್ವ ಪಡೆಯದೇ ಇರಲು ಕಾರಣ. ಅಂದಿನ ಸ್ಥಿತಿಯೇ ಮುಂದುವರಿಯುವುದಾದರೆ ಸದಸ್ಯತ್ವ ಏಕೆ ಪಡೆಯಬೇಕೆಂಬ ಪ್ರಶ್ನೆ ಎಲ್ಲ ರೈತರದ್ದಾಗಿದೆ. ಶೇಕಡಾ ೯೦ ರಷ್ಟು ರೈತರಲ್ಲಿ ಸರಕಾರ ಕಾಟಾಚಾರಕ್ಕಾಗಿ ಸಂಘಗಳನ್ನು ಸ್ಥಾಪಿಸಿ, ತನ್ನ ಕೈಯಲ್ಲಿ ಸಾಧ್ಯವಾಗದ ಕಠಿಣ ಜವಾಬ್ದಾರಿಗಳನ್ನು ಸಂಘಗಳಿಗೆ ಹೊರೆಸುತ್ತಿದೆ ಎನ್ನುವ ಅಭಿಪ್ರಾಯವಿದೆ.

ನೀ.ಬ.ಸ.ಸಂಘಗಳಲ್ಲಿ ಸದಸ್ಯತ್ವ ಪಡೆಯುವಲ್ಲಿನ ಮತ್ತೊಂದು ತೊಡಕೆಂದರೆ ಈ ಸಂಘಗಳು ಈ ಹಿಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಿದಂತೆ ಪ್ರಧಾನ ಜಾತಿಗಳ, ವರ್ಗಗಳ ಹಿಡಿತದಲ್ಲಿರುವುದು. ಪ್ರಧಾನ ಜಾತಿ/ವರ್ಗಗಳ ನಿಯಂತ್ರಣದಲ್ಲಿ ಸಂಘಗಳು ಕಾರ್ಯನಿರ್ವಹಿಸುವುದರಿಂದ ಮೊದಲ ಆದ್ಯತೆಗಳು ಆ ವರ್ಗಗಳಿಗೆ ಲಭಿಸುತ್ತವೆ. ಉಳಿದ ಕೆಳವರ್ಗದ/ಕೆಳಜಾತಿಗಳ ಸ್ಪಂದನೆ ಹೆಚ್ಚಾಗಿರುವುದಿಲ್ಲ. ಅವರಿಗೆ ಅವಕಾಶಗಳೇ ಇಲ್ಲದಿರುವಾಗ ಸದಸ್ಯತ್ವ ಪಡೆಯುವ ಇಚ್ಛೆ ವ್ಯಕ್ತಪಡಿಸುವುದಿಲ್ಲ. ಇದರಿಂದ ಸರ್ವ ಸಹಭಾಗಿತ್ವ ಸಾಧ್ಯವಾಗುವುದಿಲ್ಲ. ಅಧ್ಯಯನ ಕ್ಷೇತ್ರದ ನೀ.ಬ.ಸ.ಸಂಘಗಳಲ್ಲಿ ಸದಸ್ಯರ ಜಾತಿವಾರು ಸದಸ್ಯತ್ವ ಪ್ರಮಾಣವನ್ನು ಕೋಷ್ಟಕ ೭.೨ ರಲ್ಲಿ ನೀಡಲಾಗಿದೆ.

### ನೀ.ಬ.ಸ. ಸಂಘಗಳ ಸದಸ್ಯರ ಜಾತಿವಾರು ಸದಸ್ಯತ್ವದ ಪ್ರಮಾಣ

**ಕೋಷ್ಟಕ ೭.೨**

| ಕ್ರ.ಸಂ. | ಜಾತಿಗಳ ವಿವರ | ಭೂಮಾಲೀಕರ ಸಂಖ್ಯೆ | ಸದಸ್ಯತ್ವ ಪಡೆದವರ ಪ್ರಮಾಣ | ಸದಸ್ಯೇತರರ ನಡುವಿನ ಅಂತರ |
|---|---|---|---|---|
| ೧. | ಸಾಮಾನ್ಯ | ೫೬೯೫ (೫೯.೭೫) | ೩೯೭೪ (೫೯.೫೬) | ೧೭೨೧ (೪೩.೩೦) |
| ೨. | ಹಿಂದುಳಿದ | ೨೦೭೩ (೨೧.೭೫) | ೧೬೦೧ (೨೪.೦೦) | ೪೭೨ (೨೯.೪೮) |
| ೩. | ಪರಿಶಿಷ್ಟ ಜಾತಿ | ೭೬೨ (೮.೦೦) | ೫೪೪ (೮.೧೫) | ೨೧೮ (೪೦.೦೭) |
| ೪. | ಪರಿಶಿಷ್ಟ ಪಂಗಡ | ೫೭೨ (೬.೦೦) | ೨೮೪ (೪.೨೬) | ೨೮೮ (೫೦.೩೪) |
| ೫. | ಮಹಿಳೆ | ೫೮ (೦.೫೬) | ೩೧ (೦.೪೬) | ೨೭ (೪೬.೫೫) |
| ೬. | ಅಲ್ಪಸಂಖ್ಯಾತ | ೩೭೧ (೩.೬೪) | ೨೩೮ (೩.೫೬) | ೧೩೩ (೩೫.೮೫) |
| ೭. | ಒಟ್ಟು | ೯೫೩೧ (೧೦೦.೦೦) | ೬೬೭೨ (೧೦೦.೦೦) | ೨೮೫೯ (೧೦೦.೦೦) |

ಮೂಲ : ನೀ.ಬ.ಸ.ಸಂಘಗಳ ವಿವಿಧ ದಾಖಲೆ ಪತ್ರಗಳು ಮತ್ತು ಸದಸ್ಯರ ಜಾತಿವಾರು ಪಟ್ಟಿಗಳ ಅಂದಾಜು

ಕೋಷ್ಟಕ ೭.೨ ರನ್ನು ಗಮನಿಸಿದರೆ ಅಧ್ಯಯನ ಕ್ಷೇತ್ರದ ೨೫ ನೀ.ಬ.ಸ. ಸಂಘಗಳ ವ್ಯಾಪ್ತಿಯಲ್ಲಿ ಸುಮಾರು ೯೫೩೧ ಅಚ್ಚುಕಟ್ಟುದಾರರಿದ್ದಾರೆ. ಇದರಲ್ಲಿ ಶೇಕಡ ೭೦ ರಷ್ಟು ಅಚ್ಚುಕಟ್ಟುದಾರರು ಮಾತ್ರ ಸದಸ್ಯರಾಗಿದ್ದಾರೆ. ಅದರಲ್ಲಿ ಜಾತಿವಾರು ಸದಸ್ಯತ್ವ ಪಡೆದವರ ಮತ್ತು ಅಚ್ಚುಕಟ್ಟುದಾರರ ಸಂಖ್ಯೆಯನ್ನು ಗಮನಿಸಿದರೆ ಸಾಮಾನ್ಯ ಜಾತಿಯವರೇ ಅಧಿಕವಾಗಿದ್ದಾರೆ. ಆ ನಂತರದ ಸ್ಥಾನದಲ್ಲಿ ಕಾಣಿಸಿಕೊಳ್ಳುವವರು ಹಿಂದುಳಿದ ವರ್ಗದವರು. ಅಂತರವನ್ನು ಗಮನಿಸಿದಾಗ ಹಿಂದುಳಿದ ವರ್ಗದವರೇ ಉತ್ತಮ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಇದು ಮೀಸಲಾತಿಯ ಕಾರಣದಿಂದಲೋ, ಹೆಚ್ಚಿನ ಭೂಮಿ ಹೊಂದಿರುವುದರಿಂದಲೋ ಅಥವಾ ಆರ್ಥಿಕವಾಗಿ ಉನ್ನತ ಸ್ಥಿತಿಯಲ್ಲಿರುವುದರಿಂದಲೂ ಇರುವ ಈ ಸಾಧ್ಯತೆಯನ್ನು ಹೆಚ್ಚಾಗಿ ಪಡೆದುಕೊಂಡಿರಬಹುದು ಎನ್ನುವ ಊಹೆ ಮಾಡಿಕೊಳ್ಳಬಹುದು.

ಉಳಿದಂತೆ ಅಚ್ಚುಕಟ್ಟು ಪ್ರದೇಶದ ಸಾಗುವಳಿಯ ಭೂಮಿ ಸಾಮಾನ್ಯ ಜಾತಿಯವರ ವಶದಲ್ಲಿದೆ. ಮಹಿಳೆಯ ಸ್ಥಾನ ಯಥಾಪ್ರಕಾರ ಕೊನೆಯದು. ಒಟ್ಟಾರೆ ಅಚ್ಚುಕಟ್ಟುದಾರರ ಪ್ರಮಾಣ ಶೇಕಡ ೦.೫ ಕ್ಕಿಂತ ಕಡಿಮೆ. ಮೀಸಲಾತಿಯ ಕಾರಣದಿಂದ ಹೆಚ್ಚಿನ ಮಹಿಳೆಯರು ಸದಸ್ಯತ್ವ ಪಡೆದಿದ್ದಾರೆ. ಆ ನಂತರದ ದುಸ್ಥಿತಿ ಅಲ್ಪಸಂಖ್ಯಾತರದ್ದಾಗಿದೆ. ಸಾಪೇಕ್ಷವಾಗಿ ಪರಿಶಿಷ್ಟ ಪಂಗಡ ರೈತರಿಗಿಂತ ಪರಿಶಿಷ್ಟ ಜಾತಿಯವರು ಹೆಚ್ಚಿನ ಸದಸ್ಯತ್ವ ಹೊಂದಿದ್ದಾರೆ. ಒಟ್ಟಾರೆ ಸ್ಥಿತಿ ಏಣಿಶ್ರೇಣಿಯಿಂದಲೇ ಕೂಡಿದೆ. ಸಾಗುವಳಿ ಪ್ರದೇಶ ಪ್ರಧಾನ ಜಾತಿಗಳಿಂದ ದುರ್ಬಲ ಜಾತಿಗಳಿಗೆ ಮರುಹಂಚಿಕೆಯಾಗಿಲ್ಲ. ಇದರಿಂದ ಎಲ್ಲ ಅಚ್ಚುಕಟ್ಟುದಾರರ ಸದಸ್ಯತ್ವ ಇನ್ನೂ ಸಾಧ್ಯವಾಗಿಲ್ಲ. ಹೆಚ್ಚಿನ ಕೆಳವರ್ಗದವರು ಮೀಸಲಾತಿ ಕಾರಣಕ್ಕಾಗಿ ಸದಸ್ಯತ್ವ ಹೊಂದಿರುವುದರಿಂದ ಅವರು ಹೆಚ್ಚಿನ ಸದಸ್ಯತ್ವ ಪಡೆದಿರುವಂತೆ ಅಂಕಿಅಂಶಗಳು ಬಿಂಬಿತವಾಗಿವೆ. ಉದಾಹರಣೆಗೆ ಮಹಿಳಾ ಮೀಸಲಾತಿ ಇಲ್ಲದಿದ್ದರೆ ೨೪ ಮಹಿಳೆಯರು ಸಂಘಗಳಲ್ಲಿ ಸದಸ್ಯತ್ವ ಪಡೆಯುತ್ತಿರಲಿಲ್ಲ. ಆಗ ಕೇವಲ ೫ ಸದಸ್ಯರನ್ನು ಮಾತ್ರ ಕಾಣುವ ಸಾಧ್ಯತೆ ಇರುತ್ತಿತ್ತು. ಇದೇ ಸನ್ನಿವೇಶ ಉಳಿದ ವರ್ಗಗಳಲ್ಲಿಯೂ ಕಾಣುತ್ತೇವೆ.

**ನೀ.ಬ.ಸ. ಸಂಘಗಳ ಸದಸ್ಯರ ಕಾಲುವೆವಾರು ವಿವರ**

**ಕೋಷ್ಟಕ ೭.೩**

| ಕ್ರ.ಸಂ. | ಕಾಲುವೆ ವಿವರ | ಭೂಮಾಲೀಕರ ಸಂಖ್ಯೆ | ಸದಸ್ಯತ್ವ ಪಡೆದವರು | ಸದಸ್ಯೇತರರ ನಡುವಿನ ಅಂತರ |
|---|---|---|---|---|
| ೧. | ಮೇಲ್ತುದಿ | ೪೧೨೫ (೪೩.೨೭) | ೩೨೧೧ (೪೮.೧೨) | ೯೧೪ (೩೧.೯೬) |
| ೨. | ಮಧ್ಯಭಾಗ | ೩೫೨೧ (೩೬.೯೪) | ೨೫೮೯ (೩೮.೮೦) | ೯೩೨ (೩೨.೫೯) |
| ೩. | ಕೆಳತುದಿ | ೧೮೮೫ (೧೯.೭೭) | ೮೭೨ (೧೩.೦೬) | ೧೦೧೩ (೩೫.೪೩) |
| ೪. | ಒಟ್ಟು | ೯೫೩೧ (೧೦೦.೦೦) | ೬೬೭೨ (೧೦೦.೦೦) | ೨೮೫೯ (೧೦೦.೦೦) |

ಮೂಲ : ನೀ.ಬ.ಸ.ಸಂಘಗಳ ವಿವಿಧ ದಾಖಲೆ ಪತ್ರಗಳು

ಸಂಘಗಳಲ್ಲಿ ಸದಸ್ಯತ್ವ ಪಡೆದಿರುವವರನ್ನು ಕಾಲುವೆವಾರು ಗಮನಿಸಿದಾಗ ಮೇಲ್ತುದಿ ಸಾಗುವಳಿದಾರರು ಹೆಚ್ಚಾಗಿದ್ದಾರೆ. ಆನಂತರ ಮಧ್ಯಭಾಗ, ಕೊನೆಭಾಗದ ರೈತರು ನೀರಿನ ಅಭಾವ ಮತ್ತಿತರ ಕಾರಣಗಳಿಂದ ಸಂಘದ ಸದಸ್ಯತ್ವ ಪಡೆಯಲು ಇಚ್ಛಿಸದೇ ಇರುವುದು ಕೋಷ್ಟಕ ೭.೩ ರಲ್ಲಿ ಕಂಡುಬರುತ್ತದೆ. ಪ್ರತಿ ನಾಲೆ, ಕಾಲುವೆ ಈ ಮೂರು ಭಾಗಗಳಿಂದ ವರ್ಗೀಕೃತವಾಗಿರುತ್ತದೆ. ಅನೇಕ ಸಂದರ್ಭಗಳಲ್ಲಿ ಮುಖ್ಯ ಕಾಲುವೆಯ ಪ್ರಥಮ ವಿತರಣಾ ನಾಲೆಯ ಕೊನೆಭಾಗಕ್ಕೆ ನೀರು ದೊರೆಯುವುದಿಲ್ಲ. ಮೇಲ್ತುದಿ ಮತ್ತು ಮಧ್ಯಭಾಗದಲ್ಲಿ ನೀರಿನ ಅಪವ್ಯಯ ಮತ್ತು ಅಕ್ರಮ ಎತ್ತುವಳಿಯಿಂದ ಮೊದಲ ವಿತರಣೆ ನಾಲೆಯ ಕೊನೆಭಾಗಕ್ಕೆ ನೀರು ತಲುಪುವುದಿಲ್ಲ. ಆದುದರಿಂದ ಪ್ರತಿ ವಿತರಣಾ ನಾಲೆಯ ಕೊನೆಭಾಗವನ್ನು ಕೆಳತುದಿ ಎಂದು ಪರಿಗಣಿಸಲಾಗಿದೆ. ಮುಖ್ಯ ಕಾಲುವೆ ಮುಂದುವರಿದಂತೆ ವಿತರಣೆ ನಾಲೆಗಳಿಗೆ ಹರಿಯುವ ನೀರಿನ ಪ್ರಮಾಣವು ಕಡಿಮೆಯಾಗುತ್ತದೆ. ಒಟ್ಟಾರೆ ಕಾಲುವೆ ಮುಂಚೂಣಿಯಲ್ಲಿರುವ ರೈತರು ಜಲಭಕ್ಷಕ ಬೆಳೆಗಳನ್ನು ಬೆಳೆಯುವುದರ ಮೂಲಕ ತಮ್ಮ ಅನುಕೂಲತೆಗಳಿಗೆ ಚ್ಯುತಿ ಬಾರದ ಹಾಗೆ ಸಂಘಗಳಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಇದರಿಂದ ಕೊನೆಭಾಗದ ರೈತರಿಗೆ ನೀರಿನ ಅಭಾವ ಉಂಟಾಗುತ್ತದೆ. ನೀ.ಬ.ಸ. ಸಂಘಗಳಿಂದ ಮೇಲ್ತುದಿ ಮತ್ತು ಮಧ್ಯಭಾಗದ ರೈತರಿಗೆ ದೊರೆಯುವಷ್ಟು ಪ್ರಯೋಜನ ಕೆಳತುದಿ ರೈತರಿಗೆ ಸಿಗುವುದಿಲ್ಲ. ಪರಿಣಾಮವಾಗಿ ಈ ಭಾಗದ ರೈತರು ಸಂಘದಲ್ಲಿ ಸದಸ್ಯತ್ವ ಪಡೆಯಲು ಬಯಸುವುದಿಲ್ಲ. ಕೊನೆಭಾಗದ ರೈತರ ಅಭಿಪ್ರಾಯದಂತೆ ನೀ.ಬ.ಸ.ಸಂಘಗಳ ಸ್ಥಾಪನೆಗೆ ಮುಂಚೆ ಹಾಗೂ ಆನಂತರ ನೀರಾವರಿ ವ್ಯವಸ್ಥೆಯಲ್ಲಿ ಯಾವುದೇ ಬದಲಾವಣೆ ಕಂಡುಬಂದಿಲ್ಲ.

**೭.೩.೧. ಆಡಳಿತ ಮಂಡಳಿಯ ಕಾರ್ಯನಿರ್ವಹಣೆ**

ಸಹಕಾರ ಸಂಘಗಳ ಕಾರ್ಯನಿರ್ವಹಣೆಯು ಹಲವಾರು ಸಂಗತಿಗಳನ್ನು ಅವಲಂಬಿಸಿರುತ್ತವೆ. ಮುಖ್ಯವಾಗಿ ನಿಯಮಿತವಾಗಿ ಕಾರ್ಯಕಾರಿ ಮಂಡಳಿ ಸಭೆಗಳನ್ನು ನಡೆಸುವುದು, ಸಭೆಯಲ್ಲಿ ಎಲ್ಲ ಪದಾಧಿಕಾರಿಗಳ ಹಾಜರಾತಿ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸುವುದು, ಅಗತ್ಯ ನಿರ್ಧಾರಗಳನ್ನು ತೆಗೆದುಕೊಳ್ಳುವುದು, ತೆಗೆದುಕೊಂಡ ನಿರ್ಧಾರಗಳನ್ನು ಸಮರ್ಪಕವಾಗಿ ಕಾರ್ಯರೂಪಕ್ಕೆ ತರುವುದು, ಅಂತಹ ಕಾರ್ಯಗಳನ್ನು ಮೇಲ್ವಿಚಾರಣೆ ಮಾಡುವುದು, ಗುಣಮಟ್ಟವನ್ನು ಮೌಲ್ಯೀಕರಿಸುವುದು ಇನ್ನು ಮುಂತಾದವುಗಳ ಆಧಾರದ ಮೇಲೆ ಸಂಘಗಳ ಕಾರ್ಯನಿರ್ವಹಣೆಯನ್ನು ಅವಲೋಕಿಸಿ (ಆಧರಿಸಿ) ಅವುಗಳ ಕಾರ್ಯಸಾಧನೆಯನ್ನು ಕಂಡುಕೊಳ್ಳಬಹುದು. ಕಾರ್ಯಕಾರಿ ಸಭೆಗಳಲ್ಲೂ ಏಣಿಶ್ರೇಣಿ ತನ್ನ ಪ್ರಭಾವವನ್ನು ಹೊಂದಿರುತ್ತದೆ. ಕಾಲುವೆಯ ವಿವಿಧ ಭಾಗದ ರೈತರ ಭಾಗವಹಿಸುವಿಕೆಯಲ್ಲೂ ಭಿನ್ನತೆಗಳನ್ನು ಕಾಣುತ್ತೇವೆ.

## ಆಡಳಿತ ಮಂಡಳಿ ಸಭೆಗಳಲ್ಲಿ ಪದಾಧಿಕಾರಿಗಳ ವರ್ಗವಾರು ಭಾಗವಹಿಸುವಿಕೆ

ಕೋಷ್ಟಕ ೬.೪

(ಶೇಕಡವಾರು)

| ಕ್ರ.ಸಂ. | ವಿವರ | ಪದಾಧಿಕಾರಿಗಳು | | | | |
|---|---|---|---|---|---|---|
| | | ಸಾಮಾನ್ಯ | ಹಿಂ/ಅ.ಸಂ. | ಪ.ಜಾ. | ಪ.ಪಂ. | ಮಹಿಳೆ |
| ೧. | ಹಾಜರಾತಿ | ೭೦.೬೬ | ೫೬.೦೦ | ೩೩.೩೩ | ೪೦.೦೦ | ೨೫.೦೦ |
| ೨. | ಚರ್ಚೆಯಲ್ಲಿ ಭಾಗವಹಿಸುವಿಕೆ | ೬೦.೦೦ | ೪೦.೦೦ | ೨೦.೦೦ | ೩೦.೦೦ | ೪.೧೬ |
| ೩. | ನಿರ್ಧಾರ ಕೈಗೊಳ್ಳುವಿಕೆ | ೫೩.೩೩ | ೩೨.೦೦ | ೧೩.೩೩ | ೨೦.೦೦ | ..... |
| ೪. | ಅನುಷ್ಠಾನಗೊಳಿಸುವಿಕೆ | ೪೧.೩೩ | ೨೦.೦೦ | ೬.೬೬ | ೧೦.೦೦ | ..... |
| ೫. | ಮೇಲ್ವಿಚಾರಣೆ | ೩೦.೬೬ | ೧೨.೦೦ | ..... | ೧೦.೦೦ | ..... |
| ೬. | ಮೌಲ್ಯಮಾಪನ | ೨೬.೬೬ | ೮.೦೦ | ..... | ..... | ..... |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಆಡಳಿತ ಮಂಡಳಿಗಳ ಸಭೆಗಳೇ ಮುಖ್ಯವಾಗಿ ಸಂಘಗಳ ಹೃದಯ ಭಾಗದಂತೆ ಕಾರ್ಯ ನಿರ್ವಹಿಸಬೇಕಾಗುತ್ತದೆ. ಏಕೆಂದರೆ ಕಾರ್ಯಕಾರಿ ಮಂಡಳಿಯು ಸಂಘಗಳ ಉದ್ದೇಶಗಳನ್ನು ಈಡೇರಿಸುವ ಕೇಂದ್ರ ಬಿಂದು. ಈ ಮಂಡಳಿಯ ಕಾರ್ಯನಿರ್ವಹಣೆ ಮೇಲೆ ಅವುಗಳ ಕಾರ್ಯಸಾಧನೆ ನಿರ್ಧಾರವಾಗುತ್ತದೆ. ಕೋಷ್ಟಕ ೬.೪ರಲ್ಲಿ ಸಂಘಗಳಲ್ಲಿ ಯಾವ ವರ್ಗದ ಪದಾಧಿಕಾರಿಗಳು ಎಷ್ಟು ಪ್ರಮಾಣದಲ್ಲಿ ಭಾಗವಹಿಸುತ್ತಾರೆ, ಉಳಿದಂತೆ ಕಾರ್ಯಪ್ರಕ್ರಿಯೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ ಎಂಬುದನ್ನು ಶೇಕಡಾವಾರು ನೀಡಲಾಗಿದೆ. ಕೋಷ್ಟಕದಲ್ಲಿಯ ೬ ಸಂಗತಿಗಳನ್ನು ಗಮನಿಸಿದಾಗ ಸಾಮಾನ್ಯ ವರ್ಗದ ಜನರು ಹೆಚ್ಚಿನ ಪ್ರಮಾಣದಲ್ಲಿ ಪಾಲ್ಗೊಳ್ಳುತ್ತಾರೆ. ಉಳಿದಂತೆ ಕ್ರಮವಾಗಿ ಈ ಪ್ರಮಾಣ ಕಡಿಮೆಯಾಗುತ್ತಾ ಸಾಗುತ್ತದೆ. ಒಟ್ಟು ೧೪೫ ಪದಾಧಿಕಾರಿಗಳಲ್ಲಿ ೭೫ ಸಾಮಾನ್ಯ, ೨೫ ಹಿಂದುಳಿದ/ಅಲ್ಪಸಂಖ್ಯಾತ, ೧೫ ಪ.ಜಾ.ವರ್ಗ, ೧೦ ಪ.ವರ್ಗ ಹಾಗೂ ೨೪ ಮಹಿಳೆಯರು ಬರುತ್ತಾರೆ. ಒಂದು ಸಂಘದಲ್ಲಿ ಮಹಿಳಾ ನಿರ್ದೇಶಕರನ್ನು ಆಯ್ಕೆ ಮಾಡಿಕೊಂಡಿಲ್ಲ. ಹಾಜರಾತಿ, ಚರ್ಚೆಯಲ್ಲಿ ಭಾಗವಹಿಸುವಿಕೆ, ತೀರ್ಮಾನ ತೆಗೆದುಕೊಳ್ಳುವಿಕೆ, ಅನುಷ್ಠಾನ, ಮೇಲ್ವಿಚಾರಣೆ ಹಾಗೂ ಮೌಲ್ಯಮಾಪನ ಅತಿಮುಖ್ಯವಾದ ಸಂಗತಿಗಳು. ಈ ಕಾರ್ಯಗಳನ್ನು ನೆರವೇರಿಸುವಲ್ಲಿಯೂ ಸಾಮಾಜಿಕ ಸ್ತರವಿನ್ಯಾಸ ತನ್ನ ಪ್ರಭಾವವನ್ನು ಹೊಂದಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಪ.ಜಾ. ಪದಾಧಿಕಾರಿಗಳಿಗಿಂತ ಪ.ಪಂಗಡದವರು ಉತ್ತಮವಾಗಿ ಪಾಲ್ಗೊಂಡಿದ್ದಾರೆ. ಮಹಿಳೆಯರನ್ನು ಗಮನಿಸಿದರೆ ಅವರ ಹಾಜರಾತಿ ೨೪ ರಲ್ಲಿ ಕೇವಲ ೬ ಮಾತ್ರ, ಚರ್ಚೆಯಲ್ಲಿ ಭಾಗವಹಿಸಿದ್ದು ಒಬ್ಬರು ಮಾತ್ರ.

## ಸಭೆಗಳಲ್ಲಿ ಪದಾಧಿಕಾರಿಗಳ ಮತ್ತು ಅಧಿಕಾರಿಗಳ ಕಾಲುವೆವಾರು ಭಾಗವಹಿಸುವಿಕೆ

ಕೋಷ್ಟಕ ೭.೫

| ಕ್ರ.ಸಂ. | ವಿವರ | ಮೇಲ್ತುದಿ | ಮಧ್ಯಭಾಗ | ಕೆಳತುದಿ | ಅಧಿಕಾರಿವರ್ಗ |
|---|---|---|---|---|---|
| ೧. | ಹಾಜರಾತಿ | ೭೩.೭೭ | ೫೯.೬೧ | ೩೮.೮೮ | ೨೦.೦೦ |
| ೨. | ಚರ್ಚೆಯಲ್ಲಿ ಭಾಗವಹಿಸುವಿಕೆ | ೫೯.೦೧ | ೪೬.೧೫ | ೨೫.೦೦ | ೮.೫೭ |
| ೩. | ನಿರ್ಧಾರ ಕೈಗೊಳ್ಳುವಿಕೆ | ೪೫.೯೦ | ೨೩.೦೭ | ೧೬.೬೬ | ..... |
| ೪. | ಅನುಷ್ಠಾನಗೊಳಿಸುವಿಕೆ | ೨೪.೫೯ | ೧೩.೪೬ | ೮.೩೩ | ..... |
| ೫. | ಮೇಲ್ವಿಚಾರಣೆ | ೧೬.೩೯ | ೭.೬೯ | ೨.೭೭ | ..... |
| ೬. | ಮೌಲ್ಯಮಾಪನ | ೮.೧೯ | ೩.೮೪ | ..... | ..... |

ಮೂಲ : ಕ್ಷೇತ್ರಕಾರ್ಯ ಮಾಹಿತಿ

ಕಾಲುವೆಯ ವಿವಿಧ ಭಾಗಗಳ ಆಧಾರದ ಮೇಲೆ ಪದಾಧಿಕಾರಿಗಳನ್ನು ವರ್ಗೀಕರಿಸಿದಾಗ ಒಟ್ಟು ೧೪೯ ಪದಾಧಿಕಾರಿಗಳಲ್ಲಿ ಮೇಲ್ತುದಿಯಿಂದ ೬೧, ಮಧ್ಯಭಾಗ ೫೨ ಮತ್ತು ಕೊನೆಭಾಗದಿಂದ ೩೬ ಇರುತ್ತಾರೆ. ಇವರೊಂದಿಗೆ ಪ್ರತಿ ಸಂಘಕ್ಕೆ ನೀರಾವರಿ ಇಲಾಖೆಯ ಒಬ್ಬ ನಿರ್ದೇಶಕರು ಇರುತ್ತಾರೆ (೨೫). ಉಳಿದಂತೆ ಕೃಷಿ ಇಲಾಖೆ ಮತ್ತು ಕಾಡಾದ ಸಹಕಾರ ವಿಭಾಗದ ಅಧಿಕಾರಿಗಳು ಖಾಯಂ ಆಹ್ವಾನಿತರಿರುತ್ತಾರೆ (೧೦). ಈ ಆಧಾರದ ಮೇಲೆ ಗಮನಿಸಿದಾಗ ಭಾಗವಹಿಸುವಿಕೆಯ ಆರು ಸಂಗತಿಗಳಲ್ಲಿ ಮೇಲ್ತುದಿಯವರ ಪಾತ್ರ ಹೆಚ್ಚಾಗಿದೆ. ನಂತರ ಕ್ರಮವಾಗಿ ಮಧ್ಯಭಾಗ ಮತ್ತು ಕೆಳಭಾಗದವರ ಪಾಲ್ಗೊಳ್ಳುವಿಕೆಯಿದೆ. ಕೆಳಭಾಗದ ಸಮಸ್ಯೆಗಳು ಜಟಿಲವಾಗಿರುವುದರಿಂದ ಹೆಚ್ಚು ಪರಿಹಾರ ಕಾಣುವುದಿಲ್ಲವೆನ್ನುವ ಕಾರಣಕ್ಕೆ ಅವರ ಭಾಗವಹಿಸುವಿಕೆ ಸಾಪೇಕ್ಷವಾಗಿ ಕಡಿಮೆಯಿದೆ. ಅದರಂತೆ ಅಧಿಕಾರಿಗಳ ಪಾಲ್ಗೊಳ್ಳುವಿಕೆ ಹೆಚ್ಚು ತೃಪ್ತಿಕರವಾಗಿಲ್ಲ. ನೀರಾವರಿ ಅಧಿಕಾರಿಗಳು ನಿರ್ದೇಶಕರಾಗಿರುವುದರಿಂದ ಅವರು ಭಾಗವಹಿಸಬೇಕಾಗುತ್ತದೆ. ಆದರೆ ವಾಸ್ತವದಲ್ಲಿ ಸಿಬ್ಬಂದಿಯ ಕೊರತೆಯ ನೆಪದಲ್ಲಿ ಅವರು ಬಹುತೇಕ ಭಾಗವಹಿಸುವುದು ಕಡಿಮೆ. ಭಾಗವಹಿಸಿದಾಗ ಅವರು ಚರ್ಚೆಯಲ್ಲಿ ಪಾಲ್ಗೊಳ್ಳಲು ಆಸಕ್ತಿ ತೋರುವುದಿಲ್ಲ. ಸಮಸ್ಯೆಗಳ ತೀವ್ರತೆಯನ್ನು ಪರಿಗಣಿಸಿ ಹೆಚ್ಚಿನ ನೀರಾವರಿ ಅಧಿಕಾರಿಗಳು ಆಡಳಿತ ಮಂಡಳಿ ಮತ್ತು ಸರ್ವಸದಸ್ಯರ ಸಭೆಗಳಲ್ಲಿ ಭಾಗವಹಿಸಲು ಹಿಂಜರಿಯುತ್ತಾರೆ. ಪರಿಣಾಮವಾಗಿ ಹೆಚ್ಚಿನ ಸಮಸ್ಯೆಗಳಿಗೆ ಪರಿಹಾರ ದೊರೆಯುವುದಿಲ್ಲ. ಕ್ರಮೇಣ ಉಳಿದ ಪದಾಧಿಕಾರಿಗಳೂ ಸಭೆಗಳ ಬಗ್ಗೆ ಉದಾಸೀನರಾಗುತ್ತಾರೆ. ಹೀಗಾಗಿ ಎಲ್ಲ ಭಾಗದ ಪದಾಧಿಕಾರಿಗಳು ಮತ್ತು ಅಧಿಕಾರಿ ವರ್ಗದವರು ಕಡ್ಡಾಯವಾಗಿ ಭಾಗವಹಿಸಿದರೆ ನೀ.ಬ.ಸ. ಸಂಘದ ಕಾರ್ಯನಿರ್ವಹಣೆ ಉತ್ತಮಗೊಳ್ಳುತ್ತದೆ. ಜೊತೆಗೆ ಕಾರ್ಯಸಾಧನೆ ಸುಗಮವಾಗುತ್ತದೆ.

ಇಷ್ಟೇ ಅಲ್ಲದೆ ಶೇಕಡ ೮೦ ರಷ್ಟು ಸಂಘಗಳಲ್ಲಿ ಮಾಸಿಕ ಸಭೆಗಳು ಪ್ರತಿ ತಿಂಗಳು ನಿಯಮಿತವಾಗಿ ನಡೆಯುವುದಿಲ್ಲ. ಕಾರ್ಯದರ್ಶಿ ಒಂದು ದಿನಾಂಕ ಬರೆದು ಎಲ್ಲ ಪದಾಧಿಕಾರಿಗಳಿಂದ ನಂತರ ಸಹಿ ಪಡೆಯುವುದು ಸಾಮಾನ್ಯ ಸಂಗತಿ. ಶೇಕಡ ೬೦ ಸಂಘಗಳ ನೋಟಿಸ್‌ಗಳಲ್ಲಿ ಕಾರ್ಯಸೂಚಿ ಇರುವುದಿಲ್ಲ. ಶೇಕಡ ೪೮ ಸಂಘಗಳಲ್ಲಿ ತಿಳುವಳಿಕೆ ಪತ್ರವನ್ನು ೩ ದಿನ ಮೊದಲು ನೀಡುವ ಪರಿಪಾಠವಿದೆ. ಒಟ್ಟಾರೆ ಸಂಘಗಳು ತಾಂತ್ರಿಕವಾಗಿ ಎಲ್ಲ ಸಂಗತಿಗಳನ್ನು ಬೈಲಾ ಮಾದರಿಯಲ್ಲಿ ನಡೆದಂತೆ ಸಿದ್ಧಪಡಿಸುತ್ತವೆ. ಆದರೆ ಕಾರ್ಯರೂಪದಲ್ಲಿ ಯಾವ ಅಂಶವೂ ನಿಯಮ ಬದ್ಧವಾಗಿರುವುದಿಲ್ಲ. ಇದರಿಂದ ವಿಕೇಂದ್ರೀಕರಣ ಮತ್ತು ಪ್ರಜಾಸತ್ತಾತ್ಮಕ ವ್ಯವಸ್ಥೆ ಸುಸ್ಥಿರವಾಗುವುದಿಲ್ಲ. ಸಂಘಗಳ ನಿರಂತರತೆಗೆ ಇದೊಂದು ತೊಡಕಾಗಿದೆ.

## ೬.೪. ಸಂಘಗಳ ಆರ್ಥಿಕ ಸಂಪನ್ಮೂಲಗಳ ಸಂಚಯನ ಮತ್ತು ಸ್ವಾವಲಂಬನೆ

ಆರ್ಥಿಕವಾಗಿ ಬಲಿಷ್ಠವಾಗಿರುವ ಸಂಘವು ಉತ್ತಮವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ. ಇತರೆ ಸಂಗತಿಗಳು ಸಮೃದ್ಧಿಯಾಗಿದ್ದರೂ ಹಣಕಾಸಿನ ಸ್ವಾವಲಂಬನೆಯಿಲ್ಲದೆ ಸಂಘವು ತನ್ನ ಗುರಿಗಳನ್ನು ತಲುಪಲು ಸಾಧ್ಯವಿಲ್ಲ. ನೀ.ಬ.ಸ. ಸಂಘಗಳು ಐದು ಪ್ರಕಾರದ ಹಣಕಾಸಿನ ಮೂಲಗಳನ್ನು ಹೊಂದಿವೆ. ಷೇರುಹಣ, ನಿರ್ವಹಣಾ ಸಹಾಯಧನ, ನೀರು ದರ ಮತ್ತು ಇತರೆ ಸೇವಾವಂತಿಗೆ, ಹೆಕ್ಟೇರುವಾರು ಕಾರ್ಯಾಚರಣೆ ಮತ್ತು ನಿರ್ವಹಣೆ ವಂತಿಗೆ ಹಾಗೂ ಅಭಿವೃದ್ಧಿ ವಂತಿಗೆಗಳು.

ಸದಸ್ಯತ್ವದಿಂದ ಷೇರುಧನ ಸಂಗ್ರಹವಾಗುತ್ತದೆ. ಇದರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸದಸ್ಯರ ಷೇರುಹಣವನ್ನು ಸರಕಾರವೇ ನೀಡುತ್ತದೆ. ಸದಸ್ಯತ್ವ ಹೆಚ್ಚಾದಂತೆ ಷೇರುಧನ ಅಧಿಕವಾಗುತ್ತದೆ. ನಿರ್ವಹಣಾ ಸಹಾಯಧನವನ್ನು ಪ್ರತಿ ಹೆಕ್ಟೇರ್‌ಗೆ ಒಮ್ಮೆಗೆ ರೂ. ೬೦೦ಗಳನ್ನು ನೀಡಲಾಗುತ್ತದೆ. ಇದರಲ್ಲಿ ಸದಸ್ಯರಿಂದ ರೂ. ೬೦ ಪಡೆದು ಉಳಿದ ರೂ. ೫೪೦ಗಳನ್ನು ಕೇಂದ್ರ ಮತ್ತು ರಾಜ್ಯ ಸರಕಾರ ಶೇಕಡ ೫೦:೫೦ ಹಾಗೆ ಪಾವತಿಸುತ್ತವೆ. ಷೇರುಧನ ಮತ್ತು ನಿರ್ವಹಣಾ ಸಹಾಯಧನವನ್ನು ಸಂಘವು ನಿಶ್ಚಿತ ಠೇವಣಿಯಲ್ಲಿಟ್ಟು ಇದರಿಂದ ಬರುವ ಬಡ್ಡಿಯನ್ನು ಮಾತ್ರ ಸಂಘದ ನಿರ್ವಹಣೆಗೆ ಬಳಕೆ ಮಾಡಿಕೊಳ್ಳಲು ಅವಕಾಶವಿದೆ. ಆದುದರಿಂದ ಈ ಎರಡೂ ಮೂಲಗಳ ಹಣವನ್ನು ಕ್ರೋಢೀಕರಿಸಲು ಸದಸ್ಯತ್ವವನ್ನು ಅಧಿಕಗೊಳಿಸಬೇಕಾಗುತ್ತದೆ.

ಸಂಘಗಳು ಒಡಂಬಡಿಕೆ ಒಪ್ಪಂದ ಮಾಡಿಕೊಳ್ಳುವವರೆಗೂ ಈ ಎರಡೂ ಮೂಲಗಳಿಂದ ಹಣವನ್ನು ಸಂಗ್ರಹ ಮಾಡಿವೆ. ಆನಂತರ ಬಹುತೇಕ ನೀ.ಬ.ಸ.ಸಂಘಗಳು ಈ ದಿಶೆಯಲ್ಲಿ ಹೆಚ್ಚಿನ ಸಾಧನೆ ಮಾಡಿಲ್ಲ. ಇದರಿಂದ ಸಂಘಗಳ ಹಣಕಾಸಿನ ಪರಿಸ್ಥಿತಿ ಉತ್ತಮವಾಗಿಲ್ಲ.

ನೀರು ದರವು ಸಂಘದ ಒಂದು ಪ್ರಮುಖ ಮೂಲವಾಗಿದೆ. ಆದರೆ ಈ ಮೂಲದಿಂದ ಶೇಕಡ ೨೦ ರಷ್ಟು ಮಾತ್ರ ಸಂಘಕ್ಕೆ ಲಭ್ಯವಿದ್ದು ಉಳಿದ ಶೇಕಡ ೮೦ ರಷ್ಟನ್ನು ನೀರಾವರಿ ಇಲಾಖೆಗೆ

ಪಾವತಿಸಬೇಕು. ನೀರು ದರ ನಿರ್ಧಾರದಲ್ಲಿ ಶೇಕಡ ೯೨ ರಷ್ಟು ಸಂಘಗಳು ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಅಧ್ಯಯನಕ್ಕೆ ಒಳಪಡಿಸಿದ ಸಂಘಗಳಲ್ಲಿ ಕೇವಲ ಎರಡು ಸಂಘಗಳು ಸರಕಾರ ನಿಗದಿಪಡಿಸಿರುವ ಪ್ರಮಾಣಕ್ಕಿಂತ ಹೆಚ್ಚಿನ ದರವನ್ನು ನಿಗದಿಪಡಿಸಿವೆ. ಉಳಿದಂತೆ ೨೩ ಸಂಘಗಳು ನೀರು ದರ ಸಂಗ್ರಹವನ್ನು ಮಾಡುತ್ತಿಲ್ಲ. ಕಂದಾಯ ಇಲಾಖೆ ಮತ್ತು ನೀರಾವರಿ ಇಲಾಖೆಗಳ ಗೊಂದಲದ ನಿಲುವುಗಳಿಂದ ಸಂಘಗಳಿಗೆ ನೀರು ದರ ವಸೂಲಿ ಮಾಡಲು ಸಾಧ್ಯವಾಗಿಲ್ಲ. ನೀರು ದರ ವಸೂಲಿ ಮಾಡಿದಾಗ ಮಾತ್ರ ಸರಕಾರ ನೀಡುವ ಹೆಕ್ಟೇರುವಾರು ನಿರ್ವಹಣಾ ಧನ ಪಡೆಯಲು ಸಾಧ್ಯವಾಗುತ್ತದೆ. ಅಂದರೆ ಶೇಕಡ ೯೨ ರಷ್ಟು ಸಂಘಗಳು ಈ ನಿಟ್ಟಿನಲ್ಲಿ ಯಾವುದೇ ಸಾಧನೆ ಮಾಡಿಲ್ಲ. ಆದುದರಿಂದ ಹಣಕಾಸಿನ ಸ್ವಾವಲಂಬನೆಯ ವಿಷಯದಲ್ಲಿ ನೀ.ಬ.ಸ.ಸಂಘಗಳು ದುಸ್ಥಿತಿಯಲ್ಲಿವೆ. ಸಂಘಗಳಿಗೆ ಇತರೆ ಅಭಿವೃದ್ಧಿ ವಂತಿಗೆಗಳನ್ನು ಸಂಗ್ರಹಿಸುವ ಅವಕಾಶವಿದೆ. ಆದರೆ ಹೊಸಹಳ್ಳಿ ಸಂಘ ಮಾತ್ರ ಇಂತಹ ವಂತಿಗೆಗಳನ್ನು ಸಂಗ್ರಹಿಸುತ್ತಿದೆ. ಉಳಿದಂತೆ ಶೇಕಡ ೯೬ ರಷ್ಟು ಸಂಘಗಳು ಯಾವುದೇ ಅಭಿವೃದ್ಧಿ ವಂತಿಗೆಗಳನ್ನು ಪಡೆಯುತ್ತಿಲ್ಲ.

**ಸಂಘಗಳಲ್ಲಿ ವಿವಿಧ ಮೂಲಗಳಿಂದ ಸಂಚಯನವಾಗುತ್ತಿರುವ ಹಣಕಾಸಿನ ಶೇಕಡ ಪ್ರಮಾಣ**

**ಕೋಷ್ಟಕ ೭.೬**

| ಕ್ರ.ಸಂ. | ಹಣಕಾಸಿನ ಮೂಲಗಳು | ಸಂಗ್ರಹದ ಪ್ರಮಾಣ | ಸಂಗ್ರಹ ಮಾಡ ಬೇಕಾದ ಪ್ರಮಾಣ | ಅಂತರ |
|---|---|---|---|---|
| ೧. | ಷೇರುಧನ | ೭೧.೦೦ | ೧೦೦.೦೦ | ೨೯.೦೦ |
| ೨. | ನಿರ್ವಹಣಾ ಅನುದಾನ | ೪೫.೦೦ | ೧೦೦.೦೦ | ೫೫.೦೦ |
| ೩. | ಹೆಕ್ಟೇರುವಾರು ಸಹಾಯಧನ | ೩೮.೦೦ | ೧೦೦.೦೦ | ೬೨.೦೦ |
| ೪. | ನೀರುದರ | ೧೨.೦೦ | ೧೦೦.೦೦ | ೮೮.೦೦ |
| ೫. | ಅಭಿವೃದ್ಧಿ ವಂತಿಗೆಗಳು | ೦೪.೦೦ | ೧೦೦.೦೦ | ೯೬.೦೦ |
| ೬. | ದಂಡ ಮತ್ತು ಜುಲ್ಮಾನೆಗಳು | ೦೪.೦೦ | ೧೦೦.೦೦ | ೯೬.೦೦ |
| ೭. | ಪ.ಜಾ/ಪ.ಪಂ. ವಿಶೇಷ ಅನುದಾನ | ೨೮.೦೦ | ೧೦೦.೦೦ | ೯೬.೦೦ |
| ೮. | ಇತರೆ ಸೇವೆಗಳಿಂದ ಪಡೆದ ಲಾಭ | ೦೦.೦೦ | ೧೦೦.೦೦ | ೦೦.೦೦ |
| ೯. | ದಾನಿಗಳಿಂದ ಪಡೆದ ಹಣ | ೦೦.೦೦ | ೧೦೦.೦೦ | ೦೦.೦೦ |
| ೧೦. | ಇತರೆ ಉತ್ಪನ್ನಗಳ ಮಾರಾಟದಿಂದ ಪಡೆದ ವರಮಾನ | ೦೦.೦೦ | ೧೦೦.೦೦ | ೦೦.೦೦ |

ಮೂಲ : ನೀ.ಬ.ಸ.ಸಂಘಗಳ ವಿವಿಧ ದಾಖಲೆ ಪತ್ರಗಳು

ಈ ಮೇಲಿನ ಕೋಷ್ಟಕದಲ್ಲಿ ಗಮನಿಸಿದಂತೆ ಸಂಘಗಳಿಗೆ ಹಣಕಾಸನ್ನು ಸಂಗ್ರಹಿಸಲು ಹಲವಾರು ಮೂಲಗಳಿವೆ. ಆದರೆ ಸಂಗ್ರಹಿಸುತ್ತಿರುವುದು ಕೆಲವೇ ಮೂಲಗಳಿಂದ ಅದು ಅಲ್ಪಪ್ರಮಾಣದಲ್ಲಿ. ಇದರಿಂದ ಸಂಘಗಳ ಹಣಕಾಸಿನ ಪರಿಸ್ಥಿತಿ ತೀರ ಕೆಳಹಂತದಲ್ಲಿರುವುದು ತಿಳಿಯುತ್ತದೆ.

### ೭.೪.೧. ಸಂಘಗಳ ವೆಚ್ಚದ ಸಂಗತಿಗಳು

ಆದಾಯ ಗಳಿಕೆಯಲ್ಲಿ ಉತ್ತಮ ಸಾಧನೆ ಮಾಡದೇ ಇರುವಾಗ ವೆಚ್ಚಕ್ಕೆ ಬೇಕಾದಷ್ಟು ಹಣ ಲಭ್ಯವಾಗುವುದಿಲ್ಲ. ವೆಚ್ಚ ಮಾಡದೆ ಸಂಘಗಳು ತಮ್ಮ ಉದ್ದೇಶಗಳನ್ನು ಈಡೇರಿಸಲು ಸಾಧ್ಯವಾಗುವುದಿಲ್ಲ. ಉದ್ದೇಶಗಳು ಈಡೇರದೇ ಇದ್ದಾಗ ಸಂಘಗಳ ಕಾರ್ಯಸಾಧನೆ ಶೂನ್ಯವಾಗುತ್ತದೆ. ನೀ.ಬ.ಸ.ಸಂಘಗಳು ಪ್ರಮುಖವಾಗಿ ಎರಡು ರೀತಿ ವೆಚ್ಚಗಳನ್ನು ಮಾಡುತ್ತದೆ. ಆಡಳಿತಾತ್ಮಕ ವೆಚ್ಚ ಮತ್ತು ಕಾಮಗಾರಿಗಳ ವೆಚ್ಚ. ಆಡಳಿತಾತ್ಮಕ ವೆಚ್ಚದಲ್ಲಿ ಸಂಘದ ಆಂತರಿಕ ವ್ಯವಹಾರಗಳಿಗೆ ಸಂಬಂಧಿಸಿದಂತೆ, ಸಿಬ್ಬಂದಿಗಳ ವೇತನ, ಸಭೆಗಳಿಗೆ ತಗಲುವ ಖರ್ಚು, ಸಾದಿಲ್ವಾರು ವೆಚ್ಚ, ಪದಾಧಿಕಾರಿಗಳು ಮತ್ತು ಕಾರ್ಯದರ್ಶಿಯ ಸಾರಿಗೆ ವೆಚ್ಚ, ಲೆಕ್ಕ ಪರಿಶೋಧನೆ ವೆಚ್ಚ ಮೊದಲಾದವುಗಳು ಬರುತ್ತವೆ. ಕಾಮಗಾರಿಗಳ ವೆಚ್ಚದ ವ್ಯಾಪ್ತಿಗೆ ಹೊಲಗಾಲುವೆ ಮತ್ತು ಬಸಿಗಾಲುವೆಗಳ ದುರಸ್ತಿ, ಆಯಕಟ್ಟಿನ ರಸ್ತೆಗಳ ದುರಸ್ತಿ, ನಾಲೆಗಳಲ್ಲಿ ಹೂಳು ಮತ್ತು ಕಸಕಡ್ಡಿ ತೆಗೆಯುವುದು, ತೂಬುಗಳ ದುರಸ್ತಿ ಹಾಗೂ ನಿಯಂತ್ರಕಗಳ ಅಳವಡಿಕೆಗೆ ತಗಲುವ ವೆಚ್ಚಗಳು ಬರುತ್ತವೆ. ಪ್ರಸ್ತುತ ಸಂಘಗಳ ವರಮಾನವನ್ನು ಪರಿಗಣಿಸಿದರೆ ಅದು ಕೇವಲ ಆಡಳಿತಾತ್ಮಕ ವೆಚ್ಚಕ್ಕೆ ಸಾಕಾಗುವುದಿಲ್ಲ. ಕಾರ್ಯದರ್ಶಿಗಳಿಗೆ ವೇತನ ನೀಡಲು ಸಾಧ್ಯವಾಗದ ಅನೇಕ ಸಂಘಗಳಿವೆ. ಕೇವಲ ೪ ಸಂಘಗಳು ಕಾರ್ಯದರ್ಶಿಗಳಿಗೆ ರೂ. ೫೦೦ ರಿಂದ ರೂ. ೧೦೦೦ ರವರೆಗೆ ಸಂಬಳ ನೀಡುವ ಸ್ಥಿತಿಯಲ್ಲಿವೆ. ಉಳಿದಂತೆ ೨೧ ಸಂಘಗಳು ಕಾರ್ಯದರ್ಶಿಗಳಿಗಿರುವ ೫೦೦ಕ್ಕಿಂತ ಕಡಿಮೆ ಸಂಬಳ ನೀಡುತ್ತವೆ. ಇದರಿಂದ ಕಾರ್ಯದರ್ಶಿಗಳು ಪದೇ ಪದೇ ರಾಜೀನಾಮೆ ನೀಡುತ್ತಿದ್ದು, ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಲು ಯಾರು ಮುಂದೆ ಬರುತ್ತಿಲ್ಲ. ಎರಡು ಸಂಘಗಳಲ್ಲಿ ಪದಾಧಿಕಾರಿಗಳೇ ಕಾರ್ಯದರ್ಶಿಯ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ. ಇಂತಹ ದುಸ್ಥಿತಿಯಲ್ಲಿ ಸಂಘಗಳು ಇತರೆ ಕಾಮಗಾರಿಗಳನ್ನು ಕೈಗೊಳ್ಳಲು ಹೇಗೆ ಸಾಧ್ಯ?

**ಕೋಷ್ಟಕ ೭.೭**

| ಕ್ರ.ಸಂ. | ವೆಚ್ಚಗಳ ವಿವರ | ವೆಚ್ಚದ ಪ್ರಮಾಣ ಶೇ. | ಮಾಡಬೇಕಾದ ವೆಚ್ಚ ಶೇ. | ಅಂತರ |
|---|---|---|---|---|
| **I** | **ಆಡಳಿತಾತ್ಮಕ ವೆಚ್ಚ** | | | |
| ೧. | ಸಿಬ್ಬಂದಿ ವೇತನ | ೪೫.೦೦ | ೦೨.೫೦ | ೪೨.೫೦ |
| ೨. | ಸಾದಿಲ್ವಾರು ವೆಚ್ಚ | ೦೫.೦೦ | ೦೧.೦೦ | ೦೪.೦೦ |
| ೩. | ಆಡಿಟ್ ವೆಚ್ಚ | ೦೨.೦೦ | ೦೦.೫೦ | ೦೧.೫೦ |
| ೪. | ಸಭೆಗಳ ಖರ್ಚು | ೧೦.೦೦ | ೦೫.೦೦ | ೦೫.೦೦ |
| ೫. | ಸ್ಟೇಷನರಿ ವೆಚ್ಚ | ೦೫.೦೦ | ೦೧.೦೦ | ೦೪.೦೦ |
| ೬. | ಸಾರಿಗೆ ವೆಚ್ಚ | ೦೫.೦೦ | ೦೧.೦೦ | ೦೪.೦೦ |
| **II** | **ಕಾಮಗಾರಿ ವೆಚ್ಚ** | | | |
| ೭. | ಹೊಲಗಾಲುವೆ ಮತ್ತು ಬಸಿಗಾಲುವೆಗಳ ದುರಸ್ತಿ ವೆಚ್ಚ | ೧೦.೦೦ | ೩೦.೦೦ | ೨೦.೦೦ |
| ೮. | ಆಯಕಟ್ಟಿನ ರಸ್ತೆಗಳ ದುರಸ್ತಿ | ೦೮.೦೦ | ೨೦.೦೦ | ೧೨.೦೦ |
| ೯. | ತೂಬುಗಳ ದುರಸ್ತಿ ಮತ್ತು ನಿರ್ವಹಣೆ | ೦೫.೦೦ | ೨೦.೦೦ | ೧೫.೦೦ |
| ೧೦. | ತರಬೇತಿ ವೆಚ್ಚಗಳು | ೦೫.೦೦ | ೧೯.೦೦ | ೧೪.೦೦ |
| ೧೧. | ಒಟ್ಟು | ೧೦೦.೦೦ | ೧೦೦.೦೦ | ..... |

**ಮೂಲ** : ಕ್ಷೇತ್ರಕಾರ್ಯ ಮಾಹಿತಿ / ಸಂಘಗಳ ಲೆಕ್ಕಪರಿಶೋಧನಾ ವರದಿಗಳು.

ಸಂಘಗಳ ವೆಚ್ಚದ ಅಂಶಗಳನ್ನು ಗಮನಿಸಿದಾಗ ಶೇಕಡ ೭೨ ರಷ್ಟು ವೆಚ್ಚಗಳು, ಆಡಳಿತಾತ್ಮಕ ವೆಚ್ಚಗಳಾಗಿವೆ. ಅಂದರೆ ಬಂದ ವರಮಾನದಲ್ಲಿನ ಮುಕ್ಕಾಲು ಪಾಲು ಆಡಳಿತದ ಖರ್ಚಿಗೆ ಸರಿ ಹೋಗುತ್ತದೆ. ಅದು ಕೆಲವು ಸಂಘಗಳು ಉತ್ತಮವಾಗಿ ಕಾರ್ಯನಿರ್ವಹಿಸಿ ಹೆಚ್ಚಿನ ಆದಾಯ ಪಡೆಯುತ್ತಿರುವುದರಿಂದ ಸರಾಸರಿ ಈ ಶೇಕಡ ಪ್ರಮಾಣ ಸಿಕ್ಕಿದೆ. ೩ ಸಂಘಗಳನ್ನು ಹೊರತುಪಡಿಸಿದರೆ ಉಳಿದ ೨೧ ಸಂಘಗಳಲ್ಲಿ ಬಂದ ಎಲ್ಲ ವರಮಾನ ಆಡಳಿತ ವೆಚ್ಚಕ್ಕೆ ಸೀಮಿತವಾಗಿದೆ. ಕಾಮಗಾರಿ ವೆಚ್ಚಕ್ಕೆ ಯಾವುದೇ ಹಣ ಲಭ್ಯವಿಲ್ಲ. ೩ ಸಂಘಗಳು ಮಾತ್ರ ಕೆಲಮಟ್ಟಿದ ಕಾಮಗಾರಿ ವೆಚ್ಚಗಳು ಮಾಡುವಲ್ಲಿ ಯಶಸ್ವಿಯಾಗಿವೆ. ನಿಯಮದ ಪ್ರಕಾರ ಸಿಬ್ಬಂದಿ ವೆಚ್ಚವೂ ದುಡಿಮೆಯ ಬಂಡವಾಳದ ಶೇಕಡ ೨.೫ ರಷ್ಟಿರಬೇಕು. ಆದರೆ ಅದು ಶೇಕಡ ೪೫ ರಷ್ಟಿದೆ. ಅದೇ ರೀತಿ ಸಾದಿಲ್ವಾರು ವೆಚ್ಚ ಶೇಕಡ ೧ ರ ಮಿತಿಯಲ್ಲಿರಬೇಕು. ಅದು ಶೇಕಡ ೫ ರಷ್ಟಿದೆ. ಅನೇಕ ಸಂಘಗಳ ಲೆಕ್ಕ ಪರಿಶೋಧನೆ ವರದಿಗಳಲ್ಲಿ ನ್ಯೂನ್ಯತೆಗಳನ್ನು ಎತ್ತಿ ತೋರಿಸಲಾಗಿದೆ. ಈ ಬಗ್ಗೆ ಪುನರ್ ಪರಿಶೀಲನೆ ವರದಿಗಳನ್ನು ಸಲ್ಲಿಸುವಂತೆ ಸಲಹೆಗಳನ್ನು ನೀಡಲಾಗಿದೆ. ಬಹುತೇಕ ಸಂಘಗಳು ಆಡಳಿತಾತ್ಮಕ ವೆಚ್ಚಕ್ಕೂ ಸಾಲ ಮಾಡಿಕೊಂಡಿವೆ.

ಶೇಕಡ ೮೮ ರಷ್ಟು ಸಂಘಗಳ ಲೆಕ್ಕ ಪರಿಶೋಧನೆ ವರದಿಗಳಲ್ಲಿ ನಿವ್ವಳ ನಷ್ಟವನ್ನು ತೋರಿಸಿವೆ. ಈ ಕಾರಣದಿಂದ ಸಂಘಗಳ ಹಣಕಾಸಿನ ಪರಿಸ್ಥಿತಿ ತೀರ ಹದಗೆಟ್ಟಿದೆ. ಶೇಕಡ ೮ ರಷ್ಟು ಸಂಘಗಳ ಆರ್ಥಿಕ ಸ್ಥಿತಿ ಸಾಧಾರಣವಾಗಿದ್ದು, ಒಂದು ಸಂಘ ಮಾತ್ರ ಉತ್ತಮ ಸ್ಥಿತಿಯಲ್ಲಿದೆ. ಗುಣಾತ್ಮಕ ದೃಷ್ಟಿಯಿಂದ ಈ ಸಂಘವು ಶೇಕಡ ೫೦ ರಷ್ಟು ಹಣಕಾಸನ್ನು ವಿವಿಧ ಮೂಲಗಳಿಂದ ಸಂಗ್ರಹಿಸುತ್ತಿದೆ. ಉಳಿದಂತೆ ಶೇಕಡ ೫೦ ರಷ್ಟು ಮೂಲಗಳಿಂದ ಸಾಧನೆ ಶೂನ್ಯ.

## ೭.೫. ಸಂಘಗಳ ಮೂಲ ಸೌಕರ್ಯಗಳು ಮತ್ತು ಸೇವೆಗಳು

ನೀರು ಬಳಕೆದಾರರ ಸಂಘಗಳು ಸಕ್ರಿಯವಾಗಿ ಕಾರ್ಯ ನಿರ್ವಹಿಸಬೇಕಾದರೆ ಅವುಗಳಿಗೆ ಸೂಕ್ತ ಮೂಲ ಸೌಕರ್ಯಗಳು ಇರಬೇಕು. ಸಂಘಗಳು ದೈನಂದಿನ ಚಟುವಟಿಕೆಗಳನ್ನು ನಿರ್ವಹಿಸಲು ಒಂದು ಕಛೇರಿ, ಕಛೇರಿಯಲ್ಲಿ ಪೀಠೋಪಕರಣ, ದಾಸ್ತಾನು ವ್ಯವಸ್ಥೆ, ದಾಖಲೆ ಪುಸ್ತಕಗಳು, ದೂರವಾಣಿ, ಪರಿಚಾರಕ ಸಿಬ್ಬಂದಿಯನ್ನು ಒದಗಿಸಿಕೊಡಬೇಕು. ಈ ಎಲ್ಲಾ ಸೌಲಭ್ಯಗಳಿದ್ದಾಗ ಸಂಘಗಳು ಉತ್ತಮ ವಾತಾವರಣದಲ್ಲಿ ನಿಗದಿತ ಕಾರ್ಯಚಟುವಟಿಕೆಗಳನ್ನು ನೆರವೇರಿಸಲು ಸಾಧ್ಯ. ಆದರೆ ಅಧ್ಯಯನ ಕ್ಷೇತ್ರದ ಸಂಘಗಳಲ್ಲಿನ ವಾಸ್ತವ ಸ್ಥಿತಿಯೇ ಭಿನ್ನವಾಗಿದೆ. ೬ ಸಂಘಗಳು ಮಾತ್ರ ಸ್ವಂತ ಕಛೇರಿಗಳನ್ನು ಹೊಂದಿವೆ. ಉಳಿದಂತೆ ಶೇಕಡ ೮೮ ಸಂಘಗಳು ಕಾರ್ಯ ಚಟುವಟಿಕೆಗಳು ಆಯಾ ಗ್ರಾಮಗಳ ಶಾಲೆ, ಪಂಚಾಯಿತಿ ಕಛೇರಿ, ದೇವಾಲಯದ ಆವರಣ, ಇತರೆ ಸಂಘ ಸಂಸ್ಥೆಗಳಲ್ಲಿ ನಡೆಯುತ್ತವೆ. ಸಂಘದ ದಾಖಲೆ ಪುಸ್ತಕಗಳು ಪದಾಧಿಕಾರಿಗಳು ಇಲ್ಲವೆ ಕಾರ್ಯದರ್ಶಿಗಳ ಮನೆಯಲ್ಲಿರುತ್ತವೆ. ಇದರಿಂದ ಸಂಘಗಳ ದಿನನಿತ್ಯದ ಚಟುವಟಿಕೆಗಳಿಗೆ ತೊಂದರೆಯಾಗಿದೆ. ಆಡಳಿತ ಮಂಡಳಿ ಸಭೆಗಳು ಪ್ರತಿ ಮೂರು ತಿಂಗಳಿಗೊಮ್ಮೆ ನಡೆಯುವುದರಿಂದ ದಿನನಿತ್ಯ ಕಾರ್ಯಗಳಿಗೆ ಕಛೇರಿ ಅವಶ್ಯಕತೆಯಿಲ್ಲ ಎನ್ನುವ ಅಭಿಪ್ರಾಯ ಕಾರ್ಯದರ್ಶಿಗಳು ವ್ಯಕ್ತಪಡಿಸುತ್ತಾರೆ.

**ಸಂಘಗಳಲ್ಲಿರುವ ಮೂಲಭೂತ ಸೌಕರ್ಯಗಳ ಶೇಕಡಾ ಪ್ರಮಾಣ**

**ಕೋಷ್ಟಕ ೭.೮**

| ಕ್ರ.ಸಂ. | ವಿವರ | ಇರುವ ಮೂಲ ಸೌಕರ್ಯಗಳು | ಇರಬೇಕಾದ ಸೌಕರ್ಯಗಳು | ಅಂತರ |
|---|---|---|---|---|
| ೧. | ಸ್ವಂತ ಕಚೇರಿ | ೧೨.೦೦ | ೧೦೦ | ೮೮ |
| ೨. | ಪೀಠೋಪಕರಣಗಳು | ೨೪.೦೦ | ೧೦೦ | ೭೬ |
| ೩. | ಅಲಮಾರ ತಿಜೋರಿ | ೧೬.೦೦ | ೧೦೦ | ೮೪ |
| ೪. | ದಾಖಲು ಪುಸ್ತಕಗಳು | ೨೬.೩೧ | ೧೦೦ | ೭೩.೬೯ |
| ೫. | ಉಗ್ರಾಣ ವ್ಯವಸ್ಥೆ | ೧೨.೦೦ | ೧೦೦ | ೮೮ |
| ೬. | ದೂರವಾಣಿ ಸೌಲಭ್ಯ | ೦೦.೦೦ | ೧೦೦ | ೧೦೦ |
| ೭. | ಪರಿಚಾರಕರು | ೦೦.೦೦ | ೧೦೦ | ೧೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ.

ಮೂಲ ಸೌಕರ್ಯಗಳಲ್ಲಿ ನೀ.ಬ.ಸ.ಸಂಘಗಳು ಅತ್ಯಂತ ದುಸ್ಥಿತಿಯಲ್ಲಿವೆ. ಕೇವಲ ೩ ಸಂಘಗಳು ಮಾತ್ರ ಸ್ವಂತ ಕಛೇರಿಗಳನ್ನು ಹೊಂದಿವೆ. ಕಾಡಾದಿಂದ ಶೇಕಡ ೬೦ ರಷ್ಟು ಸಹಾಯಧನ ಸಂಘದ ಕಛೇರಿ ಕಂ ಉಗ್ರಾಣ ಕಟ್ಟಡಕ್ಕೆ ದೊರೆಯುತ್ತದೆ. ಈ ಬಗ್ಗೆ ಸಂಘ ಸ್ವಂತ ನಿವೇಶನವನ್ನು ಹೊಂದಿದ್ದು ಶೇ. ೪೦ ರಷ್ಟು ಹಣವನ್ನು ಸಂಗ್ರಹಿಸಿದರೆ ಯಾವುದೇ ತಡವಿಲ್ಲದೆ ಕಾಡಾ ಸಹಾಯಧನ ನೀಡಲು ಸಿದ್ಧವಿದೆ. ಆದರೂ ಸಂಘಗಳ ಸಾಂಸ್ಥಿಕ ಹಣಕಾಸಿನ ಅಸಮರ್ಥತೆಯಿಂದ ಶೇಕಡ ೮೮ ರಷ್ಟು ಸಂಘಗಳು ಇನ್ನು ಸ್ವಂತ ಕಛೇರಿ ಹೊಂದಿಲ್ಲ. ಪೀಠೋಪಕರಣಗಳನ್ನು ಹೊಂದುವಲ್ಲಿ ಸಂಘಗಳು ಸಮರ್ಥವಾಗಿಲ್ಲ. ದಾಖಲೆಗಳ ಸಂರಕ್ಷಣೆಗೆ ಅಗತ್ಯವಾದ ಅಲಮಾರ ಸೌಲಭ್ಯವೂ ಇನ್ನು ಸಂಪೂರ್ಣವಾಗಿ ಸಾಧ್ಯವಾಗಿಲ್ಲ. ನಿಯಮಗಳ ಪ್ರಕಾರ ಪ್ರತಿ ನೀ.ಬ.ಸ.ಸಂಘವೂ ಕನಿಷ್ಠ ೧೯ ದಾಖಲೆ ಪುಸ್ತಕಗಳನ್ನು ಹೊಂದಿವೆ. ಕೆಲವು ಸಂಘಗಳು ಕನಿಷ್ಠ ೨ ದಾಖಲೆ ಪುಸ್ತಕಗಳನ್ನು ಹೊಂದಿವೆ. ಒಟ್ಟಾರೆ ದಾಖಲೆ ಪುಸ್ತಕಗಳನ್ನು ಕನಿಷ್ಠ ಪ್ರಮಾಣದಲ್ಲಿ ಹೊಂದದೇ ಇರುವುದು ಅವುಗಳ ಕಾರ್ಯನಿರ್ವಹಣೆಯ ಅಸಮರ್ಥತೆಗೆ ಸಾಕ್ಷಿಯಾಗಿದೆ.

ಮೂರು ಸಂಘಗಳು ಕಛೇರಿ ಕಂ ಉಗ್ರಾಣಕ್ಕಾಗಿ ಸ್ವಂತ ಕಟ್ಟಡವನ್ನು ಹೊಂದಿವೆಯಾದರೂ ಈ ಕಟ್ಟಡಗಳು ಕೇವಲ ಕಛೇರಿ ಕೆಲಸಕ್ಕಾಗಿ ಮಾತ್ರ ಉಪಯೋಗವಾಗುತ್ತಿವೆ. ಉಗ್ರಾಣವಿದ್ದರೂ ಅದು ಯಾವ ಬಳಕೆಗೂ ಬರದೇ ಹಾಗೆಯೇ ಉಳಿದಿವೆ. ಉಳಿದಂತೆ ಕಛೇರಿಗೆ ಯಾವುದೇ ನೀ.ಬ.ಸ.ಸಂಘ ದೂರವಾಣಿ ಸೌಲಭ್ಯ ಹೊಂದಿಲ್ಲ. ಕಛೇರಿಯ ಇತರೇ ಕೆಲಸ ಕಾರ್ಯಗಳಿಗೆ ಪರಿಚಾರಕರನ್ನು ಯಾವ ಸಂಘವೂ ನೇಮಿಸಿಕೊಂಡಿಲ್ಲ. ನೀ.ಬ.ಸ.ಸಂಘಗಳ ಕಛೇರಿಗಳು ದಿನನಿತ್ಯ ತೆರೆದಿರುವುದಿಲ್ಲ. ಅದರ ಅಗತ್ಯವೂ ಆಡಳಿತ ಮಂಡಳಿಗೆ ಇದ್ದಂತಿಲ್ಲ.

ಉಗ್ರಾಣಗಳನ್ನು ಉಪಯುಕ್ತವಾಗಿ ಬಳಕೆ ಮಾಡಿಕೊಳ್ಳಲು ಸಂಘಗಳು ತಮ್ಮ ಮೂಲ ಉದ್ದೇಶಗಳಲ್ಲಿ ಹಲವು ಸಂಗತಿಗಳನ್ನು ಇಟ್ಟುಕೊಂಡಿವೆ. ಅಚ್ಚುಕಟ್ಟುದಾರರಿಗೆ ಅಗತ್ಯವಾದ ಕೃಷಿ ಉಪಕರಣ, ಯಂತ್ರಗಳನ್ನು ಬಾಡಿಗೆಗೆ ನೀಡುವುದು, ಬಿತ್ತನೆ ಬೀಜ, ರಸಗೊಬ್ಬರ, ಕ್ರಿಮಿನಾಶಕಗಳನ್ನು ಒದಗಿಸುವ ಉದ್ದೇಶಗಳನ್ನು ಹೊಂದಿದೆ. ಆದರೆ ಯಾವುದೇ ನೀ.ಬ.ಸ.ಸಂಘ ಈ ನಿಟ್ಟಿನಲ್ಲಿ ಇನ್ನೂ ಪ್ರಯತ್ನಪಟ್ಟಿಲ್ಲ. ಆದಾಯ ಗಳಿಕೆಗೆ ಇದೊಂದು ಸೂಕ್ತ ಕ್ರಮವೆಂದು ಪರಿಗಣಿಸಲಾಗಿದೆ. ಆದರೆ ಮೂಲ ಬಂಡವಾಳದ ಕೊರತೆಯನ್ನು ಅನುಭವಿಸುತ್ತಿರುವ ಸಂಘಗಳು ಬೃಹತ್ ಬಂಡವಾಳ ಬೇಡುವ ಈ ಮೇಲ್ಕಂಡ ಚಟುವಟಿಕೆಗಳನ್ನು ಆರಂಭಿಸಿಲ್ಲ.

### ೭.೫.೧. ಅಚ್ಚುಕಟ್ಟು ಪ್ರದೇಶದ ಮೂಲ ಸೌಕರ್ಯಗಳ ಸ್ಥಿತಿಗತಿ

ನೀರಾವರಿ ಇಲಾಖೆಯ ಉಸ್ತುವಾರಿಯಲ್ಲಿದ್ದ ಅಚ್ಚುಕಟ್ಟು ಪ್ರದೇಶ ಒಡಂಬಡಿಕೆ ಒಪ್ಪಂದದ ನಂತರ ನೀ.ಬ.ಸ.ಸಂಘಗಳ ನಿಯಂತ್ರಣಕ್ಕೆ ಬಂದಿದೆ. ಜಲಾಶಯದ ನಿರ್ಮಾಣದ ನಂತರ ಕೇವಲ ಒಮ್ಮೆ ಮಾತ್ರ ದುರಸ್ತಿ ಕಂಡಿರುವ ಅಚ್ಚುಕಟ್ಟು ಪ್ರದೇಶ. ಆನಂತರ ಇಲ್ಲಿಯತನಕ ಯಾವುದೇ

ಉನ್ನತೀಕರಣದ ಚಟುವಟಿಕೆಗಳು ನಡೆದಿಲ್ಲ. ಅಚ್ಚುಕಟ್ಟು ಪ್ರದೇಶದ ಎಲ್ಲ ಬಗೆಯ ಮುಖ್ಯ ಕಾಲುವೆಗಳು, ವಿತರಣಾನಾಲೆಗಳು, ಉಪಕಾಲುವೆಗಳು, ಹೊಲಗಾಲುವೆಗಳು, ಬಸಿಗಾಲುವೆಗಳು, ಕಟ್ಟಡಗಳು, ರಚನೆಗಳು, ತೂಬುಗಳು ಆಯಕಟ್ಟಿನ ರಸ್ತೆಗಳು ಶಿಥಿಲಾವಸ್ಥೆಯನ್ನು ತಲುಪಿವೆ. ಒಪ್ಪಂದದ ಪ್ರಕಾರ ಏಕಗಂಟಿನಲ್ಲಿ ಈ ಎಲ್ಲವುಗಳನ್ನು ದುರಸ್ತಿಗೊಳಿಸಬೇಕೆಂಬ ನಿಯಮವಿದ್ದರೂ, ನೀರಾವರಿ ಇಲಾಖೆ ಹಣಕಾಸಿನ ಕೊರತೆಯಿಂದ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಇದರಿಂದ ಅಚ್ಚುಕಟ್ಟು ಪ್ರದೇಶದ ರೈತರಲ್ಲಿ ಒಂದು ರೀತಿಯ ಉದಾಸೀನತೆ ಉಂಟಾಗಿದೆ. ಪರಿಣಾಮವಾಗಿ ಸಂಘಗಳಲ್ಲಿ ಸದಸ್ಯತ್ವ ಪಡೆಯಲು ಇಚ್ಛಿಸುತ್ತಿಲ್ಲ. ಸದಸ್ಯತ್ವ ಪಡೆದಿರುವವರಿಗೂ ಹೆಚ್ಚಿನ ತೃಪ್ತಿಯಿಲ್ಲ.

ಸಂಘಗಳು ಸಾಂಸ್ಥಿಕ ಹಣಕಾಸನ್ನು ಕ್ರೋಢೀಕರಿಸುವಲ್ಲಿ ಅಸಮರ್ಥವಾಗಿರುವುದರಿಂದ ದುಸ್ಥಿತಿಯಲ್ಲಿರುವ ಕಾಲುವೆ ಜಾಲವನ್ನು ಉತ್ತಮಪಡಿಸಿಕೊಳ್ಳಲು ಸಾಧ್ಯವಾಗಿಲ್ಲ. ಸಂಘಗಳು ಅಚ್ಚುಕಟ್ಟು ಪ್ರದೇಶದ ಕಾಲುವೆ ಜಾಲ ಮತ್ತು ಇನ್ನಿತರ ಮೂಲ ಸೌಕರ್ಯಗಳನ್ನು ಸುಸ್ಥಿತಿಗೆ ತರದೇ ಇದ್ದರೆ ಕೆಳತುದಿ ರೈತರಿಗೆ ಸಾಕಷ್ಟು ನೀರು ಪೂರೈಸಲು ಸಾಧ್ಯವಿಲ್ಲ. ನೀರಿನ ಅಪಬಳಕೆಯನ್ನು ನಿಲ್ಲಿಸುವುದು ಕಷ್ಟ. ಒಟ್ಟಾರೆ ನೀ.ಬ.ಸ.ಸಂಘಗಳ ಮೂಲ ಗುರಿ ತನ್ನ ವ್ಯಾಪ್ತಿಯ ಕಾಲುವೆ ಜಾಲವನ್ನು ಸುವ್ಯವಸ್ಥಿತವಾಗಿಟ್ಟುಕೊಳ್ಳುವುದಾಗಿದೆ. ಶೇಕಡ ೯೬ ರಷ್ಟು ಸಂಘಗಳು ಈ ನಿಟ್ಟಿನಲ್ಲಿ ಯಾವ ಪ್ರಯತ್ನವನ್ನು ಮಾಡಿಲ್ಲ. ಹಣಕಾಸಿನ ಸಬಲೀಕರಣವಿಲ್ಲದೆ ಇಂತಹ ಕಾಮಗಾರಿಗಳನ್ನು ಕೈಗೊಳ್ಳುವುದು ಅಸಾಧ್ಯದ ಮಾತು ಎನ್ನುತ್ತಾರೆ. ಪದಾಧಿಕಾರಿಗಳು ಅವ್ಯವಸ್ಥೆಯನ್ನು ಸರಿಪಡಿಸದೇ ಅಚ್ಚುಕಟ್ಟುದಾರರ ವಿಶ್ವಾಸವನ್ನು ಗಳಿಸಲು ಸಾಧ್ಯವಿಲ್ಲ. ಈ ವಿಶ್ವಾಸದ ಕೊರತೆಯಿಂದಲೇ ಸಂಘಗಳು ಸದಸ್ಯತ್ವವನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗದಿರುವುದು. ಅತಿ ಮುಖ್ಯ ಉದ್ದೇಶವನ್ನು ಈಡೇರಿಸುವಲ್ಲಿ ಸಂಘಗಳು ಸಂಪೂರ್ಣ ವಿಫಲವಾಗಿವೆ. ಈ ವೈಫಲ್ಯದಿಂದ ಸಂಘಗಳ ಕಾರ್ಯಸಾಧನೆ ಶೂನ್ಯವೆನ್ನುವಂತಾಗಿದೆ.

**ಸಂಘಗಳು ಕೈಗೊಂಡಿರುವ ವಿವಿಧ ಕಾಮಗಾರಿಗಳ ಶೇ. ಪ್ರಮಾಣ**

**ಕೋಷ್ಟಕ ೭.೯**

| ಕ್ರ.ಸಂ. | ವಿವರ | ಮಾಡಿರುವ ಸಾಧನೆ | ಮಾಡಬೇಕಾದ ಸಾಧನೆ | ಅಂತರ |
|---|---|---|---|---|
| ೧. | ಹೊಲಗಾಲುವೆಗಳ ದುರಸ್ತಿ | ೨೧.೦೦ | ೧೦೦.೦೦ | ೭೯.೦೦ |
| ೨. | ಬಸಿಗಾಲುವೆಗಳ ದುರಸ್ತಿ | ೦೬.೦೦ | ೧೦೦.೦೦ | ೯೪.೦೦ |
| ೩. | ಕಾಲುವೆಗಳಲ್ಲಿ ಹೂಳು ತೆಗೆಯುವಿಕೆ | ೨೮.೦೦ | ೧೦೦.೦೦ | ೭೨.೦೦ |
| ೪. | ಕಾಲುವೆಗಳ ಸ್ವಚ್ಛೀಕರಣ | ೩೧.೦೦ | ೧೦೦.೦೦ | ೬೯.೦೦ |
| ೫. | ಆಯಕಟ್ಟಿನ ರಸ್ತೆಗಳ ದುರಸ್ತಿ | ೦೫.೦೦ | ೧೦೦.೦೦ | ೯೫.೦೦ |
| ೬. | ತೂಬುಗಳ ದುರಸ್ತಿ | ೦೮.೦೦ | ೧೦೦.೦೦ | ೯೨.೦೦ |
| ೭. | ನೀರಿನ ನಿಯಂತ್ರಕಗಳ ಅಳವಡಿಕೆ | ೦೯.೦೦ | ೧೦೦.೦೦ | ೯೧.೦೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ.

ಕೋಷ್ಟಕ ೭.೯ರಲ್ಲಿ ಸಂಘಗಳು ಅಚ್ಚುಕಟ್ಟು ಪ್ರದೇಶವಲ್ಲಿ ಕೈಗೊಂಡಿರುವ ವಿವಿಧ ರೀತಿಯ ಕಾಮಗಾರಿಗಳ ಸರಾಸರಿ ಶೇಕಡವಾರು ಪ್ರಮಾಣವನ್ನು ತೋರಿಸಲಾಗಿದೆ. ಕೇವಲ ೪ ಸಂಘಗಳು ಈ ಕಾಮಗಾರಿಗಳಲ್ಲಿ ಹೆಚ್ಚಿನ ಸಾಧನೆ ಮಾಡಿರುವುದರಿಂದ ಸರಾಸರಿ ಪ್ರಮಾಣದಲ್ಲಿ ಕೆಲಮಟ್ಟಿನ ಸಾಧನೆ ಕಂಡುಬರುತ್ತದೆ. ಉಳಿದ ೨೧ ಸಂಘಗಳು ನೀರು ಸಂಗ್ರಹ ಮತ್ತು ಇತರೆ ಅಭಿವೃದ್ಧಿ ವಂತಿಗೆಗಳನ್ನು ವಸೂಲಿ ಮಾಡದೇ ಇರುವುದರಿಂದ ಇಂತಹ ಯಾವುದೇ ಕಾಮಗಾರಿಗಳನ್ನು ಕೈಗೊಂಡಿಲ್ಲ. ಈ ಸಂಘಗಳ ವ್ಯಾಪ್ತಿಯಲ್ಲಿನ ಕಾಮಗಾರಿಗಳನ್ನು ನೀರಾವರಿ ಇಲಾಖೆಯೇ ನಿರ್ವಹಿಸುತ್ತಿದೆ. ಒಡಂಬಡಿಕೆ ಒಪ್ಪಂದ ಮಾಡಿಕೊಂಡಿರುವ ಸಂಘಗಳಿದ್ದರೂ ಕಾಮಗಾರಿಗಳು ಇನ್ನು ಜಲಸಂಪನ್ಮೂಲ ಇಲಾಖೆಯಲ್ಲಿಯೆ ಇರುವುದು ಸಂಘಗಳ ಕಾರ್ಯನಿರ್ವಹಣೆ ಅಡ್ಡಿಯಾಗಿದೆ. ಜಲಸಂಪನ್ಮೂಲ ಇಲಾಖೆ ಕಾಮಗಾರಿಗಳನ್ನು ಕೈಗೊಳ್ಳುವಾಗ ಕನಿಷ್ಠ ನೀ.ಬ.ಸ.ಸಂಘಗಳನ್ನು ಪರಿಗಣಿಸದೇ ಇರುವುದು ಒಂದು ಸಮಸ್ಯೆಯಾಗಿದೆ. ಅಧಿಕಾರಿ ವರ್ಗ ತಮ್ಮ ಹಿಡಿತದಲ್ಲಿ ಎಲ್ಲ ಕಾರ್ಯಗಳು ನಡೆಯಬೇಕೆಂಬ ಧೋರಣೆಯನ್ನು ಹೊಂದಿರುವುದು ವಿಕೇಂದ್ರೀಕರಣಕ್ಕೆ ದೊಡ್ಡ ತೊಡಕಾಗಿದೆ. ನೀರಾವರಿ ಇಲಾಖೆಯ ಆದ್ಯತೆಯ ಮೇಲೆ ಕಾಮಗಾರಿಗಳನ್ನು ಕೈಗೊಳ್ಳುವುದಿಲ್ಲ. ಈಗಾಗಲೇ ಹಿಂದಿನ ವರ್ಷ ಮಾಡಿದ ಕಾಮಗಾರಿಯನ್ನೇ ಮತ್ತೆ ದುರಸ್ತಿಗೊಳಿಸಿದಂತೆ ಮಾಡಿ ಹೆಚ್ಚಿನ ಲಾಭ ಪಡೆಯುತ್ತಾರೆ ಎನ್ನುವ ಆರೋಪ ಕೇಳಿಬರುತ್ತದೆ. ಹಲವಾರು ಕಾಮಗಾರಿಗಳು ಪ್ರಭಾವಿ ಜನರ ಭೂಮಿ ಇರುವ ಕಡೆಗಳಲ್ಲೇ ನಡೆಯುತ್ತವೆ ಎಂದು ಸಂಘಗಳ ಪದಾಧಿಕಾರಿಗಳು ಆಪಾದನೆ ಮಾಡುತ್ತಾರೆ. ಇದು ರೈತರ ಅತೃಪ್ತಿಗೆ ಕಾರಣವಾಗಿದೆ.

ಹೊಸಹಳ್ಳಿ ಸಂಘ ಮಾತ್ರ ತನ್ನ ವ್ಯಾಪ್ತಿಯ ಅಚ್ಚುಕಟ್ಟು ಪ್ರದೇಶದ ಕಾಲುವೆ ಜಾಲವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳುವಲ್ಲಿ ಕೆಲಮಟ್ಟಿನ ಸಾಧನೆ ಮಾಡಿದೆ. ನೀರಾವರಿ ಅಧಿಕಾರಿಗಳಿಗೆ ಅವಕಾಶ ಕೊಡದೇ ತಾವೇ ಕಾಮಗಾರಿಗಳನ್ನು ಹೆಚ್ಚಿನ ಗುಣಮಟ್ಟದಲ್ಲಿ ಹಾಗೂ ಕಡಿಮೆ ವೆಚ್ಚದಲ್ಲಿ ಪೂರ್ಣಗೊಳಿಸಿ ಕೊಂಡಿದೆ. ಆಯಾ ಪ್ರದೇಶದ ರೈತರಿಂದಲೇ ಹಣ ಸಂಗ್ರಹಿಸಿ ಅಲ್ಲಿನ ವ್ಯವಸ್ಥೆಯನ್ನು ದುರಸ್ತಿಗೊಳಿಸಿದೆ. ರೈತರ ಶ್ರಮದಾನದ ಮೂಲಕ ಕಾಲುವೆಗಳಲ್ಲಿನ ಹೂಳು ಮತ್ತು ಕಸಕಡ್ಡಿಯನ್ನು ತೆಗೆಯಲಾಗಿದೆ.

### ೭.೬. ಸಂಘಗಳ ನೀರಾವರಿ ನಿರ್ವಹಣೆ

ನೀರಿನ ಅಪಬಳಕೆಯನ್ನು ತಡೆಗಟ್ಟಿ ಸಂಬಂಧಿಸಿದ ಎಲ್ಲ ಫಲಾನುಭವಿಗಳಿಗೆ ನ್ಯಾಯಬದ್ಧವಾಗಿ ನೀರನ್ನು ಪೂರೈಕೆ ಮಾಡುವುದೇ ನೀ.ಬ.ಸ.ಸಂಘಗಳ ಅತೀ ಮುಖ್ಯವಾದ ಗುರಿ. ಜಲಾಶಯದ ನೀರಿನ ಸಂಗ್ರಹವನ್ನು ಆಧರಿಸಿ ತಮ್ಮ ಸಂಘದ ಪಾಲಿಗೆ ದೊರೆಯಬಹುದಾದ ಜಲವನ್ನು ಅದರ ಎಲ್ಲ ವಾರಸುದಾರರಿಗೆ ತಾರತಮ್ಯ ರಹಿತವಾಗಿ ವಿತರಣೆ ಮಾಡಬೇಕು. ಜಲಾಶಯದ ನೀರಿನ ಜೊತೆಗೆ ತಮ್ಮ ಸಂಘದ ವ್ಯಾಪ್ತಿಯಲ್ಲಿರುವ ಸಮತೋಲನ ಕೆರೆಗಳಲ್ಲಿ ಸಂಗ್ರಹವಾಗುವ ನೀರನ್ನು ಮತ್ತು ಲಭ್ಯವಾಗುವ ಅಂತರ್ಜಲವನ್ನು ಸೂಕ್ತವಾಗಿ ಬಳಕೆ ಮಾಡಿಕೊಳ್ಳುವ ಹೊಣೆಗಾರಿಕೆ ಸಂಘಗಳ ಮೇಲಿದೆ. ಇದರೊಂದಿಗೆ

ವಾರಬಂದಿ ಪಾಲನೆ, ಬೆಳೆಯ ಮಾದರಿಯ ಪಾಲನೆಯನ್ನು ಅಚ್ಚುಕಟ್ಟುದಾರರು ಕಟ್ಟುನಿಟ್ಟಾಗಿ ಅನುಸರಿಸುವಂತೆ ನೋಡಿಕೊಳ್ಳಬೇಕು. ಆಗ ಸಂಘದ ವ್ಯಾಪ್ತಿಯ ಎಲ್ಲ ರೈತರಿಗೆ ನ್ಯಾಯಸಮ್ಮತ ನೀರನ್ನು ಪೂರೈಕೆ ಮಾಡಲು ಸಾಧ್ಯ. ಈ ಕ್ರಮವನ್ನು ಅನುಸರಿಸದೇ ಇರುವುದರಿಂದ ಪ್ರಸ್ತುತ ಅಸ್ತಿತ್ವದಲ್ಲಿರುವ ನೀ.ಬ.ಸ.ಸಂಘಗಳು ಯಾವುದೇ ಗಮನಾರ್ಹವಾದ ಸಾಧನೆ ಮಾಡಿಲ್ಲ.

**ಸಂಘಗಳ ನೀರಿನ ಮಿತಬಳಕೆಯ ಪ್ರಮಾಣ**

**ಕೋಷ್ಟಕ ೭.೧೦**

| ಕ್ರ.ಸಂ. | ವಿವರ | ಮಿತ ಬಳಕೆ ಶೇ. ಪ್ರಮಾಣ | ಮಾಡಬೇಕಾದ ಶೇ. ಪ್ರಮಾಣ | ಅಂತರ ಶೇ.ಪ್ರಮಾಣ |
|---|---|---|---|---|
| ೧. | ನೀರಿನ ಮಿತ ಬಳಕೆ | ೧೬.೦೦ | ೧೦೦.೦೦ | ೮೪.೦೦ |
| ೨. | ಬೆಳೆ ಮಾದರಿ ಅಳವಡಿಕೆ | ೦೦.೦೦ | ೧೦೦.೦೦ | ೧೦೦.೦೦ |
| ೩. | ಕೆರೆ ನೀರಿನ ಸದುಪಯೋಗ | ೧೨.೦೦ | ೧೦೦.೦೦ | ೮೮.೦೦ |
| ೪. | ಅಂತರ್ಜಲ ಬಳಕೆ | ೩೮.೦೦ | ೧೦೦.೦೦ | ೬೨.೦೦ |
| ೫. | ವಾರಬಂದಿ ಪಾಲನೆ | ೦೦.೦೦ | ೧೦೦.೦೦ | ೧೦೦.೦೦ |

**ಮೂಲ : ಕ್ಷೇತ್ರಕಾರ್ಯ ಮಾಹಿತಿ.**

ನೀರಿನ್ನು ಮಿತಬಳಕೆ ಮಾಡುವಲ್ಲಿ ಯಾವುದೇ ಸಂಘಗಳು ಸಂಪೂರ್ಣವಾಗಿ ಯಶಸ್ವಿಯಾಗಿಲ್ಲ. ಒಟ್ಟಾರೆ ಸಂಘಗಳ ಸರಾಸರಿ ಸಾಧನೆ ಅತ್ಯಲ್ಪ. ಬೆಳೆಮಾದರಿ ಮತ್ತು ವಾರಾಬಂದಿ ಪಾಲನೆಯಲ್ಲಿ ನಿಷ್ಕೃಷ್ಟ ಸ್ಥಿತಿಯಲ್ಲಿವೆ. ಕೆಲಮಟ್ಟಿಗೆ ಕೆರೆಗಳ ನೀರನ್ನು ಬಳಕೆ ಮಾಡಿಕೊಳ್ಳಲಾಗುತ್ತಿದೆ. ಆದರೂ ಅದರ ಪ್ರಮಾಣ ಅತಿ ಕಡಿಮೆ ಮಟ್ಟದಲ್ಲಿದೆ. ಅಂತರ್ಜಲದ ಬಳಕೆಗೆ ಹೆಚ್ಚಿನ ರೈತರು ಒಲವು ತೋರುತ್ತಿಲ್ಲ. ಅಧಿಕೃತ ರೈತರು ಕಾಲುವೆಯ ಕೊನೆಭಾಗದಲ್ಲಿ ನೀರಿನ ತೀವ್ರ ಕೊರತೆ ಎದುರಾದಾಗ ಅನಿವಾರ್ಯವಾಗಿ ಅಂತರ್ಜಲ ಬಳಕೆ ಮಾಡುತ್ತಾರೆ.

ಅಂತರ್ಜಲ ಬಳಕೆಗೆ ಹೆಚ್ಚಿನ ವೆಚ್ಚ ತಗಲುತ್ತದೆ. ಈ ಬಗ್ಗೆ ಸರಕಾರದಿಂದಲೂ ಯಾವುದೇ ನೆರವು ದೊರೆಯದ ಕಾರಣ ಯಾವುದೇ ರೈತರು ಅದರ ಬಳಕೆಗೆ ಒಲವು ತೋರುವುದಿಲ್ಲ. ಹೀಗೆ ಜಲದ ಸಂಯೋಜಿತ ಬಳಕೆಗೆ ಹೆಚ್ಚಿನ ಅವಕಾಶವಿಲ್ಲದಂತಾಗಿದೆ. ಕೆರೆಗಳು ಹೂಳು ತುಂಬಿಕೊಂಡಿವೆ. ಈ ಸಮಸ್ಯೆ ಇಂದು ನಿನ್ನೆಯದಲ್ಲ ಅನೇಕ ವರ್ಷಗಳಿಂದ ಒತ್ತುವರಿ ಮತ್ತು ಹೂಳಿನ ಸಮಸ್ಯೆ ಕಡೆಗೆ ಸರಕಾರ ಮತ್ತು ಸಂಬಂಧಿಸಿದ ಇಲಾಖೆಗಳು ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಈಗ ಇಂತಹ ತೊಡಕುಗಳನ್ನು ನೀ.ಬ.ಸ.ಸಂಘ ನಿವಾರಿಸುವಷ್ಟು ಸಬಲೀಕರಣಗೊಂಡಿಲ್ಲ. ಸರಕಾರವೇ ಅಕ್ರಮ ಒತ್ತುವರಿಯನ್ನು ತೆರವುಗೊಳಿಸದೇ ಇರುವಾಗ ಸಂಘ ಯಾವ ಬಗೆಯಲ್ಲಿ ಬಿಕ್ಕಟ್ಟನ್ನು ಪರಿಹರಿಸಬಲ್ಲದು

ಸಿಂಬದೇ ಎಲ್ಲಾ ಪದಾಧಿಕಾರಿಗಳ ಪ್ರಶ್ನೆಯಾಗಿದೆ. ತಮ್ಮ ಕೈಯಲ್ಲಿ ಸಾಧ್ಯವಾಗದ ಕಾರ್ಯಗಳನ್ನು ಸರಕಾರ ಪೀ.ಬ.ಸ. ಸಂಘಗಳಿಗೆ ವರ್ಗಾಯಿಸಿದೆ ಎಂದು ತಮ್ಮ ಅಸಹಾಯಕತೆಯನ್ನು ಪದಾಧಿಕಾರಿಗಳು ತೋಡಿಕೊಳ್ಳುತ್ತಾರೆ. ಯೋಜನೆಯ ಆರಂಭದಿಂದಲೂ ಬೆಳೆಯ ಮಾದರಿ ಮತ್ತು ಸರದಿ ಉಲ್ಲಂಘನೆ ಯಾಗಿದ್ದು, ಪ್ರಸ್ತುತ ಸಂಘಗಳು ಈ ನಿಟ್ಟಿನಲ್ಲಿ ಯಾವುದೇ ಕ್ರಮ ತೆಗೆದುಕೊಳ್ಳುವ ಸ್ಥಿತಿಯಲ್ಲಿಲ್ಲ. ರೈತರು ತಮಗೆ ಸುಲಭವೆನಿಸಿದ ಮತ್ತು ಲಾಭ ತರುವ ಬೆಳೆಗಳನ್ನು ಬೆಳೆಯಲು ಸ್ವತಂತ್ರರಾಗಿದ್ದಾರೆ. ಅವರ ಇಚ್ಛೆಯನ್ನು ಬದಲಾಯಿಸಲು ಸಾಧ್ಯವಿಲ್ಲ ಎನ್ನುವುದು ಬಹುತೇಕ ಸದಸ್ಯರ ಅಭಿಪ್ರಾಯ.

ವಾರಬಂದಿ ಪಾಲನೆಯ ಬಗ್ಗೆ ರೈತರಿಗೆ ಹೆಚ್ಚಿನ ತಿಳುವಳಿಕೆಯಿಲ್ಲ. ಹಿಂದೆ ನೀರುಗಂಟಿಗಳು ಮತ್ತು ನೀರಾವರಿ ಇಂಜಿನಿಯರ್‌ಗಳೇ ವಾರಬಂದಿಯನ್ನು ಪಾಲಿಸುತ್ತಿದ್ದರು. ಆಗಲೂ ರೈತರು ಅದಕ್ಕೆ ತಕ್ಕ ಹಾಗೆ ನಡೆದುಕೊಳ್ಳುತ್ತಿರಲಿಲ್ಲ. ತಮ್ಮ ಇಚ್ಛೆ ಅನುಸಾರ ಬೇಕಾದಷ್ಟು ಪ್ರಮಾಣದಲ್ಲಿ ಅಗತ್ಯವಾದಷ್ಟು ಸಮಯ ನೀರನ್ನು ಹರಿಸಿಕೊಳ್ಳುತ್ತಿದ್ದರು. ಸರಕಾರದ `ಮೃದು` ಧೋರಣೆಯಿಂದಾಗಿ ಬೆಳೆ ಮಾದರಿ ಮತ್ತು ವಾರಬಂದಿ ಉಲ್ಲಂಘನೆಯಾಗುತ್ತಿದೆ. ಇದರಿಂದ ಮುಂಚೂಣಿ ಭಾಗದಲ್ಲಿ ಅತಿಯಾದ ನೀರಿನ ಬಳಕೆಯಿಂದ ಭೂಮಿ, ಜೌಗು, ಸವಳು ಮತ್ತು ಲವಣೆಯತೆಗೆ ಗುರಿಯಾಗುತ್ತಿದೆ. ಪರಿಣಾಮವಾಗಿ ಕೊನೆಯ ಭಾಗದ ರೈತರಿಗೆ ನೀರಿನ ಲಭ್ಯತೆಯಿಲ್ಲದಂತಾಗಿದೆ. ಈ ನಿಟ್ಟಿನಲ್ಲಿ ಹೊಸ ಬಗೆಯ ಬೆಳೆಯ ಮಾದರಿ ಮತ್ತು ನೀರಿನ ಸರದಿಯನ್ನು ಸಂಘಗಳೇ ನಿರ್ಧಾರ ಮಾಡುವ ಅಧಿಕಾರ ಹೊಂದಿವೆ. ಆದರೂ ಯಾವುದೇ ಸಂಘ ಈ ಕುರಿತು ಕ್ರಮ ತೆಗೆದುಕೊಂಡಿಲ್ಲ.

## ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿ ಬೆಳೆ ಮಾದರಿ ಉಲ್ಲಂಘನೆ

**ಕೋಷ್ಟಕ ೭.೧೧**

| ವಿವಿಧ ಬೆಳೆಗಳು | ಮುಂಗಾರು | | | | ಹಿಂಗಾರು | | | |
|---|---|---|---|---|---|---|---|---|
| | ಅಧಿಸೂಚಿತ | ಶೇ. | ರೈತರ ಅನುಸರಣೆ | ಶೇ. | ಅಧಿಸೂಚಿತ | ಶೇ. | ರೈತರ ಅನುಸರಣೆ | ಶೇ. |
| ಭತ್ತ | ೪೦,೦೦೦ | ೩೭.೮೮ | ೬೨,೮೦೭ | ೬೫.೭೧ | ೭,೦೦೦ | ೬.೮೨ | ೫೭,೪೪೦ | ೬೨.೯೨ |
| ಕಬ್ಬು | ೧೨,೦೦೦ | ೧೧.೩೬ | ೧೦,೬೯೪ | ೧೧.೧೮ | ೧೧,೫೨೮ | ೧೧.೨೪ | ೧೨,೩೫೯ | ೧೩.೫೩ |
| ತೋಟಗಾರಿಕೆ | ೨,೪೩೬ | ೨.೩೦ | ೧೧,೭೪೫ | ೧೨.೨೮ | ೨,೦೧೨ | ೧.೯೬ | ೧೧,೬೯೫ | ೧೨.೮೧ |
| ಅರೆನೀರಾವರಿ | ೫೧,೧೩೪ | ೪೮.೪೩ | ೧೦,೩೨೪ | ೧೦.೮೦ | ೮೧,೯೬೪ | ೭೯.೯೬ | ೯,೭೮೮ | ೧೦.೭೨ |
| ಒಟ್ಟು | ೧,೦೫,೫೭೦ | ೧೦೦ | ೯೫,೫೭೧ | ೧೦೦ | ೧,೦೨,೫೦೪ | ೧೦೦ | ೯೧,೫೮೨ | ೧೦೦ |

ಮೂಲ : ನೀರಾವರಿ ಇಲಾಖೆ. ಭದ್ರಾ ಜಲಾಶಯ ಯೋಜನೆ, ೧೯೯೮, ಬಿ.ಆರ್.ಪ್ರಾಜೆಕ್ಟ್, ಶಿವಮೊಗ್ಗ

ಕೋಷ್ಟಕ ೭.೧೧ ಅನ್ನು ಗಮನಿಸಿದಾಗ ರೈತರು, ತಜ್ಞರು ಅಥವಾ ನೀರಾವರಿ ನಿರ್ವಹಣೆ, ಬೆಳೆ ಮಾದರಿಗಳನ್ನು ರೂಪಿಸುವ ಸರ್ಕಾರದ ನೀರಾವರಿ ಇಲಾಖೆ ಮತ್ತು ಕೃಷಿ ಇಲಾಖೆಯ ಪರಿಣಿತರ ಮಾರ್ಗದರ್ಶಕ ಸೂತ್ರಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿರುವುದು ಸ್ಪಷ್ಟವಾಗುತ್ತದೆ. ಮುಖ್ಯವಾಗಿ ಬೆಳೆಯ ಮಾದರಿಯ ಉಲ್ಲಂಘನೆಯಿಂದ ಯಾರಿಗೆ ನೀರು ದೊರೆಯಬೇಕಾಗಿತ್ತೋ ಅಂತಹವರಿಗೆ ನೀರು ದೊರೆಯುತ್ತಿಲ್ಲ. ಅಂದರೆ ಕೆಲವು ರೈತರ ಜಮೀನು ಕಾಲುವೆಯ ಮೇಲ್ತುದಿಯಲ್ಲಿರುವ ಕಾರಣಕ್ಕೆ ಹೆಚ್ಚು ನೀರು ಪಡೆಯುತ್ತವೆ. ಮತ್ತೆ ಕೆಲವು ರೈತರ ಜಮೀನು ಕಾಲುವೆಯ ಕೆಳತುದಿಯಲ್ಲಿರುವುದರಿಂದ ನೀರು ಪಡೆಯುವುದಿಲ್ಲವೆಂದಾಗುತ್ತದೆ. ಇದು ನೀರಾವರಿ ಯೋಜನೆಯ ಮೂಲ ಆಶಯವನ್ನೇ ಬಲಿ ಕೊಟ್ಟಂತಾಗುತ್ತದೆ. ಇದು ಅಂತಿಮವಾಗಿ ಪ್ರಾದೇಶಿಕ ಅಸಮಾನತೆಗೆ ಕಾರಣವಾಗುತ್ತದೆ. ಸಾಮಾಜಿಕ ನ್ಯಾಯದ ಸಮಾನ ಹಂಚಿಕೆಗೆ ಇದು ಸಂಚಕಾರ ತರುತ್ತದೆ.

## ಭತ್ತದ ಬೆಳೆಯಲ್ಲಿ ಕಾಲುವೆಯ ವಿವಿಧ ರೈತರು ಬಳಸುವ ನೀರಿನ ಪ್ರಮಾಣ ಮತ್ತು ಅದರ ಸಾಮಾಜಿಕ ವೆಚ್ಚ

**ಕೋಷ್ಟಕ ೭.೧೨**

| ಕಾಲುವೆ ಭಾಗ | ಭತ್ತ ಬೆಳೆಗೆ ಶಿಫಾರಸ್ಸು ಮಾಡಿರುವ ನೀರಿನ ಬಳಕೆ ಪ್ರಮಾಣ (ಎಕರೆ ಇಂಚುಗಳಲ್ಲಿ) | ಬಳಕೆ ಮಾಡುತ್ತಿರುವ ಪ್ರಮಾಣ ಶೇ. | ನೀರಿನ ಬೆಲೆ ೧ ಎಕರೆ (ಇಂಚು ೧೩ ರೂ.ನಂತೆ) | ಸಾಮಾಜಿಕ ವೆಚ್ಚದ ಅಧಿಕ ಬಳಕೆ |
|---|---|---|---|---|
| ಮೇಲ್ತುದಿ | ೫೦ | ೧೧೯.೨ | ೧೫೪೯.೬೦ | ೮೯೯.೬೦ |
| ಮಧ್ಯಭಾಗ | ೫೦ | ೭೧.೭ | ೯೩೨.೧೦ | ೨೮೨.೧೦ |
| ಕೆಳತುದಿ | ೫೦ | ೫೨.೩ | ೬೭೯.೯ | ೨೯.೯೦ |
| ಒಟ್ಟಾರೆ | .... | ಸರಾಸರಿ | ಸರಾಸರಿ | |
| ಅಚ್ಚುಕಟ್ಟು | ೫೦ | ೮೧.೦೬ | ೧೦೫೩.೭೮ | ೪೦೩.೭೮ |

ಮೂಲ : ರವಿ ಬಿ.ಎಂ., ೨೦೦೧, (ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ), ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು

ಮೇಲಿನ ಕೋಷ್ಟಕದಲ್ಲಿ ಸೂಚಿಸಿರುವಂತೆ ಭತ್ತದ ಬೆಳೆಗೆ ಕಾಲುವೆಯ ವಿವಿಧ ಭಾಗದ ರೈತರು ಬಳಕೆ ಮಾಡುತ್ತಿರುವ ನೀರಿನ ಪ್ರಮಾಣವನ್ನು ತೋರಿಸಲಾಗಿದೆ. ತಜ್ಞರು ಶಿಫಾರಸು ಮಾಡಿರುವುದು ಪ್ರತಿ ಎಕರೆಗೆ ೫೦ ಇಂಚು ನೀರು, ಆದರೆ ಮೇಲ್ತುದಿ ರೈತರು ೧೧೯.೨ ಇಂಚು ನೀರು ಬಳಕೆ ಮಾಡುತ್ತಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಮಧ್ಯಭಾಗದ ರೈತರು ೭೧.೭ ಇಂಚು ಮತ್ತು ಕೆಳತುದಿ ರೈತರು ೫೨.೩ ರಷ್ಟು ನೀರು ಬಳಕೆ ಮಾಡುತ್ತಿರುವುದು ರೈತರು ಅಮೂಲ್ಯ ಸಂಪನ್ಮೂಲವಾದ ನೀರನ್ನು ಹೇಗೆ ವ್ಯರ್ಥವಾಗಿ ಬಳಕೆ ಮಾಡುತ್ತಿದ್ದಾರೆ ಎಂಬುವುದು ತಿಳಿಯುತ್ತದೆ. ಅಷ್ಟೇ ಅಲ್ಲದೆ ಸಾಮಾಜಿಕ ಸಂಪನ್ಮೂಲದ

ಅಪಬಳಕೆಯಿಂದ ಮೇಲ್ತುದಿಯಲ್ಲಿ ೪೯೯.೬೦ ರೂ. ಎಕರೆಗೆ ಹೆಚ್ಚುವರಿ ನೀರಿನ ಮೌಲ್ಯವನ್ನು ಮೆಕ್ಕಿ ಮಾಡಲಾಗಿದೆ. ಆದರೆ ರೈತರು ಪಾವತಿಸುತ್ತಿರುವುದು ಕೇವಲ ೧೦೦. ಒಟ್ಟಾರೆ ೨೯೯.೬೦ ರೂ. ಮೌಲ್ಯದ ನೀರಿಗೆ ಬೆಲೆಯಿಲ್ಲದಂತಾಗುತ್ತದೆ. ಅಂದರೆ ಇದೊಂದು ಸಾಮಾಜಿಕ ವೆಚ್ಚವೆಂದಾಗುತ್ತದೆ. ಈ ವೆಚ್ಚದ ಹೊಣೆಯನ್ನು ರೈತರು ಹೊತ್ತುಕೊಳ್ಳುವುದಿಲ್ಲ. ಒಂದು ಸಮುದಾಯದ ಹಿತದೃಷ್ಟಿಯಿಂದ ನೈಸರ್ಗಿಕ ಸಂಪನ್ಮೂಲದ ಅಭಿವೃದ್ಧಿಯನ್ನು ಕೈಗೊಳ್ಳಲಾಗಿರುತ್ತದೆ. ಆದರೆ ಈ ಸಂಪನ್ಮೂಲ ಅಸಮಾನ ಹಂಚಿಕೆ, ಅಕ್ರಮ ಬಳಕೆ, ವ್ಯರ್ಥ ಬಳಕೆಯನ್ನು ತಡೆಯುವಲ್ಲಿ ಸರ್ಕಾರ ಕಾಲಕಾಲಕ್ಕೆ ತನ್ನ ನಿಯೋಗಿ ಸಂಸ್ಥೆಗಳ ಮೂಲಕ ನಿಯಮಗಳನ್ನು ರೂಪಿಸಿ ಜಾರಿಗೊಳಿಸಲಾಗಿದ್ದರೂ ಯಾವುದೇ ಪ್ರಯೋಜನವಾಗಿಲ್ಲ. ಮುಖ್ಯವಾಗಿ ಕೃಷಿತಜ್ಞರು ಇಂತಿಷ್ಟೇ ಪ್ರಮಾಣದ ನೀರನ್ನು ಇಂತಿಂತಾ ಬೆಳೆಗಳಿಗೆ ಬಳಕೆ ಮಾಡಬೇಕೆಂದು ನಿರ್ದೇಶಿಸಿದರೂ ರೈತರು ಕೇಳುವ, ಪರಿಪಾಲನೆ ಮಾಡುವುದಿಲ್ಲ. ರೈತರ ಮೂಲ ತಿಳುವಳಿಕೆ ಅತಿ ಹೆಚ್ಚು ನೀರು ಕೊಟ್ಟರೆ ಹೆಚ್ಚು ಇಳುವರಿ ಪಡೆಯಬಹುದೆಂಬುದಾಗಿದೆ. ಇಂತಹ ಪೂರ್ವಕಲ್ಪಿತ ಮನೋಧೋರಣೆಗಳನ್ನು ಹೋಗಲಾಡಿಸಲು ಏನಾದರೂ ರೈತ ಜಾಗೃತ ಕ್ರಮಗಳನ್ನು ಕೈಗೊಳ್ಳುವ ಅಗತ್ಯವಿದೆ. ಆ ನಿಟ್ಟಿನಲ್ಲಿ ಬಳಕೆದಾರರೇ ಸ್ವತಃ ನೀರಾವರಿ ಸಂಘಗಳನ್ನು ರಚಿಸಿಕೊಂಡು ನೀರಿನ ನಿರ್ವಹಣೆಯನ್ನು ಸಾಮೂಹಿಕವಾಗಿ, ಸಾಂಘಿಕವಾಗಿ ನೆರವೇರಿಸುವುದರಿಂದ ನೀರಿನ ಸಮಾನ ಹಂಚಿಕೆ ಸಾಧ್ಯವೆನ್ನುವ ನಂಬಿಕೆಯಿತ್ತು. ಆದರೆ ಯಾವುದೇ ಸಂಘ ಈ ದಿಶೆಯಲ್ಲಿ ಕಾರ್ಯ ಪ್ರವೃತ್ತವಾಗಿಲ್ಲ.

**೭.೬.೧. ಸಂಘಗಳ ವಿವಾದಗಳ ಇತ್ಯರ್ಥ ಮತ್ತು ಅಕ್ರಮಗಳ ತಡೆ**

ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನು ನಿರ್ಧರಿಸುವ ಎರಡು ಮುಖ್ಯ ಸಂಗತಿಗಳೆಂದರೆ ಉದ್ಭವಿಸುವ ವಿವಾದಗಳನ್ನು ಬಗೆಹರಿಸುವುದು ಮತ್ತು ಅಕ್ರಮ ಚಟುವಟಿಕೆಗಳನ್ನು ತಡೆಗಟ್ಟುವುದು. ಮೇಲ್ತುದಿ ಮತ್ತು ಕೆಳತುದಿ ರೈತರ ನಡುವೆ ನೀರಿನ ಹಂಚಿಕೆಗಾಗಿ ವಿವಾದಗಳು ಉಂಟಾಗುತ್ತವೆ. ಕಾಲುವೆಗಳ, ರಸ್ತೆಗಳ, ಒತ್ತುವರಿ ಕಾರಣಕ್ಕಾಗಿ ತಿಕ್ಕಾಟಗಳು ಸಂಭವಿಸುತ್ತವೆ. ಹೀಗೆ ಸಂಘರ್ಷಗಳು ಹಲವಾರು ಕಾರಣಗಳಿಗೆ ಹುಟ್ಟಿಕೊಳ್ಳುತ್ತವೆ. ಇಂತಹ ವಿವಾದಗಳನ್ನು ಬಗೆಹರಿಸಿದಾಗ ಸಂಘದ ಕಾರ್ಯನಿರ್ವಹಣೆಯ ದಕ್ಷತೆ ಹೆಚ್ಚುತ್ತದೆ.

ಅಚ್ಚುಕಟ್ಟುದಾರರಲ್ಲದ ಕೆಲವು ರೈತರು ತಮ್ಮ ಜಮೀನುಗಳಿಗೆ ಅಕ್ರಮವಾಗಿ ನೀರನ್ನು ಬಳಸಿಕೊಳ್ಳುತ್ತಿರುವುದು ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿದೆ. ಈ ಅಕ್ರಮ ನೀರು ಎತ್ತುವಳಿಯು ಎರಡು ರೀತಿಯಲ್ಲಿ ನಡೆಯುತ್ತಿದೆ. ಒಂದು : ಅಚ್ಚುಕಟ್ಟುದಾರನಲ್ಲದ ರೈತ ನೇರವಾಗಿ ಕಾಲುವೆಯಿಂದಲ್ಲೇ ಪಂಪ್‌ಸೆಟ್ ಮೂಲಕ ತನ್ನ ಎತ್ತರವಾದ ಜಮೀನಿಗೆ ನೀರನ್ನು ಹರಿಸಿಕೊಳ್ಳುವುದು. ಎರಡು : ರೈತ ಅಚ್ಚುಕಟ್ಟುದಾರನಾಗಿದ್ದು ಸ್ವಲ್ಪಮಟ್ಟಿನ ಜಮೀನನ್ನು ಅಧಿಸೂಚಿತ ಪ್ರದೇಶದಲ್ಲಿ ಹೊಂದಿರುತ್ತಾನೆ. ಉಳಿದಂತೆ ಹೆಚ್ಚುವರಿ ಜಮೀನಿಗೆ ತನ್ನ ಅಧಿಸೂಚಿತ ಜಮೀನಿನಲ್ಲಿಯೇ ಒಂದು ತೆರದ ಭಾವಿಯನ್ನು

ತೋಟಿ, ಕಾಲುವೆಯಿಂದ ಆ ಭಾವಿಯಲ್ಲಿ ಸಂಗ್ರಹಿಸಿಕೊಂಡು ಅನಂತರ ಆ ನೀರನ್ನು ಅಕ್ರಮವಾಗಿ ಅಧಿಸೂಚಿತವಲ್ಲದ ಪ್ರದೇಶಕ್ಕೆ ಒಯ್ಯುತ್ತಾನೆ. ಇಲ್ಲಿ ರೈತ ನೀ.ಬ.ಸ.ಸಂಘದ ಸದಸ್ಯನೂ ಹೌದು. ಅಕ್ರಮ ನೀರು ಎತ್ತುವಳಿದಾರನೂ ಹೌದು. ಹೀಗೆ ಎರಡು ರೀತಿಯಲ್ಲಿ ನೀರು ದುರ್ಬಳಕೆಯಾದರೆ ಕೆಳತುದಿಯ ರೈತರಿಗೆ ನೀರು ದೊರೆಯುವುದು ಹೇಗೆ? ತಮ್ಮ ಜಮೀನು ಅಧಿಸೂಚಿತ ಪ್ರದೇಶದಲ್ಲಿದ್ದರೂ ನೀರಿನ ಪೂರೈಕೆ ಇರುವುದಿಲ್ಲವೆಂದು ಸಂಘಟಿತರಾಗಿ ಹೋರಾಟ ಮಾಡಿದ ಅನೇಕ ಉದಾಹರಣೆಗಳು ನಮಗೆ ಸಿಗುತ್ತವೆ. ಏನೆಲ್ಲಾ ಹೋರಾಟ ಮಾಡಿದರೂ ಅನಧಿಕೃತ ಮತ್ತು ಅಕ್ರಮ ನೀರು ಬಳಕೆಯನ್ನು ತಡೆಗಟ್ಟಲು ಸಾಧ್ಯವಾಗಿಲ್ಲ. ಏಕೆಂದರೆ ಸರಕಾರದ ವಿವಿಧ ಇಲಾಖೆಯ ದ್ವಂದ್ವ ನೀತಿಗಳೇ ಅಕ್ರಮ ಚಟವಟಿಕೆಗಳಿಗೆ ಅವಕಾಶ ಕಲ್ಪಿಸಿದೆ. ರಾಜಕಾರಣದ ಮಧ್ಯಪ್ರವೇಶದಿಂದ ಕಾನೂನು ಮೃದುಗೊಂಡು ತಪ್ಪಿತಸ್ಥರು ಅಡ್ಡದಾರಿಗಳಲ್ಲಿ ರಕ್ಷಿಸಲ್ಪಡುತ್ತಾರೆ.

ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿ ಕಾನೂನಿನ ದೃಷ್ಟಿಯಿಂದ ಅಪರಾಧವೆಂದು ತಿಳಿದಿದ್ದರೂ ರೈತರು ಆ ಬಗ್ಗೆ ಭಯಪಡುವುದಿಲ್ಲ. ಅಂದರೆ ಕಾಯ್ದೆಯನ್ನು ಜಾರಿಗೆ ತರುವಲ್ಲಿ ಎಲ್ಲಾ ಹಾದಿಗಳು ರಾಜಕಾರಣದ ಲೇಪನಕ್ಕೆ ಒಳಗಾಗಿವೆ. ಜನರಲ್ಲಿ ಮೌಲ್ಯಗಳಿಗೆ ಗೌರವ ಇಲ್ಲದೇ ಅಪರಾಧವೂ ಸಕ್ರಮ ಎನ್ನುವಂತಾಗಿದೆ. ಈ ಅಕ್ರಮ ಚಟುವಟಿಕೆಗಳನ್ನು ಸರಕಾರವೇ ತಡೆಗಟ್ಟುವ ಸ್ಥಿತಿಯಲ್ಲಿ ಇಲ್ಲದ ಕಾರಣ ನೀ.ಬ.ಸ.ಸಂಘಗಳು ಹೇಗೆ ತಡೆಗಟ್ಟುತ್ತವೆ ಎನ್ನುವುದು ಯಕ್ಷಪ್ರಶ್ನೆ.

ಅಕ್ರಮ ನೀರು ಎತ್ತುವಳಿಗೆ ನೀರಾವರಿಗೆ ಸಂಬಂಧಿಸಿದ ಇಲಾಖೆ ನೆರವಾಗುತ್ತವೆ ಎನ್ನುವ ಆರೋಪವಿದೆ. ಮುಖ್ಯವಾಗಿ ಕಂದಾಯ ಇಲಾಖೆ ವಾಸ್ತವ ಸಂಗತಿಗಳನ್ನು ಪರಿಗಣಿಸದೇ ಪ್ರಮಾಣ ಪತ್ರಗಳನ್ನು ನೀಡುತ್ತದೆ. ಈ ಪ್ರಮಾಣ ಪತ್ರಗಳ ಆಧಾರದ ಮೇಲೆ ವಿದ್ಯುತ್ ಇಲಾಖೆ ಅಕ್ರಮ ನೀರು ಎತ್ತುವಳಿಗೆ ವಿದ್ಯುತ್ ಪೂರೈಸುತ್ತಿದೆ.

ಭೂವಿಜ್ಞಾನ ಇಲಾಖೆಯು ಬಾವಿಯಲ್ಲಿ ಜಲದ ಒರತೆಯಿದೆ ಎಂದು ಪ್ರಮಾಣ ಪತ್ರವನ್ನು ಒದಗಿಸುತ್ತದೆ. ಈ ಕುರಿತು ಮೂರೂ ಇಲಾಖೆಗಳು ನೀರಾವರಿ ಇಲಾಖೆಯಿಂದ ಯಾವುದೇ ಸ್ಪಷ್ಟೀಕರಣ ಕೇಳುವುದಿಲ್ಲ. ಇದು ಅಂತಿಮವಾಗಿ ದೊಡ್ಡ ಸಮಸ್ಯೆಯಾಗಿ ಹೊರಹೊಮ್ಮಿದೆ. ಅಕ್ರಮ ನೀರು ಬಳಕೆಯ ಮೂಲಕ ಸಾವಿರಾರು ಎಕರೆ ವಾಣಿಜ್ಯ ಬೆಳೆಯಾದ ಅಡಿಕೆ ತೋಟಗಳನ್ನು ಮಾಡಲಾಗಿದೆ. ದೀರ್ಘಾವಧಿ ಬೆಳೆಗೆ ಹೆಚ್ಚಿನ ಬಂಡವಾಳ ತೊಡಗಿಸಿರುವುದರಿಂದ ಅಕ್ರಮ ನೀರನ್ನು ತಡೆದರೆ ಅಧಿಕ ನಷ್ಟ ಉಂಟಾಗುತ್ತದೆ. ಆದುದರಿಂದ ರೈತರು ಅಕ್ರಮ ಸಾಗುವಳಿಯನ್ನು ಸಕ್ರಮಗೊಳಿಸಿ ಎನ್ನುವ ಅರ್ಥವಿಲ್ಲದ ಒತ್ತಾಯವನ್ನು ಮಾಡುತ್ತಾರೆ.

ಮಳೆ ಕಡಿಮೆಯಾಗಿ ಜಲಾಶಯದಲ್ಲಿ ನೀರಿನ ಸಂಗ್ರಹ ಇಳಿಮುಖಗೊಂಡಾಗ ಕೆಳತುದಿ ರೈತರಿಗೆ ಮುಂಗಾರು ಬೆಳೆಗೂ ನೀರು ದೊರೆಯುವುದಿಲ್ಲ. ಆಗ ಅಲ್ಲಿನ ಅಧಿಕೃತ ರೈತರು ಅಕ್ರಮ ನೀರು

ಎತ್ತುವಳಿಯನ್ನು ನಿಲ್ಲಿಸಬೇಕೆಂದು ಒತ್ತಾಯಿಸಿ ಚಳುವಳಿ ನಡೆಸುತ್ತವೆ. ಈಗಾಗಲೆ ಇಂತಹ ಅನೇಕ ಹೋರಾಟಗಳು ನಡೆದಿವೆ. ಆ ತಕ್ಷಣಕ್ಕೆ ಕಂದಾಯ ಇಲಾಖೆ, ವಿದ್ಯುತ್ ಇಲಾಖೆ, ಪೊಲೀಸ್ ಇಲಾಖೆ, ಜಿಲ್ಲಾಡಳಿತ ನೀರಾವರಿ ಇಲಾಖೆ, ಅಕ್ರಮ ಪಂಪ್‌ಸೆಟ್ಟುಗಳನ್ನು ತೆರವುಗೊಳಿಸುವ ನಾಟಕ ಮಾಡುತ್ತವೆ. ನೆಪಕ್ಕೆ ಕೆಲವು ರೈತರಿಗೆ ದಂಡ, ಜುಲ್ಮಾನೆಗಳನ್ನು ವಿಧಿಸುತ್ತವೆ. ಮತ್ತೆ ಕೆಲವೇ ದಿನಗಳಲ್ಲಿ ಅಕ್ರಮ ಚಟುವಟಿಕೆಗಳು ಯಥಾಸ್ಥಿತಿಯಲ್ಲಿ ಮುಂದುವರಿಯುತ್ತವೆ. ರಾಜಕೀಯ ಇಚ್ಛಾಶಕ್ತಿಯ ಕೊರತೆ, ಕಾನೂನಿನ ಕಟ್ಟುನಿಟ್ಟಿನ ಅನುಷ್ಠಾನದ ಲೋಪದಿಂದ ಅಕ್ರಮ ಚಟುವಟಿಕೆಗಳು ರಾಜಾರೋಷವಾಗಿ ನಡೆಯಲು ಅವಕಾಶವಾಗಿದೆ.

ಈ ಸಮಸ್ಯೆಯನ್ನು ನೀ.ಬ.ಸ.ಸಂಘಗಳು ಪರಿಹರಿಸಲು ಸಾಧ್ಯವಿಲ್ಲ. ಏಕೆಂದರೆ ತನ್ನ ಸದಸ್ಯ ರೈತನೇ ಅನಧಿಕೃತವಾಗಿ ನೀರನ್ನು ಬಳಕೆ ಮಾಡಿಕೊಳ್ಳುತ್ತಿರುತ್ತಾನೆ. ಎಷ್ಟೋ ಸಂಘಗಳಲ್ಲಿ ಪದಾಧಿಕಾರಿಗಳೇ ಅಕ್ರಮ ನೀರು ಎತ್ತುವಳಿಯಲ್ಲಿ ತೊಡಗಿದ್ದಾರೆ. ಇಂತಹ ಸ್ಥಿತಿಯಲ್ಲಿ ಇತರೆ ರೈತರ ಅಕ್ರಮ ಚಟುವಟಿಕೆಗಳನ್ನು ನಿಯಂತ್ರಿಸುವುದು ಸಾಧ್ಯವಿಲ್ಲ.

**ಅಕ್ರಮ ಚಟುವಟಿಕೆಗಳನ್ನು ತಡೆಯುವಲ್ಲಿ ಸಂಘಗಳ ಸಾಧನೆ**

**ಕೋಷ್ಟಕ ೭.೧೩**

| ಕ್ರ.ಸಂ. | ವಿವರ | ಮಾಡಿರುವ ಸಾಧನೆ ಶೇ. | ಮಾಡಬೇಕಾದ ಸಾಧನೆ ಶೇ. | ಅಂತರ ಶೇ. |
|---|---|---|---|---|
| ೧. | ಅನಧಿಕೃತ ಸಾಗುವಳಿ ತಡೆ | ೦೪.೦೦ | ೧೦೦ | ೯೬.೦೦ |
| ೨. | ಅಕ್ರಮ ನೀರು ಎತ್ತುವಳಿ ತಡೆ | ೦೪.೦೦ | ೧೦೦ | ೯೬.೦೦ |
| ೩. | ಕಾಲುವೆಗಳ ಒತ್ತುವರಿ ತೆರವು | ೧೬.೦೦ | ೧೦೦ | ೮೪.೦೦ |
| ೪. | ಆಯಕಟ್ಟಿನ ರಸ್ತೆಗಳ ಒತ್ತುವರಿ ತೆರವು | ೧೨.೦೦ | ೧೦೦ | ೮೮.೦೦ |
| ೫. | ಕೆರೆಗಳ ಒತ್ತುವರಿ ತೆರವು | ೦೮.೦೦ | ೧೦೦ | ೯೨.೦೦ |
| ೬. | ತೂಬುಗಳ ನಾಶದ ತಡೆ | ೦೪.೦೦ | ೧೦೦ | ೯೬.೦೦ |
| ೭. | ಕಾಲುವೆ ಬದುಗಳ ಒತ್ತುವರಿ ತಡೆ | ೧೨.೦೦ | ೧೦೦ | ೮೮.೦೦ |
| ೮. | ನಿಯಂತ್ರಕಗಳ ನಾಶದ ತಡೆ | ೦೪.೦೦ | ೧೦೦ | ೯೬.೦೦ |
| ೯. | ಕಟ್ಟಡಗಳ ನಾಶದ ತಡೆ | ೦೮.೦೦ | ೧೦೦ | ೯೨.೦೦ |
| ೧೦. | ಜಲಮಾಲಿನ್ಯದ ತಡೆ | ೦೦.೦೦ | ೧೦೦ | ೧೦೦ |

**ಮೂಲ : ಕ್ಷೇತ್ರಕಾರ್ಯ ಮಾಹಿತಿ.**

ಅಚ್ಚುಕಟ್ಟು ರಚನೆಯಾದಾಗ ಎತ್ತರದಲ್ಲಿದ್ದ ಜಮೀನುಗಳನ್ನು ಮಣ್ಣು ತೆಗೆದು ತಗ್ಗು ಮಾಡಿಕೊಂಡು ಅಧಿಸೂಚಿತವಲ್ಲದ ಸಾಗುವಳಿ ಭೂಮಿಗೆ ನೀರು ಹರಿಸಿಕೊಳ್ಳುವುದನ್ನು ಅನಧಿಕೃತ ಸಾಗುವಳಿ

ಎನ್ನಲಾಗುತ್ತದೆ. ಇಂತಹ ಅನಧಿಕೃತ ಸಾಗುವಳಿಯನ್ನು ಒಂದು ಸಂಘ ಮಾತ್ರ ನಿರ್ಬಂಧಿಸಿದೆ. ಅಕ್ರಮ ನೀರು ಎತ್ತುವಳಿಯ ಪ್ರಮಾಣವನ್ನು ಇದೇ ಸಂಘ ಕಡಿಮೆ ಮಾಡಿದೆ. ಉಳಿದಂತೆ ಯಾವುದೇ ಸಂಘ ಈ ವಿಷಯದಲ್ಲಿ ಪ್ರಯತ್ನ ಮಾಡಿಲ್ಲ. ಸಂಘಗಳಿಗೆ ಇಂತಹ ಅಕ್ರಮಗಳನ್ನು ತಡೆಯುವ, ದಂಡ ಜುಲ್ಮಾನೆಗಳನ್ನು ವಿಧಿಸುವ ಹಕ್ಕು ಇದೆಯಾದರೂ ಅದರ ಬಳಕೆಯಾಗುತ್ತಿಲ್ಲ. ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯಲ್ಲಿ ರೈತರು ಕಾಲುವೆಗಳನ್ನು ಒತ್ತುವರಿ ಮಾಡಿರುವುದು ಉಂಟು (ಕೋಷ್ಟಕ ೭.೧೩). ಈ ಬಗ್ಗೆ ೪ ಸಂಘಗಳು ಒತ್ತುವರಿಯನ್ನು ತೆರವು ಮಾಡಿವೆ. ಕಾಲುವೆಯ ಬದುಗಳ ಒತ್ತುವರಿಯನ್ನು ೩ ಸಂಘಗಳು ತೆರವು ಮಾಡುವಲ್ಲಿ ಯಶಸ್ವಿಯಾಗಿದೆ. ಕೆರೆಗಳ ಒತ್ತುವರಿ, ಆಯಕಟ್ಟಿನ ರಸ್ತೆಗಳ ಒತ್ತುವರಿಗೊಳಿಸುವಲ್ಲಿ ಇವೇ ಮುಂತಾದ ಸಂಗತಿಗಳಲ್ಲಿ ಸಂಘಗಳು ಅಂತಹ ಪರಿಣಾಮಕಾರಿ ಪ್ರಯತ್ನಗಳನ್ನು ಕೈಗೊಂಡಿಲ್ಲ. ಇದರಿಂದ ಒಟ್ಟಾರೆ ಸಂಘಗಳ ಕಾರ್ಯನಿರ್ವಹಣೆ ಮತ್ತು ಕಾರ್ಯಸಾಧನೆ ತೃಪ್ತಿಕರವಾಗಿಲ್ಲದೇ ಇರುವುದು ತಿಳಿಯುತ್ತದೆ.

**೭.೭. ಸರಕಾರ ಮತ್ತು ಇತರೆ ಇಲಾಖೆಗಳೊಂದಿಗೆ ಸಂಘಗಳ ಸಂಬಂಧ**

ಸಂಘಗಳ ಕಾರ್ಯನಿರ್ವಹಣೆಯ ಸಾಮರ್ಥ್ಯವು ಸರಕಾರ ಮತ್ತು ಇತರೆ ಸಂಬಂಧಿಸಿದ ಇಲಾಖೆಗಳೊಂದಿಗಿನ ಒಡನಾಟವನ್ನು ಅವಲಂಬಿಸಿರುತ್ತದೆ. ಸಂಬಂಧವು ಅನ್ಯೋನ್ಯವಾಗಿದ್ದರೆ ಸಂಘಗಳ ಕಾರ್ಯ ಚಟುವಟಿಕೆಗಳಿಗೆ ಉತ್ತೇಜನ ದೊರೆತು ಕಾರ್ಯ ಸಾಧನೆ ಹೆಚ್ಚಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಸಂಬಂಧವು ಉತ್ತೇಜನಕಾರಿಯಾಗದೇ ಇದ್ದಾಗ ಸಂಘಗಳ ಕಾರ್ಯಚಟುವಟಿಕೆ ಕುಗ್ಗುತ್ತದೆ. ನೀ.ಬ.ಸ. ಸಂಘಗಳು ಹಲವಾರು ಇಲಾಖೆಗಳೊಂದಿಗೆ ವ್ಯವಹರಿಸಬೇಕು. ಮುಖ್ಯವಾಗಿ ತನ್ನ ಕರ್ತೃ ಸಂಸ್ಥೆ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ, ನೀರಾವರಿ ಇಲಾಖೆ, ಕೃಷಿ, ತೋಟಗಾರಿಕೆ ಮೊದಲಾದ ಇಲಾಖೆಗಳೊಂದಿಗೆ ಸಂಬಂಧ ಹೊಂದಿದೆ. ಪರೋಕ್ಷವಾಗಿ ಕಂದಾಯ, ಮೀನುಗಾರಿಕೆ, ವಿದ್ಯುತ್, ಪಶುಸಂಗೋಪನೆ ಹಾಗೂ ಸಂಘದ ವ್ಯಾಪ್ತಿಯ ಸಹಕಾರ ಸಂಸ್ಥೆಗಳೊಂದಿಗೆ ಸಂಘಗಳು ಅಗತ್ಯವಿದ್ದಾಗ ವ್ಯವಹರಿಸುತ್ತವೆ.

ನೀರಾವರಿ ಇಲಾಖೆಯು ಸಂಘಗಳೊಂದಿಗೆ ನಿಕಟ ಬಾಂಧವ್ಯವನ್ನು ಇಟ್ಟುಕೊಂಡಿದೆ. ಈ ಇಲಾಖೆಯ ಸಹಕಾರ/ಸಹಯೋಗದಲ್ಲಿ ಅಚ್ಚುಕಟ್ಟು ಪ್ರದೇಶದ ಹಲವಾರು ಸಮಸ್ಯೆಗಳು ಬಗೆಹರಿಯುತ್ತವೆ. ನೀ.ಬ.ಸ. ಸಂಘಗಳಿಗೆ ಅಗತ್ಯವಾದ ನೀರಿನ ಪೂರೈಕೆ ಮಾಡುವ ಮುಖ್ಯ ಕಾಲುವೆಗಳನ್ನು ಸುಸ್ಥಿರವಾಗಿ ಇಟ್ಟುಕೊಳ್ಳುವ ಹೊಣೆಗಾರಿಕೆ ನೀರಾವರಿ ಇಲಾಖೆಯ ಮೇಲಿದೆ. ತೂಬಿನ ಮೇಲ್ಭಾಗದ ಎಲ್ಲ ಕಾಮಗಾರಿಗಳು ಈ ಇಲಾಖೆಯ ವ್ಯಾಪ್ತಿಗೆ ಬರುತ್ತವೆ. ಈ ಬಗ್ಗೆ ವಿವಿಧ ದರ್ಜೆಯ ಕ್ಷೇತ್ರಾಧಿಕಾರಿಗಳು, ಕಿರಿಯ ಇಂಜಿನಿಯರ್‌ಗಳು, ಸಹಾಯಕ ಇಂಜಿನಿಯರ್‌ಗಳು, ನೀರಾವರಿ ಪ್ರದೇಶದ ಎಲ್ಲ ಸಂಗತಿಗಳ ಕುರಿತು ಉಸ್ತುವಾರಿ ಮಾಡುತ್ತಾರೆ. ನೀರುಗಂಟಿಗಳನ್ನು ನೇಮಕ ಮಾಡಿ ನೀರಿನ ಸರಬರಾಜನ್ನು ನಿಯಂತ್ರಿಸಿ, ಕಾಲುವೆವಾರು ವಿತರಣೆ ಮಾಡುತ್ತಾರೆ. ಜಲಸಂಪನ್ಮೂಲ ಇಲಾಖೆಯು ಹಲವಾರು ದಶಕಗಳಿಂದ ನೀರುಗಂಟಿಗಳನ್ನು

ನೇಮಕ ಮಾಡಿಕೊಂಡಿಲ್ಲ. ಇದರಿಂದ ಅಚ್ಚುಕಟ್ಟು ಪ್ರದೇಶದ ನೀರಾವರಿ ವ್ಯವಸ್ಥೆಯನ್ನು ಸುಸ್ಥಿರವಾಗಿಟ್ಟು ಕೊಳ್ಳಲು ಸಾಧ್ಯವಾಗಿಲ್ಲ. ಪ್ರತಿ ೩೦೦ ಹೆಕ್ಟೇರಿಗೆ ಒಬ್ಬ ನೀರುಗಂಟಿಯನ್ನು ನೇಮಕ ಮಾಡುವ ಪರಿಪಾಠವಿದೆ. ಆದರೆ ಇವತ್ತು ಒಂದು ಸಾವಿರ ಹೆಕ್ಟೇರಿಗೆ ಒಬ್ಬ ನೀರುಗಂಟಿಯಿಲ್ಲ. ಇರುವ ನೀರುಗಂಟಿಗಳೂ ತಾತ್ಕಾಲಿಕ ಸಿಬ್ಬಂದಿಯಾಗಿದ್ದಾರೆ. ಅವರಿಗೆ ಹೆಚ್ಚಿನ ಪ್ರದೇಶ ಬರುವುದರಿಂದ ಅಕ್ರಮಗಳನ್ನು ತಡೆಗಟ್ಟಿ, ಸರದಿ ಪ್ರಕಾರ ನೀರು ಹಂಚಿಕೆ ಮಾಡಲು ಸಾಧ್ಯವಾಗುತ್ತಿಲ್ಲ.

ನೀ.ಬ.ಸ.ಸಂಘಗಳು ಆರ್ಥಿಕವಾಗಿ ದುಸ್ಥಿತಿಯಲ್ಲಿರುವುದರಿಂದ ಸ್ವತಃ ನೀರುಗಂಟಿಗಳನ್ನು ನೇಮಕ ಮಾಡಿಕೊಂಡಿಲ್ಲ. ಪರಿಣಾಮವಾಗಿ ನೀರಾವರಿ ನಿರ್ವಹಣೆ ಹದಗೆಟ್ಟಿದೆ. ಆದುದರಿಂದ ರೈತರು ತಮ್ಮ ನೀರಿನ ಅತಿಯಾದ ವ್ಯಾಮೋಹದಿಂದ ಜಲಸಂಪನ್ಮೂಲವನ್ನು ಅಪಬಳಕೆ ಮಾಡಲು ಅವಕಾಶ ಮಾಡಿ ಕೊಟ್ಟಿದೆ. ನೀರಾವರಿ ಇಲಾಖೆಯಲ್ಲೂ ಸಿಬ್ಬಂದಿಯ ಕೊರತೆಯಿದ್ದು, ಹೆಚ್ಚು ವಿಸ್ತಾರವಾದ ಪ್ರದೇಶವನ್ನು ಒಬ್ಬರೇ ಉಸ್ತುವಾರಿ ಮಾಡುವುದು ಸಾಧ್ಯವಾಗುತ್ತಿಲ್ಲ. ೧೦ ರಿಂದ ೧೫ ಸಂಘಗಳ ವ್ಯಾಪ್ತಿಗೆ ಒಬ್ಬರೇ ಇಂಜಿನಿಯರ್ ಇರುವುದರಿಂದ ಕಾಲಕಾಲಕ್ಕೆ ನೀ.ಬ.ಸ.ಸಂಘ ನಡೆಸುವ ಕಾರ್ಯಕಾರಿ ಸಭೆ ಅಥವಾ ಮಹಾಸಭೆಗೆ ಹಾಜರಾಗಲು ಸಾಧ್ಯವಿಲ್ಲ ಎನ್ನುತ್ತಾರೆ ಅಧಿಕಾರಿಗಳು.

ತಾಂತ್ರಿಕ ಸಂಗತಿಗಳು ನೀರಾವರಿ ಇಲಾಖೆಗೆ ಸಂಬಂಧಿಸಿರುವುದರಿಂದ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣಕ್ಕೆ ಅನುಗುಣವಾಗಿ ತಾಂತ್ರಿಕ ಸಿಬ್ಬಂದಿ ಇರಬೇಕು. ಸಾಮಾನ್ಯ ರೈತರೇ ತೂಬು ಮತ್ತು ನೀರಿನ ನಿಯಂತ್ರಕಗಳನ್ನು ಬೇಕಾಬಿಟ್ಟಿ ಬಳಕೆ ಮಾಡುವುದು ಕಂಡುಬರುತ್ತದೆ. ಇದರಿಂದ ಮೇಲ್ಬುದಿ ಮತ್ತು ಮಧ್ಯಭಾಗದಲ್ಲಿಯೇ ಹೆಚ್ಚಿನ ನೀರು ಪೋಲಾಗುತ್ತದೆ. ಅಧಿಕ ನೀರು ನಿಲ್ಲುವುದರಿಂದ ಭೂಮಿಯೂ ಜೌಗಿನಿಂದ ಆವೃತವಾಗಿ ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ಮುಖ್ಯವಾಗಿ ಕೊನೆಭಾಗದ ರೈತರಿಗೆ ನೀರು ದೊರೆಯುವುದಿಲ್ಲ. ಕನಿಷ್ಟ ಪಕ್ಷ ಆಯ್ದ ರೈತರಿಗೆ ಉಪಕರಣಗಳ ಕಾರ್ಯಾಚರಣೆ ಬಗ್ಗೆ ತರಬೇತಿಯನ್ನು ನೀರಾವರಿ ಇಲಾಖೆ ನೀಡಿದರೆ ಉತ್ತಮ.

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿರುವ ನಿಯೋಗಿಸಂಸ್ಥೆ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದೊಂದಿಗೆ ನೀ.ಬ.ಸ.ಸಂಘಗಳಿಗೆ ನಿಕಟ ಸಂಬಂಧವಿದೆ. ಕಾಡಾ ಮೂಲಕವೇ ಸಂಘಗಳ ಎಲ್ಲ ಚಟುವಟಿಕೆಗಳು ನೆರವೇರುತ್ತವೆ. ಈ ಕರ್ತೃ ಸಂಸ್ಥೆ ಉತ್ತಮ ಸಹಕಾರವನ್ನು ಬೆಂಬಲವನ್ನು ನೀಡಿದರೆ ನೀ.ಬ.ಸ.ಸಂಘಗಳು ತನ್ನ ಗುರಿಸಾಧನೆಯನ್ನು ಪೂರೈಸುತ್ತವೆ. ಸಂಘಗಳ ಸ್ಥಾಪನೆಯಿಂದ ಆರಂಭವಾಗಿ ಒಡಂಬಡಿಕೆ ಒಪ್ಪಂದವಾಗುವತನಕ ರೈತರ ಮನವೊಲಿಸುವ ಜವಾಬ್ದಾರಿ ಕಾಡಾದಲ್ಲಿರುವ ಸಹಕಾರ ಇಲಾಖೆಯ ಅಧಿಕಾರಿಗಳದ್ದಾಗಿದೆ. ಅದೇ ರೀತಿ ಉಳಿದ ಭೂ ಅಭಿವೃದ್ಧಿ ಅಧಿಕಾರಿಗಳು ಈ ಬಗ್ಗೆ ಹೆಚ್ಚಿನ ಶ್ರಮವಹಿಸಬೇಕು. ಕಾಡಾದಿಂದ ಉತ್ತಮ ಪ್ರೋತ್ಸಾಹ ದೊರೆತರೆ ಸಂಘಗಳ ಕಾರ್ಯನಿರ್ವಹಣೆ ಸರಾಗವಾಗಿ ಸಾಗುತ್ತದೆ. ಮುಂದೆ ಅವುಗಳ ಕಾರ್ಯಸಾಧನೆಯ ಮಟ್ಟವು

ಹೆಚ್ಚಾಗುತ್ತದೆ. ಸಂಘಗಳ ಆಡಳಿತ ನಿರ್ವಹಣೆಗೆ, ಸಭೆಗಳನ್ನು ನಡೆಸುವ ಕುರಿತು, ಹಣಕಾಸಿನ ಹೊಂದಾಣಿಕೆ ಬಗ್ಗೆ ಕಾಲಕಾಲಕ್ಕೆ ಅವಶ್ಯಕ ಮಾಹಿತಿಯನ್ನು ಕಾಡಾ ಸಿಬ್ಬಂದಿ ನೀಡಬೇಕು. ಅನುಭವ ಮತ್ತು ತರಬೇತಿ ಇಲ್ಲದ ಕಾರ್ಯದರ್ಶಿಗಳಿಗೆ ಸರಳವಾಗಿ ವಿಷಯಗಳನ್ನು ಮನದಟ್ಟು ಮಾಡಬೇಕು. ಆದರೆ ಕಾಡಾ ಸಿಬ್ಬಂದಿ ತಾಂತ್ರಿಕ ಸಂಗತಿಗಳನ್ನು ಯಥಾವತ್ತಾಗಿ ಹೇಳುವುದರಿಂದ ಕಾರ್ಯದರ್ಶಿಗಳಿಗೆ ಅರ್ಥವಾಗುವುದಿಲ್ಲ. ಒಂದು ಸಣ್ಣ ಲೆಕ್ಕಾಚಾರಕ್ಕೂ ಹೆಚ್ಚಿನ ಸಮಯ ತೆಗೆದುಕೊಳ್ಳುತ್ತಾರೆ. ಕಾಡಾ ಕಛೇರಿಗೆ ಹಲವಾರು ಬಾರಿ ಅಲೆಯಬೇಕಾಗುತ್ತದೆ ಎನ್ನುತ್ತಾರೆ ಕಾರ್ಯದರ್ಶಿಗಳು. ಈಗಾಗಲೇ ಕಾರ್ಯದರ್ಶಿಗಳಿಗೆ ಹಲವಾರು ತರಬೇತಿಗಳನ್ನು ನೀಡಲಾಗಿದೆ. ಆದರೆ ಈ ತರಬೇತಿಗಳಿಂದ ತಮಗೆ ಹೆಚ್ಚಿನ ಪ್ರಯೋಜನವಾಗಿಲ್ಲ ಎನ್ನುವುದು ಕಾರ್ಯದರ್ಶಿಗಳ ಅಭಿಪ್ರಾಯ. ಸಂಪನ್ಮೂಲ ವ್ಯಕ್ತಿಗಳ ಉಪನ್ಯಾಸದ ವಿಧಾನ ಕಠಿಣವಾಗಿದ್ದು, ಅನೇಕ ಸಂಗತಿಗಳು ಅನುಮಾನಕ್ಕೆ ಆಸ್ಪದ ಕಲ್ಪಿಸುತ್ತವೆ. ಆದುದರಿಂದ ಕಾರ್ಯದರ್ಶಿಗಳಿಗೆ ವಿಶೇಷ ತರಬೇತಿ ನೀಡುವ ಅಗತ್ಯವಿದೆ.

ಅಚ್ಚುಕಟ್ಟು ಪ್ರಾಧಿಕಾರದಿಂದ ಸಂಘಗಳಿಗೆ ದೊರೆಯಬೇಕಾದ ಹಣಕಾಸನ್ನು ಪಡೆಯಲು ಹರಸಾಹಸ ಮಾಡಬೇಕು. ಅಧಿಕಾರಿ ಮತ್ತು ಸಿಬ್ಬಂದಿಯ ಉದಾಸೀನ ಮತ್ತು ವಿಳಂಬ ನೀತಿಯಿಂದ ಯಾವ ಕಾರ್ಯವೂ ನಿಗದಿತ ಸಮಯದಲ್ಲಿ ಮುಗಿಯುವುದಿಲ್ಲ. ಹಣವಿದ್ದೆಡೆ ಲಂಚ ರುಸುವತ್ತುಗಳೂ ಇರುತ್ತವೆ ಎನ್ನುತ್ತಾರೆ ಪದಾಧಿಕಾರಿಗಳು. ಕಾಡಾ ಕಛೇರಿಯಲ್ಲಿ ಸಲಹೆಗಳನ್ನು ನೀಡುವ ಅಧಿಕಾರಿಗಳ ಅಭಿಪ್ರಾಯ ಏಕಪ್ರಕಾರವಾಗಿರುವುದಿಲ್ಲ. ಯಾವ ಸಂಗತಿಗಳ ಬಗ್ಗೆ, ನಿಯಮಗಳ ಕುರಿತು ಖಚಿತತೆಯಿರುವುದಿಲ್ಲ. ಎಲ್ಲವೂ ಗೊಂದಲಮಯವಾಗಿರುವುದರಿಂದ ತಮಗೆ ಹೆಚ್ಚಿನ ಸಮಯ ಮತ್ತು ಹಣ ವ್ಯಯವಾಗುತ್ತದೆ ಎನ್ನುತ್ತಾರೆ ಕಾರ್ಯದರ್ಶಿಗಳು.

ಕಾಡಾ ಅಧಿಕಾರಿಗಳ ಪ್ರಕಾರ ಸಿಬ್ಬಂದಿ ಕೊರತೆಯಿಂದ ನೀ.ಬ.ಸ.ಸಂಘಗಳಿಗೆ ಹೆಚ್ಚಿನ ಮಾರ್ಗದರ್ಶನ ನೀಡಲು ಸಾಧ್ಯವಾಗುತ್ತಿಲ್ಲ. ಲೆಕ್ಕಾಚಾರದ ಬಗ್ಗೆ ಕನಿಷ್ಠ ಜ್ಞಾನ ಇಲ್ಲದ ಕಾರ್ಯದರ್ಶಿಗಳಿಗೆ ಎಷ್ಟೇ ತರಬೇತಿ ನೀಡಿದರು ಉಪಯೋಗವಿಲ್ಲ. ಪ್ರತಿ ೫ ರಿಂದ ೧೦ ನೀ.ಬ.ಸ.ಸಂಘಗಳಿಗೆ ಒಬ್ಬರಂತೆ ಸರಕಾರವೇ ಕಾರ್ಯದರ್ಶಿಗಳನ್ನು ನೇಮಕ ಮಾಡುವುದು ಉತ್ತಮ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕಾಡಾದಲ್ಲಿಯ ಅಧಿಕಾರಿಗಳು ಉಪಯುಕ್ತ ಮಾಹಿತಿಯನ್ನೇ ನೀಡುತ್ತಾರೆ. ಉಳಿದ ಇಲಾಖೆ ಅಧಿಕಾರಿಗಳು ಅವರನ್ನು ದಾರಿ ತಪ್ಪಿಸುತ್ತಾರೆ ಎಂದು ಆರೋಪ ಮಾಡುತ್ತಾರೆ. ಸರಕಾರದಿಂದಲೇ ಖಚಿತವಾದ ಆದೇಶಗಳು ಬರದೇ ಇರುವಾಗ ನಾವು ಹೇಗೆ ಖಡಾಖಂಡಿತವಾಗಿ ನಿರ್ಧಾರ ತೆಗೆದುಕೊಳ್ಳಬೇಕು ಎಂಬ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾರೆ.

ಸಂಘಗಳ ಕಾರ್ಯನಿರ್ವಹಣೆಯ ಮೇಲೆ ಪ್ರಭಾವ ಬೀರುವ ಕಂದಾಯ, ಕೃಷಿ, ವಿದ್ಯುತ್, ಮೀನುಗಾರಿಕೆ, ಪಶುಸಂಗೋಪನೆ, ಕೃಷಿ ವಿಶ್ವವಿದ್ಯಾಲಯ ಮೊದಲಾದ ಇಲಾಖೆಗಳ ಪಾತ್ರವು

ಗಮನಾರ್ಹವಾದದ್ದು. ನಿಯಮಗಳ ಪಾಲನೆಯಲ್ಲಿ ಈ ಎಲ್ಲಾ ಇಲಾಖೆಗಳ ಸಹಕಾರವಿದ್ದರೆ ನೀ.ಬ.ಸ.ಸಂಘಗಳ ಕಾರ್ಯನಿರ್ವಹಣೆ ಸುಗಮವಾಗುತ್ತದೆ. ಸರಕಾರದ ಆದೇಶಗಳಲ್ಲಿನ ದ್ವಂದ್ವತೆಯಿಂದ ಈ ಮೇಲಿನ ಇಲಾಖೆಗಳು ಸಂಘಗಳ ಕಾರ್ಯ ಚಟುವಟಿಕೆಗಳಿಗೆ ಪೂರಕವಾಗಿ ಸ್ಪಂದಿಸುತ್ತಿಲ್ಲ ಎನ್ನುವ ಅಭಿಪ್ರಾಯವನ್ನು ಪದಾಧಿಕಾರಿಗಳು ವ್ಯಕ್ತಪಡಿಸುತ್ತಾರೆ. ಸಂಘಗಳ ವ್ಯಾಪ್ತಿಯಲ್ಲಿನ ಅನಧಿಕೃತ ಮತ್ತು ಅಕ್ರಮ ಚಟುವಟಿಕೆಗಳನ್ನು ನಿರ್ಬಂಧಿಸುವಲ್ಲಿ ಈ ಎಲ್ಲಾ ಇಲಾಖೆಗಳ ಸಹಕಾರ ಬೇಕು. ಅವುಗಳ ಅಸಹಕಾರದಿಂದ ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿ ಹೆಚ್ಚಾಗುತ್ತಿದೆ. ಇದರಿಂದ ಕೆಳತುದಿ ರೈತರಿಗೆ ನೀರಿನ ಪೂರೈಕೆಯಾಗದೆ ಬೇರೆ ಬೇರೆ ಭಾಗದ ರೈತರ ನಡುವೆ ಸಂಘರ್ಷಗಳು ಉಂಟಾಗುತ್ತಿವೆ. ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಇಲಾಖೆಗಳ ಸಹಕಾರದಿಂದ ಮಾತ್ರ ಸಾಧ್ಯ.

### ಇಲಾಖೆಗಳೊಂದಿಗಿನ ಸಂಘಗಳ ಸಂಬಂಧ ಶೇ. ಪ್ರಮಾಣ

**ಕೋಷ್ಟಕ ೭.೧೪**

| ಕ್ರ.ಸಂ. | ಇಲಾಖೆಗಳು | ಉತ್ತಮ | ಸಾಧಾರಣ | ತೃಪ್ತಿಕರ | ಅತೃಪ್ತಿಕರ |
|---|---|---|---|---|---|
| ೧. | ಅಚ್ಚುಕಟ್ಟು ಪ್ರಾಧಿಕಾರ | ೦೪ | ೧೨ | ೧೬ | ೬೮ |
| ೨. | ಜಲಸಂಪನ್ಮೂಲ ಇಲಾಖೆ | ೦೦ | ೦೪ | ೧೨ | ೮೪ |
| ೩. | ಕೃಷಿ ಇಲಾಖೆ | ೦೮ | ೧೨ | ೧೨ | ೬೮ |
| ೪. | ಸಹಕಾರ ಇಲಾಖೆ | ೧೬ | ೨೪ | ೩೨ | ೨೮ |
| ೫. | ಕಂದಾಯ ಇಲಾಖೆ | ೦೦ | ೦೦ | ೦೦ | ೧೦೦ |
| ೬. | ತೋಟಗಾರಿಕೆ ಇಲಾಖೆ | ೦೦ | ೦೦ | ೦೦ | ೧೦೦ |
| ೭. | ಪಶುಸಂಗೋಪನೆ ಇಲಾಖೆ | ೦೦ | ೦೦ | ೦೦ | ೧೦೦ |
| ೮. | ಮೀನುಗಾರಿಕೆ ಇಲಾಖೆ | ೦೦ | ೦೦ | ೦೦ | ೧೦೦ |
| ೯. | ವಿದ್ಯುತ್ ನಿಗಮ | ೦೦ | ೦೦ | ೦೦ | ೧೦೦ |
| ೧೦. | ಭೂವಿಜ್ಞಾನ ಇಲಾಖೆ | ೦೦ | ೦೦ | ೦೦ | ೧೦೦ |
| ೧೧. | ಕೃಷಿ ವಿಶ್ವವಿದ್ಯಾಲಯ | ೧೬ | ೧೨ | ೧೨ | ೬೦ |

ಮೂಲ : ಕ್ಷೇತ್ರಕಾರ್ಯ ಮಾಹಿತಿ.

ವಿವಿಧ ಇಲಾಖೆಗಳೊಂದಿನ ಸಂಬಂಧವನ್ನು ಕೋಷ್ಟಕದಲ್ಲಿ ಗಮನಿಸಿದಾಗ ಸಹಕಾರ ಇಲಾಖೆಯನ್ನು ಹೊರತುಪಡಿಸಿದರೆ ಉಳಿದೆಲ್ಲಾ ಇಲಾಖೆಗಳ ಸಹಕಾರ ಶೇ. ೫೦ ಕ್ಕಿಂತ ಕಡಿಮೆಯಿದೆ. ಮುಖ್ಯವಾಗಿ ಕಂದಾಯ ಇಲಾಖೆ, ವಿದ್ಯುತ್ ನಿಗಮದ ಸಹಕಾರ ಶೂನ್ಯ. ಕೆಲಮಟ್ಟಿಗೆ ಕೃಷಿ ವಿಶ್ವವಿದ್ಯಾಲಯ, ಪಶುಸಂಗೋಪನೆ ಇಲಾಖೆಗಳ ಸಹಕಾರವಿದೆ. ಜಲಸಂಪನ್ಮೂಲ ಇಲಾಖೆಯ ಅಸಹಕಾರ ಸರಾಸರಿ ೯೦ ರಷ್ಟಿದೆ. ಒಟ್ಟಾರೆ ನೀ.ಬ.ಸ.ಸಂಘಗಳ ಕಾರ್ಯ ನಿರ್ವಹಣೆಗೆ ಸಹಕರಿಸಬೇಕಾದ ಇಲಾಖೆಗಳು ಅಸಹಕಾರ ತೋರುತ್ತಿರುವುದರಿಂದ ಅವುಗಳ ಕಾರ್ಯಸಾಧನೆಗೆ ತೊಡಕಾಗಿದೆ.

## ೭.೪. ಸಂಘಗಳ ಸುಸ್ಥಿರತೆ / ನಿರಂತರತೆ ಸವಾಲುಗಳು

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮದ ಅಡಿಯಲ್ಲಿ ನೀ.ಬ.ಸ. ಸಂಘಗಳನ್ನು ಸ್ಥಾಪಿಸಿ, ಅವುಗಳಿಗೆ ಅಧಿಕಾರ ಹಸ್ತಾಂತರ ಮಾಡುವ ಪ್ರಕ್ರಿಯೆ ಭರದಿಂದ ಸಾಗುತ್ತಿದೆ. ಆರಂಭದಲ್ಲಿ ಕೇಂದ್ರ, ರಾಜ್ಯ ಮತ್ತು ಅಂತರ್‌ರಾಷ್ಟ್ರೀಯ ಆರ್ಥಿಕ ಸಂಸ್ಥೆಗಳಿಂದ ಈ ಕಾರ್ಯಕ್ರಮಕ್ಕೆ ಹೆಚ್ಚಿನ ಅನುದಾನ, ಸಹಾಯಧನಗಳು ದೊರೆಯುತ್ತವೆ. ಒಂದು ಹಂತದವರೆಗೂ ಈ ಆರ್ಥಿಕ ಬೆಂಬಲ ಸಂಘಗಳಿಗೆ ಸಿಕ್ಕು ಆನಂತರ ನೆರವನ್ನು ಹಿಂದಕ್ಕೆ ಪಡೆದಾಗ ಸಂಘಗಳು ಸ್ಥಗಿತಗೊಳ್ಳುವ ಲಕ್ಷಣಗಳು ಕಾಣತೊಡಗಿದೆ. ಸ್ವಾವಲಂಬನೆಗೆ ಅಗತ್ಯವಾದ ಮೂಲ ತಳಹದಿಯನ್ನು ಕಲ್ಪಿಸದೇ ಅವಲಂಬನೆಯ ಮೇಲೆ ಅವುಗಳನ್ನು ಬೆಳೆಸಿದರೆ ನೀ.ಬ.ಸ.ಸಂಘಗಳು ಅಲ್ಪಾವಧಿಯಲ್ಲಿ ಅವನತಿ ಹೊಂದುತ್ತವೆ. ಏನೆಲ್ಲಾ ನೆರವು, ಪ್ರೋತ್ಸಾಹ ಗಳನ್ನು ಒದಗಿಸುತ್ತಿರುವಾಗಲೇ ಅವುಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿಲ್ಲ. ಇನ್ನು ಅಂತಹ ಉತ್ತೇಜನಗಳನ್ನು ಹಿಂತೆಗೆದುಕೊಂಡರೆ ಸಂಘಗಳು ಸಂಪೂರ್ಣವಾಗಿ ಸ್ಥಗಿತಗೊಳ್ಳುತ್ತವೆ. ಕೆಲವು ಸಂಘಗಳು ತಮ್ಮ ಸ್ವಸಾಮರ್ಥ್ಯ ಮತ್ತು ಸರಕಾರದ ನೆರವಿನಿಂದ ಒಂದು ಮಟ್ಟದ ಕಾರ್ಯ ಸಾಧನೆಯನ್ನು ಮಾಡಿವೆ. ಇಂತಹ ಸಫಲ ಸಂಘಗಳು ದೀರ್ಘಾವಧಿಯಲ್ಲಿ ಹೇಗೆ ತಮ್ಮ ಸುಸ್ಥಿರತೆಯನ್ನು ಉಳಿಸಿ ಕೊಳ್ಳಬಲ್ಲವು ಎನ್ನುವುದು ಪ್ರಶ್ನಾರ್ಹವಾಗಿದೆ.

ನೀ.ಬ.ಸ.ಸಂಘಗಳು ನಿರಂತರತೆಯನ್ನು ಕಾಯ್ದುಕೊಳ್ಳುವಾಗ ಎದುರಿಸಬೇಕಾದ ಸವಾಲುಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಹಣಕಾಸಿನ ಸ್ವಾವಲಂಬನೆಯ ಸಮಸ್ಯೆ (ಸಾಂಸ್ಥಿಕ).

೨. ಸಂಬಂಧಿಸಿದ ಇಲಾಖೆಗಳೊಂದಿಗೆ ಸಹಕಾರದ ಕೊರತೆ.

೩. ಸಾಮಾಜಿಕ ಏಣಿ-ಶ್ರೇಣಿಯ ತೊಡಕು.

೪. ರೈತ ಸದಸ್ಯರ ಪಾಲ್ಗೊಳ್ಳುವಿಕೆಯಲ್ಲಿನ ಅಸಡ್ಡೆ.

೫. ಸರಕಾರದ ನೀರಾವರಿ ನೀತಿಯಲ್ಲಿನ ಲೋಪಗಳು.

೬. ನಿಯಮಗಳ ಪಾಲನೆಯಲ್ಲಿ ರೈತರ ನಿರ್ಲಕ್ಷ್ಯ ಧೋರಣೆ.

೭. ನೀರಾವರಿ ಇಲಾಖೆಯ ತಟಸ್ಥ ನಿಲುವು.

೮. ಐಚ್ಛಿಕ ಸದಸ್ಯತ್ವದ ದುರುಪಯೋಗ

೯. ಪದಾಧಿಕಾರಿಗಳಲ್ಲಿ ನಾಯಕತ್ವ ಗುಣಗಳ ಅಭಾವ

೧೦. ನೀರು ದರ ಮತ್ತು ಇತರೆ ಅಭಿವೃದ್ಧಿ ವಂತಿಗೆ ನೀಡುವಲ್ಲಿ ರೈತರ ಹಿಂದೇಟು.

೧೧. ಅನುಭವ ಮತ್ತು ತರಬೇತಿ ಪಡೆಯದ ಕಾರ್ಯದರ್ಶಿಗಳು.

೧೨. ನೀರಿನ ಮಹತ್ವದ ಅರಿವಿನ ಕೊರತೆ.

೧೩. ಅನುಷ್ಠಾನ ಇಲಾಖೆಯ ವಿಳಂಬ ನೀತಿ ಮತ್ತು ಭ್ರಷ್ಟಾಚಾರ.

೧೪. ರಾಜಕೀಯ ಹಸ್ತಕ್ಷೇಪ.

೧೫. ಮೌಲ್ಯಗಳಿಲ್ಲದ ರೈತ ಹೋರಾಟಗಳು.

೧೬. ಕಾನೂನು/ಕಾಯ್ದೆಗಳ ಹೆದರಿಕೆಯಿಲ್ಲದಿರುವುದು.

೧೭. ಅಕ್ರಮಗಳನ್ನೆ ಸಕ್ರಮಗಳೆಂದು ಸಾಧಿಸುವುದು.

೧೮. ವಿಶೇಷ ಉಸ್ತುವಾರಿ ಕಾರ್ಯಪಡೆ ಇಲ್ಲದಿರುವುದು.

ಈ ಮೇಲ್ಕಂಡ ಸಮಸ್ಯೆ ಮತ್ತು ಕೊರತೆಗಳಿಂದ ನೀ.ಬ.ಸ.ಸಂಘಗಳು ತಮ್ಮ ನಿರಂತರತೆಯನ್ನು ಕಾಯ್ದುಕೊಳ್ಳಲು ತೊಡಕಾಗಿವೆ. ಈ ಸವಾಲುಗಳನ್ನು ಎದುರಿಸುವ ಶಕ್ತಿ ಸಂಘಗಳಿಗೆ ಇಲ್ಲ. ಎಲ್ಲವೂ ಮೇಲ್ಮುಖವಾಗಿ ತೀರ್ಮಾನವಾಗುವುದರಿಂದ ಸಾಮಾನ್ಯ ರೈತರ ಅಭಿಪ್ರಾಯಗಳಿಗೆ ಮನ್ನಣೆಯಿಲ್ಲ. ಇದರಿಂದ ಸಂಘಗಳ ಸುಸ್ಥಿರತೆಗೆ ಒಂದು ಯಶಸ್ವಿ ಕಾರ್ಯಕ್ರಮವನ್ನು ರೂಪಿಸುವ ಅಗತ್ಯವಿದೆ.

**೭.೮.೧. ಸಂಘಗಳ ಸಂಬಂಧಿ ಸರ್ಕಾರದ ನೀತಿ ಧೋರಣೆಗಳು**

ನೀ.ಬ.ಸ. ಸಂಘಗಳ ಕಾರ್ಯ ನಿರ್ವಹಣಾ ಸಾಮರ್ಥ್ಯವು ಸರಕಾರದ ನೀತಿ ನಿಯಮಗಳನ್ನು ಅವಲಂಬಿಸಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಸರ್ಕಾರದ ಸಹಭಾಗಿತ್ವ ನೀರಾವರಿ ನಿರ್ವಹಣೆಯ ನೀತಿಯಲ್ಲಿ ಹಲವಾರು ಲೋಪದೋಷಗಳಿರುವುದು ತಿಳಿಯುತ್ತದೆ. ಮೇಲ್ನೋಟಕ್ಕೆ ಈ ನೀತಿಯನ್ನು ಅವಲೋಕಿಸಿದರೆ ಇದೊಂದು ಉತ್ತಮವಾದ ನೀತಿ ಎನಿಸುತ್ತದೆ. ಪ್ರಾಯೋಗಿಕವಾಗಿ ಅದನ್ನು ಅನುಷ್ಠಾನಗೊಳಿಸಿದಾಗ ಅದರ ನ್ಯೂನ್ಯತೆಗಳು ತಿಳಿಯುತ್ತದೆ. ಈ ನೀತಿಯಲ್ಲಿನ ಅತಿಮುಖ್ಯ ಲೋಪವೆಂದರೆ ನೀ.ಬ.ಸ. ಸಂಘಗಳನ್ನು ಸಹಕಾರ ಕಾಯಿದೆಯಡಿ ನೋಂದಣಿ ಮಾಡಿಸಿ ಸದಸ್ಯತ್ವವನ್ನು ಐಚ್ಛಿಕಗೊಳಿಸಿರುವುದು. ನೈಸರ್ಗಿಕ ಸಂಪನ್ಮೂಲದ ಸಂರಕ್ಷಣೆ ಮತ್ತು ನಿರ್ವಹಣೆಯಲ್ಲಿ ಎಲ್ಲ ಫಲಾನುಭವಿಗಳನ್ನು ತೊಡಗಿಸಿಕೊಳ್ಳುವ ಅಗತ್ಯವಿದೆ. ಇಚ್ಛೆಯಿರುವವರಿಗೆ ಮಾತ್ರ ಸದಸ್ಯತ್ವ ನೀಡಿ, ಉಳಿದವರನ್ನು ಹಾಗೆಯೇ ಬಿಟ್ಟರೆ ವ್ಯವಸ್ಥೆ ಹದಗೆಡುತ್ತದೆ. ಜೊತೆಗೆ ಸಂಪನ್ಮೂಲದ ಅಪಬಳಕೆ ಮತ್ತು ದುಂದುಗಾರಿಕೆಗೆ ಅವಕಾಶವಾಗುತ್ತದೆ.

ಸದಸ್ಯತ್ವವನ್ನು ಐಚ್ಛಿಕಗೊಳಿಸಿರುವುದರಿಂದ ಶೇ. ೯೬ ರಷ್ಟು ಸಂಘಗಳಲ್ಲಿ ಪ್ರತಿಶತ ನೂರರಷ್ಟು ಸದಸ್ಯತ್ವ ಪಡೆಯಲು ಸಾಧ್ಯವಾಗಿಲ್ಲ. ರೈತರ ಮನವೊಲಿಕೆಯ ಮೂಲಕ ಸ್ವಯಂ ಪ್ರೇರಿತ ಸದಸ್ಯತ್ವ ಪಡೆಯುವಂತೆ ಮಾಡಲು ಸರಕಾರದಿಂದ ಯಾವುದೇ ಪ್ರೇರೇಪಕ ಕಾರ್ಯವೂ ಅನುಷ್ಠಾನವಾಗಿಲ್ಲ.

ಹಣಕಾಸಿನ ದುಸ್ಥಿತಿಯಿಂದ ಸಂಘಗಳು ಯಾವುದೇ ಕಾರ್ಯ ನಿರ್ವಹಿಸುವ ಸ್ಥಿತಿಯಲ್ಲಿಲ್ಲ. ಆರ್ಥಿಕವಾಗಿ ಬಲಿಷ್ಠವಾಗದೆ ಸಂಘಗಳ ಕಾರ್ಯ ನಿರ್ವಹಣೆಯಲ್ಲಿ ನಿರೀಕ್ಷಿತ ಸಾಧನೆ ಕಂಡುಬರುವುದಿಲ್ಲ. ಪ್ರಸ್ತುತ ನೀರಾವರಿ ಕಾಯಿದೆಯಲ್ಲಿ ಸಂಘಗಳು ನೀರುದರದಿಂದ ಸಂಗ್ರಹಿಸಿದ ಶೇ. ೨೦ ರಷ್ಟನ್ನು ಮಾತ್ರ ತನ್ನ ಆಡಳಿತಾತ್ಮಕ ವೆಚ್ಚಕ್ಕೆ ಬಳಕೆ ಮಾಡಿಕೊಳ್ಳುವ ಅವಕಾಶವಿದೆ. ಜೊತೆಗೆ ಕಾರ್ಯಾಚರಣೆ ಮತ್ತು ನಿರ್ವಹಣೆ ವೆಚ್ಚವನ್ನು ಪ್ರತಿ ಹೆಕ್ಟೇರ್‌ಗೆ ರೂ. ೪೦ನ್ನು ಬಳಕೆ ಮಾಡಿಕೊಳ್ಳಬಹುದಾಗಿದೆ. ಈ ಅಲ್ಪಮೊತ್ತದಲ್ಲಿ ಸಂಘಗಳು ಯಾವುದೇ ಉಪಯುಕ್ತ ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ. ಸದಸ್ಯತ್ವ ಐಚ್ಛಿಕವಾಗಿರುವುದರಿಂದ ಹೆಚ್ಚಿನ ಸದಸ್ಯರಿಲ್ಲದ ಸಂಘಗಳಲ್ಲಿ ನೀರು ದರ ಅತಿ ಕಡಿಮೆ ಸಂಗ್ರಹವಾಗುತ್ತದೆ. ಇದು ಕನಿಷ್ಠ ಕಾರ್ಯದರ್ಶಿಯ ವೇತನಕ್ಕೂ ಸಾಕಾಗುವುದಿಲ್ಲ. ಉಳಿದಂತೆ ಸಂಘ ನಡೆಸುವ ವಿವಿಧ ಸಭೆಗಳ ವೆಚ್ಚ, ಲೆಕ್ಕ ಪರಿಶೋಧನೆ ವೆಚ್ಚ, ಸಾರಿಗೆ ವೆಚ್ಚ, ಕಡತಗಳ ನಿರ್ವಹಣೆ ವೆಚ್ಚ ಮೊದಲಾದವುಗಳಿಗೆ ಹಣಕಾಸಿನ ಕೊರತೆಯಾಗುತ್ತದೆ. ಇದಲ್ಲದೆ ತೂಬಿನ ಕೆಳಗಿನ ನೀರಾವರಿ ಜಾಲದ ದುರಸ್ಥಿ ಮತ್ತು ನಿರ್ವಹಣೆಯು ನೀ.ಬ.ಸ. ಸಂಘಗಳ ಹೊಣೆಗಾರಿಕೆಯಾಗಿರುವುದರಿಂದ ಅದು ಹೆಚ್ಚಿನ ಬಂಡವಾಳ ಬೇಡುವ ಸಂಗತಿಯಾಗಿದೆ. ಆದುದರಿಂದ ಈಗಿನ ಸರ್ಕಾರದ ಧೋರಣೆಯು ಹಣಕಾಸಿನ ಸ್ವಾವಲಂಬನೆಗೆ ಪೂರಕವಾಗಿಲ್ಲ.

ಸಂಘಗಳ ಹಣಕಾಸಿನ ಸ್ವಾಯತ್ತತೆಗೆ ಹಲವಾರು ಕ್ರಮಗಳನ್ನು, ಮಾರ್ಗಗಳನ್ನು ಸರ್ಕಾರ ಸೂಚಿಸಿದೆಯಾದರೂ ಅಂತಹ ಮಾರ್ಗಗಳಿಂದ ಸಂಘಗಳಿಗೆ ಹಣಕಾಸು ಪಡೆಯಲು ಸಾಧ್ಯವಾಗುತ್ತಿಲ್ಲ. ನೀ.ಬ.ಸ. ಸಂಘಗಳ ಉದ್ದೇಶಗಳಲ್ಲಿ ಉಲ್ಲೇಖಿಸಿರುವಂತೆ ಸಂಘವು ಕಚೇರಿಯ ಉಗ್ರಾಣ ವ್ಯವಸ್ಥೆಯನ್ನು ಪಡೆದಿರುತ್ತದೆ. ಈ ದಾಸ್ತಾನು ಮಳಿಗೆಯಲ್ಲಿ ಬಿತ್ತನೆ ಬೀಜ, ರಸಗೊಬ್ಬರ, ಕೀಟನಾಶಕ, ಟ್ರಾಕ್ಟರ್, ಕೃಷಿ ಉಪಕರಣಗಳನ್ನು ವಾಣಿಜ್ಯ ಉದ್ದೇಶಗಳಿಗೆ ಕೃಷಿಕರಿಗೆ ನೀಡಿ ಆ ಮೂಲಕ ಹೆಚ್ಚಿನ ವರಮಾನ ಗಳಿಸಬೇಕು. ವಾಸ್ತವದಲ್ಲಿ ಇಂತಹ ವ್ಯಾಪಾರಿ ಚಟುವಟಿಕೆಗಳು ಕಾರ್ಯ ಸಾಧುವಲ್ಲ ಎನ್ನುವುದು ಎಲ್ಲ ಸಂಘದ ಕಾರ್ಯದರ್ಶಿ ಮತ್ತು ಪದಾಧಿಕಾರಿಗಳ ಅಭಿಪ್ರಾಯವಾಗಿದೆ. ನಮ್ಮ ರೈತರು ಸಮೀಪದ ನಗರ ಪಟ್ಟಣಗಳಿಂದ ಸಾಲ ರೂಪದಲ್ಲಿ ಕೃಷಿ ಪರಿಕರಗಳನ್ನು ಪಡೆಯುವ ರೂಢಿ ಇಟ್ಟುಕೊಂಡಿದ್ದಾರೆ. ತಮ್ಮ ಅನುಕೂಲಕ್ಕೆ ತಕ್ಕ ಹಾಗೆ ಅವುಗಳನ್ನು ಪಡೆಯುತ್ತಾರೆ. ಇದರಿಂದ ಸಂಘವು ದೀರ್ಘಕಾಲದ ಸಾಲ ನೀಡುವಷ್ಟು ಸದೃಢವಾಗಿಲ್ಲ. ಅಷ್ಟೇ ಅಲ್ಲದೆ ಮೇಲ್ಕಂಡ ಎಲ್ಲ ಕೃಷಿ ಪರಿಕರಗಳನ್ನು ಕೊಂಡುಕೊಂಡು ಮಾರಾಟ ಮಾಡುವ ಸ್ಥಿತಿಯಲ್ಲಿ ಯಾವ ಸಂಘವೂ ಇಲ್ಲ. ಆದುದರಿಂದ ಸಂಘದ ಹಣಕಾಸಿನ ಸ್ಥಿತಿಯಲ್ಲಿ ಸುಧಾರಣೆಯಾಗದೆ ಪ್ರಸ್ತುತ ಸರ್ಕಾರ ಸೂಚಿಸಿರುವ ಮಾರ್ಗ ಸೂಕ್ತವಾಗಿಲ್ಲ.

ಬಹುತೇಕ ನೀ.ಬ.ಸ. ಸಂಘಗಳು ತಾಂತ್ರಿಕವಾಗಿ ಕಾರ್ಯನಿರ್ವಹಿಸುತ್ತಿವೆ. ಇದು ನಿಯಮದ ದೃಷ್ಟಿಯಲ್ಲಿ ಉತ್ತಮವೆಂದು ಪರಿಗಣಿತವಾಗುತ್ತದೆ. ಆದರೆ ಗುಣಾತ್ಮಕವಾಗಿ ಅವುಗಳ ಕಾರ್ಯ ನಿರ್ವಹಣೆ

ಶೂನ್ಯವಾಗಿದೆ. ಈ ಬಗ್ಗೆ ಕರ್ತೃ ಸಂಸ್ಥೆ ಕಾಡಾ ಯಾವ ಕ್ರಮವನ್ನು ತೆಗೆದುಕೊಳ್ಳುವುದಿಲ್ಲ. ಅದು ತಾಂತ್ರಿಕ ಸಂಗತಿಗಳನ್ನು ಮಾತ್ರ ಪರಿಗಣಿಸುತ್ತದೆ. ನೀ.ಬ.ಸ. ಸಂಘಗಳಲ್ಲಿ ಸಹಕಾರ ತತ್ವ ಪ್ರಜಾಸತ್ತಾತ್ಮಕವಾಗಿ ಹೇಗೆ ವಿಕೇಂದ್ರೀಕರಣದ ಮೂಲಕ ಎಲ್ಲ ಜನವರ್ಗಗಳಿಗೆ ತಲುಪುತ್ತದೆ ಎನ್ನುವುದನ್ನು ಗಮನಿಸುವುದಿಲ್ಲ. ನೀರಾವರಿಗೆ ಸಂಬಂಧಿಸಿದ ಎಲ್ಲ ಇಲಾಖೆಗಳ ಸಹಯೋಗ, ಸಮನ್ವಯತೆಯ ಕುರಿತು ಯಾವುದೇ ನೀತಿ ನಿಯಮವಿಲ್ಲ. ಪ್ರಸ್ತುತ ನೀರಾವರಿ ಕಾಯಿದೆಯಲ್ಲಿ ಜಲನೀತಿಯಲ್ಲಿ ಉತ್ತಮವಾಗಿ ಕಾರ್ಯ ನಿರ್ವಹಿಸುವ ನೀ.ಬ.ಸ. ಸಂಘಗಳಿಗೆ ಯಾವುದೇ ಪ್ರೋತ್ಸಾಹಕ ಕ್ರಮಗಳು ಇಲ್ಲ.

ಅತಿಮುಖ್ಯವಾದ ಸಂಗತಿಯೆಂದರೆ ಸಹಭಾಗಿತ್ವ ನೀರಾವರಿ ನಿರ್ವಹಣೆಯ ಯೋಜನೆಯಲ್ಲಿ ಅಂತರ್ಜಲ, ಮಳೆ ಕೊಯ್ಲು, ಕೆರೆ ನೀರು, ಆಧುನಿಕ ನೀರಾವರಿ ಮೊದಲಾದ ಸಂಯೋಜಿತ ನೀರಾವರಿಯ ಕುರಿತು ಯೋಜನೆ ಅಥವಾ ಕಾರ್ಯಕ್ರಮ ರೂಪಿತವಾಗಿಲ್ಲ. ಇದರಿಂದ ಹೆಚ್ಚಿನ ಜಲಸಂಪನ್ಮೂಲ ವ್ಯರ್ಥವಾಗುತ್ತದೆ. ಈ ಬಗ್ಗೆ ಸರ್ಕಾರ ಒಂದು ಕಾರ್ಯತಂತ್ರವನ್ನು ರೂಪಿಸಿ ಅನುಷ್ಠಾನಗೊಳಿಸಿದ್ದರೆ, ಭೂಮಿಯ ಫಲವತ್ತತೆಯನ್ನು ಸಂರಕ್ಷಿಸಿ, ಹೆಚ್ಚಿನ ಪ್ರದೇಶಕ್ಕೆ ನೀರಾವರಿ ಒದಗಿಸಲು ಸಾಧ್ಯವಾಗುತ್ತಿತ್ತು.

ನೀ.ಬ.ಸ. ಸಂಘಗಳಲ್ಲಿ ಮಹಿಳಾ ಮೀಸಲಾತಿಯನ್ನು ಕಲ್ಪಿಸಲಾಗಿದೆ. ಆದರೆ ಜಮೀನು ಹೊಂದಿರುವ ಮಹಿಳೆಯರಿಗೆ ಮಾತ್ರ ಈ ಮೀಸಲಾತಿ ಅನ್ವಯವಾಗುತ್ತದೆ. ಕರ್ನಾಟಕದಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಹಕ್ಕು ನೀಡಲಾಗಿದ್ದರೂ ಅದು ಬಹುತೇಕ ಆಚರಣೆಗೆ ಬಂದಿಲ್ಲ. ಇದರಿಂದ ಪುರುಷನ ಹೆಸರಿನಲ್ಲಿ ಜಮೀನು ಇದ್ದರೂ ಮಹಿಳೆಗೆ ಸಂಘಗಳಲ್ಲಿ ಸದಸ್ಯತ್ವ ಪಡೆಯುವ ಅವಕಾಶ ಸದ್ಯದ ನೀರಾವರಿ ಕಾಯಿದೆಯಲ್ಲಿ ಇಲ್ಲದಿರುವುದು ಮಹಿಳಾ ಪಾಲ್ಗೊಳ್ಳುವಿಕೆಗೆ ಅಡ್ಡಿಯಾಗಿದೆ. ಆಸ್ತಿಯ ಹಕ್ಕು ಹೊಂದಿರದೆ ಇರುವ ಮಹಿಳೆಯರು ದೊರೆಯದೇ ಇದ್ದಾಗ ಆ ಸ್ಥಾನಕ್ಕೆ ಪುರುಷರನ್ನೇ ನೇಮಕ ಮಾಡಿಕೊಳ್ಳುವ ಪರಿಪಾಠ ಬೆಳೆದಿದೆ. ಇದು ಲಿಂಗ ಸಮಾನತೆಗೆ ವಿರುದ್ಧವಾದ ವಾತಾವರಣಕ್ಕೆ ಅವಕಾಶವಾಗುತ್ತದೆ.

ಈ ಮೇಲ್ಕಂಡ ಹಲವಾರು ಲೋಪದೋಷಗಳಿದ್ದರೂ ನೀರಾವರಿ ಕಾಯಿದೆ ಕೆಲ ಉತ್ತಮ ಸಂಗತಿಗಳನ್ನು ಒಳಗೊಂಡಿದೆ. ಸಹಕಾರ ತತ್ವದ ಆಧಾರದ ಮೇಲೆ ವ್ಯವಸ್ಥೆಯನ್ನು ಬಲಪಡಿಸಿದರೆ ಸಂಘಗಳ ಅಸ್ತಿತ್ವ ಭದ್ರವಾಗುತ್ತದೆ. ರೈತರು ಸ್ವಯಿಚ್ಛೆಯಿಂದ ಸದಸ್ಯತ್ವ ಪಡೆದರೆ ಪಾಲುಗೊಳ್ಳುವಿಕೆ ಗುಣಾತ್ಮಕವಾಗಿರುತ್ತದೆ. ಆದರೆ ಅಂತಹ ವಾತಾವರಣ ಮತ್ತು ಪೂರಕ ಸನ್ನಿವೇಶಯಿಲ್ಲದ ಕಾರಣ ನೀ.ಬ.ಸ. ಸಂಘಗಳು ಸ್ಥಗಿತ ಸ್ಥಿತಿಯಲ್ಲಿವೆ. ಈ ಜಡಸ್ಥಿತಿಯನ್ನು ನಿವಾರಿಸಲು ಸೂಕ್ತ ನೀರಾವರಿ ಕಾರ್ಯಕ್ರಮದ ಅವಶ್ಯಕತೆಯಿದೆ.

## ೭.೯. ಸಂಘಗಳ ಉತ್ತರದಾಯಿತ್ವ ಮತ್ತು ಪಾರದರ್ಶಕತೆ

ಸಂಘ ಸಂಸ್ಥೆಗಳ ಕಾರ್ಯ ಸಾಧನೆಯನ್ನು ಅವುಗಳ ಉತ್ತರದಾಯಿತ್ವದ ಮೇಲೆ ಮಾಪನ ಮಾಡಲಾಗುತ್ತದೆ. ನೀ.ಬ.ಸ. ಸಂಘಗಳು ತಮ್ಮ ಉದ್ದೇಶಗಳನ್ನು ಸಾಧಿಸುವಲ್ಲಿ, ಸದಸ್ಯರಿಗೆ ನೆರವಾಗುವಲ್ಲಿ ಎಷ್ಟರ ಮಟ್ಟಿಗೆ ಸಫಲವಾಗಿವೆ ಎನ್ನುವುದರ ಆಧಾರದ ಮೇಲೆ ಅವುಗಳ ಉತ್ತರದಾಯಿತ್ವ ನಿರ್ಧಾರವಾಗುತ್ತದೆ. ಉತ್ತರದಾಯಿತ್ವವೆಂದರೆ ಸಂಘಗಳು ಕೇವಲ ಹಣಕಾಸಿನ ಹೊಣೆಗಾರಿಕೆಗಳನ್ನು ನಿರ್ವಹಿಸುವುದು ಮಾತ್ರವಲ್ಲ, ಬಳಕೆದಾರರಿಗೆ ನಿರೀಕ್ಷೆಗಳಿಗೆ ಹೇಗೆ ಸ್ಪಂದಿಸುತ್ತವೆ ಎನ್ನುವುದೂ ಮುಖ್ಯವಾಗುತ್ತದೆ. ನೀರಾವರಿಯಲ್ಲಿನ ಸಮಸ್ಯೆಗಳನ್ನು ನಿವಾರಿಸುವಲ್ಲಿ, ವಿವಿಧ ವರ್ಗದ ಸದಸ್ಯರ ಮತ್ತು ಸದಸ್ಯೇತರರ ನಡುವೆ ಉಂಟಾಗುವ ವಿವಾದಗಳನ್ನು ಇತ್ಯರ್ಥಪಡಿಸುವಲ್ಲಿ, ಸರ್ಕಾರದಿಂದ ಸದಸ್ಯರಿಗೆ ಸಿಗುವ ಸೌಲಭ್ಯಗಳನ್ನು ದೊರಕಿಸಿ ಕೊಡುವಲ್ಲಿ ಉತ್ತರದಾಯಿತ್ವದ ಸಾಮರ್ಥ್ಯವನ್ನು ನಿರ್ಣಯಿಸಲಾಗುತ್ತದೆ. ಸಂಘವನ್ನು ಲಾಭದಾಯಕವಾಗಿ ನಡೆಸುವುದರ ಜೊತೆಗೆ ಸದಸ್ಯರ ಹಿತಾಸಕ್ತಿಗಳನ್ನು ಗಮನಿಸಿ ಅದಕ್ಕೆ ಅನುಗುಣವಾಗಿ ಕ್ರಮಗಳನ್ನು ಕೈಗೊಂಡರೆ ಆಗ ಸಂಘಗಳು ಉನ್ನತ ಮಟ್ಟದ ಉತ್ತರದಾಯಿತ್ವ ಸಾಧಿಸಿದಂತಾಗುತ್ತದೆ.

ಈ ನಿಟ್ಟಿನಲ್ಲಿ ಪ್ರಸ್ತುತ ನೀ.ಬ.ಸ. ಸಂಘಗಳು ಅಂತಹ ಉತ್ತಮ ಸ್ಥಿತಿಯಲ್ಲಿಲ್ಲ. ಶೇ. ೯೪ ರಷ್ಟು ಸಂಘಗಳು ಮೂಲಭೂತವಾಗಿ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿಲ್ಲ. ಆರ್ಥಿಕವಾಗಿ ಹೊಸಹಳ್ಳಿ ನೀ.ಬ.ಸ. ಸಂಘ ಸ್ವಾವಲಂಬನೆಯನ್ನು ಪಡೆದುಕೊಂಡಿದೆ. ಉಳಿದಂತೆ ಅಕ್ರಮ ಮತ್ತು ಅನಧಿಕೃತ ಚಟುವಟಿಕೆಗಳನ್ನು ತಡೆಯುವಲ್ಲಿ, ಬೆಳೆ ಮಾದರಿ, ವಾರಾಬಂದಿ ಪಾಲನೆ ಮಾಡುವಲ್ಲಿ ಶೇ. ೧೦೦ ರಷ್ಟು ಸಂಘಗಳು ವಿಫಲವಾಗಿವೆ. ವಿವಾದಗಳನ್ನು ಇತ್ಯರ್ಥಪಡಿಸುವಲ್ಲಿ, ಸರ್ಕಾರದಿಂದ ಸೌಲಭ್ಯಗಳನ್ನು ಸದಸ್ಯರಿಗೆ ಕಲ್ಪಿಸುವಲ್ಲಿ ಯಾವುದೇ ಸಂಘ ಸಂಪೂರ್ಣ ಯಶಸ್ವಿಯಾಗಿಲ್ಲ. ನಿವ್ವಳ ಲಾಭ ಗಳಿಸುವಲ್ಲಿ ಹೊಸಹಳ್ಳಿ ಸಂಘ ಉತ್ತಮ ಸಾಧನೆ ಮಾಡಿದೆ. ಉಳಿದಂತೆ ೨೪ ಸಂಘಗಳು ನಷ್ಟದಲ್ಲಿವೆ. ಒಟ್ಟಾರೆ ಉತ್ತರದಾಯಿತ್ವದ ನೆಲೆಯಲ್ಲಿ ನೀ.ಬ.ಸ. ಸಂಘಗಳು ನಿರೀಕ್ಷಿತ ಮಟ್ಟವನ್ನು ತಲುಪದೇ ಇರುವುದು ಕಂಡುಬಂದಿದೆ.

ನೀ.ಬ.ಸ. ಸಂಘಗಳ ಆಡಳಿತ ವೈಖರಿಯೇ ಅಸಮರ್ಪಕ ಮತ್ತು ಅಸಮಂಜಸತೆಯಿಂದ ಕೂಡಿದೆ. ಯಾವುದೇ ಚಟುವಟಿಕೆಗಳು ಕ್ರಮಬದ್ಧವಾಗಿ ಮತ್ತು ನಿಯಮಬದ್ಧವಾಗಿ ನಡೆಯುತ್ತಿಲ್ಲ. ಕಾರ್ಯದರ್ಶಿಗಳಿಗೆ ಕಾರ್ಯಕಾರಿ ಮಂಡಳಿ ಸಭೆ ಮತ್ತು ಸರ್ವ ಸದಸ್ಯರ ಸಭೆಗಳನ್ನು ನಡೆಸುವ ಪ್ರಾಥಮಿಕ ಜ್ಞಾನವೂ ಇಲ್ಲ. ಲೆಕ್ಕಪತ್ರ ನಿರ್ವಹಣೆಗೆ ಇತರರನ್ನು ಅವಲಂಬಿಸುವ ಸ್ಥಿತಿಯಿದೆ. ಸಂಘಗಳ ವಿವಿಧ ಸಭೆಗಳಲ್ಲಿ ಲೆಕ್ಕಪತ್ರಗಳ ಮಂಡನೆಯಾಗುವುದಿಲ್ಲ. ಮಂಡನೆಯಾದ ಕೆಲವು ಸಂಘಗಳಲ್ಲಿ ಆ ಬಗ್ಗೆ ಹೆಚ್ಚಿನ ಚರ್ಚೆಗಳು ನಡೆಯುವುದಿಲ್ಲ. ಉತ್ತಮ ಆಡಳಿತದ ಒಂದು ಮುಖ್ಯ ಮಾನದಂಡವೆಂದರೆ ಪಾರದರ್ಶಕತೆ. ಪಾರದರ್ಶಕತೆ ಯೆನ್ನುವ ಸಂಗತಿ ಬಗ್ಗೆ ಬಳಕೆದಾರರಿಗೂ, ಆಡಳಿತ ಮಂಡಳಿಯ ಪದಾಧಿಕಾರಿಗಳಿಗೂ ಅರಿವಿಲ್ಲ. ಯಾವುದೇ ಮಾಹಿತಿಯನ್ನು ಸಂಘದ ಸೂಚನಾ ಫಲಕದಲ್ಲಿ ಪ್ರಕಟಿಸುವ ವ್ಯವಸ್ಥೆ ಕಂಡುಬಂದಿಲ್ಲ.

ಯಾವ ಸಂಘದಲ್ಲಿಯೂ ಸೂಚನಾ ಫಲಕವೇ ಇಲ್ಲ. ಉಳಿದಂತೆ ಮಾಹಿತಿಗಳು ಗೌಪ್ಯತೆಯಿಂದ ಇರುತ್ತವೆಯೇ ಹೊರತು ಅವುಗಳು ಸದಸ್ಯರಿಗೆ ತಿಳಿಯುವ ಸಾಧ್ಯತೆಗಳು ಕಡಿಮೆ.

ಈ ದೃಷ್ಟಿಯಿಂದ ಸಂಘಗಳಲ್ಲಿ ಪಾರದರ್ಶಕತೆ ಬಹುಮಟ್ಟಿಗೆ ಕಾಣುವುದಿಲ್ಲ. ಈ ಕುರಿತು ಬೈಲಾ ನಿಯಮಗಳಲ್ಲಿ ವಿಷಯಗಳು ಸ್ಪಷ್ಟವಾಗಿ ನಮೂದಿಸಲಾಗಿದೆ. ಆದರೂ ಆ ಬಗ್ಗೆ ಯಾವುದೇ ಸಂಘವೂ ಕ್ರಮ ತೆಗೆದುಕೊಂಡಿಲ್ಲ. ಮುಕ್ಕಾಲುಪಾಲು ನೀ.ಬ.ಸ. ಸಂಘಗಳು ಸಂಪೂರ್ಣವಾಗಿ ಸ್ಥಗಿತ ಸ್ಥಿತಿ ತಲುಪಿರುವುದರಿಂದ ಉತ್ತರದಾಯಿತ್ವ ಮತ್ತು ಪಾರದರ್ಶಕತೆಯ ಪ್ರಶ್ನೆ ಉದ್ಭವಿಸುವುದಿಲ್ಲ ಎನ್ನುತ್ತಾರೆ ಕಾಡಾದ ಅಧಿಕಾರಿಗಳು. ಶೇ. ೨೦ ರಷ್ಟು ಸಂಘಗಳು ಮುಖ್ಯವಲ್ಲದ ಸಂಗತಿಗಳನ್ನು ಮಾತ್ರ ಸಭೆಗಳಲ್ಲಿ ಮಂಡಿಸುತ್ತವೆ. ಮಹತ್ವದ ವಿಷಯಗಳು ಸದಸ್ಯರ ಗಮನಕ್ಕೆ ಬರುವುದಿಲ್ಲ. ಹೀಗೆ ಉತ್ತರದಾಯಿತ್ವ ಮತ್ತು ಪಾರದರ್ಶಕತೆಯ ಪರಿಕಲ್ಪನೆ ನೀ.ಬ.ಸ. ಸಂಘಗಳಿಗೆ ಇನ್ನು ಅರ್ಥವಾಗಿಲ್ಲ. ಆ ಕುರಿತು ಅವುಗಳು ಇನ್ನೂ ಮೊದಲ ಹೆಜ್ಜೆಯನ್ನೆ ಇಟ್ಟಿಲ್ಲ.

### ೭.೧೦. ಸಂಘಗಳ ಸಾಧನೆ ಮತ್ತು ವೈಫಲ್ಯಗಳು

ಅಧ್ಯಯನ ಕ್ಷೇತ್ರದಲ್ಲಿನ ನೀ.ಬ.ಸ. ಸಂಘಗಳ ಕಾರ್ಯ ವೈಖರಿಯನ್ನು ಅವಲೋಕಿಸಿದರೆ ಅವುಗಳ ಸಾಧನೆಗಳು ಅಲ್ಪಪ್ರಮಾಣದಲ್ಲಿದ್ದು, ವೈಫಲ್ಯಗಳೇ ಅಧಿಕವಾಗಿವೆ. ಆರಂಭದಲ್ಲಿ ಸಂಘಗಳ ಸ್ಥಾಪನೆ ಮತ್ತು ಒಡಂಬಡಿಕೆ ಒಪ್ಪಂದವಾಗುವ ತನಕ ನಿಯಮಾನುಸಾರ ಅಗತ್ಯವಿರುವ ತಾಂತ್ರಿಕ ವ್ಯವಸ್ಥೆಗಳನ್ನು ಪೂರೈಸಿರುವುದೇ ಅವುಗಳ ಸಾಧನೆಯಾಗಿದೆ. ಉಳಿದಂತೆ ಶೇ. ೯೬ ರಷ್ಟು ನೀ.ಬ.ಸ. ಸಂಘಗಳು ಯಾವುದೇ ಗುಣಾತ್ಮಕ ಕಾರ್ಯಗಳನ್ನು ಕೈಗೊಂಡಿಲ್ಲ. ಹೊಸಹಳ್ಳಿ ನೀ.ಬ.ಸ. ಸಂಘ ಸದಸ್ಯತ್ವದಲ್ಲಿ ಪ್ರತಿಶತ ನೂರರಷ್ಟು ಸಾಧನೆಗೈದಿದೆ. ಹಣಕಾಸಿನ ಸ್ವಾವಲಂಬನೆಯನ್ನು ಪಡೆದು ಕರ್ನಾಟಕ ರಾಜ್ಯದ ಮಾದರಿ ನೀ.ಬ.ಸ. ಸಂಘಗಳಲ್ಲಿ ಒಂದಾಗಿದೆ. ಉಳಿದ ೨೪ ನೀ.ಬ.ಸ. ಸಂಘಗಳು ಸದಸ್ಯತ್ವ, ಹಣಕಾಸು, ವಿವಾದಗಳ ಇತ್ಯರ್ಥ, ಮೊದಲಾದ ಸಂಗತಿಗಳಲ್ಲಿ ಯಾವುದೇ ಪ್ರಗತಿ ಸಾಧಿಸಿಲ್ಲ. ಮುಂದೆ ಸಾಧಿಸುವ ಲಕ್ಷಣಗಳು ಕಂಡುಬರುತ್ತಿಲ್ಲ.

ನೀ.ಬ.ಸ. ಸಂಘಗಳ ವೈಫಲ್ಯಗಳ ಸರಮಾಲೆಯನ್ನೇ ಪಟ್ಟಿ ಮಾಡಬಹುದು. ಆಡಳಿತ ಮಂಡಳಿ ಸಭೆಗಳನ್ನು ನಿಯಮಿತವಾಗಿ ಕಾಲಕಾಲಕ್ಕೆ ನಡೆಸುತ್ತಿಲ್ಲ. ಸರ್ವಸದಸ್ಯರ ಸಭೆಗೆ ಹಾಜರಾತಿ ಅತಿ ಕಡಿಮೆಯಿರುತ್ತದೆ. ಕೋರಂ ಇಲ್ಲದೆಯೂ ಸಭೆಗಳು ನಡೆಯುತ್ತವೆ. ನಂತರ ಸಹಿ ಪಡೆದು ಸರಿ ಮಾಡುವ ವ್ಯವಸ್ಥೆ ಹೆಚ್ಚಾಗಿದೆ. ಸಭೆಗಳಲ್ಲಿ ಮಹತ್ವ ವಿಷಯಗಳಿಗೆ ಆದ್ಯತೆಯಿರುವುದಿಲ್ಲ. ಮಹಿಳೆಯರ ಭಾಗವಹಿಸುವಿಕೆ ಅತ್ಯಲ್ಪವಾಗಿದ್ದು, ಅವರಿಗೆ ಬದಲು ಕುಟುಂಬದ ಇತರೆ ವ್ಯಕ್ತಿಗಳು ಹಾಜರಾಗುವುದೇ ಹೆಚ್ಚು. ಯಾವುದೇ ಸಂಘದಲ್ಲಿ ಕನಿಷ್ಟ ಸಂಖ್ಯೆಯ ಕಡತ ಮತ್ತು ಪುಸ್ತಕಗಳು ನಿರ್ವಹಿಸಲ್ಪಡುತ್ತಿಲ್ಲ. ಕಾರ್ಯದರ್ಶಿಗಳು ಅನನುಭವಿಗಳಾಗಿದ್ದು ನಡಾವಳಿಗಳನ್ನು ನಮೂದಿಸುವಷ್ಟು ತರಬೇತಿ ಪಡೆದಿಲ್ಲ.

ಹೊಸಹಳ್ಳಿ ಸಂಘವನ್ನು ಹೊರತುಪಡಿಸಿದರೆ ಉಳಿದ ಎಲ್ಲ ಸಂಘಗಳು ನಿವ್ವಳ ನಷ್ಟದಲ್ಲಿವೆ. ಸರಕಾರದಿಂದ ಬರುವ ಸೌಲಭ್ಯಗಳನ್ನು ಪಡೆಯುವಲ್ಲಿ ಶೇ. ೮೦ ರಷ್ಟು ಸಂಘಗಳು ವಿಫಲವಾಗಿವೆ.

ಶೇ. ೭೬ ರಷ್ಟು ಸಂಘಗಳು ಲೆಕ್ಕ ಪರಿಶೋಧನೆಗಳನ್ನು ವಾರ್ಷಿಕವಾಗಿ ಮಾಡುತ್ತಿಲ್ಲ. ಹಣಕಾಸಿನ ವಿತರಣೆಯು ನಿಯಮಬದ್ಧವಾಗಿರದೆ, ಅಸಮರ್ಪಕವಾಗಿ ಹಂಚಿಕೆಯಾಗಿರುವುದು ತಿಳಿದುಬರುತ್ತದೆ. ನೀರಿನ ಮಿತವ್ಯಯ ಮಾಡುವಲ್ಲಿ, ಬೆಳೆ ಮಾದರಿ ಪಾಲನೆಯಲ್ಲಿ, ವಾರಾಬಂದಿ ಅಳವಡಿಕೆಯಲ್ಲಿ ಎಲ್ಲ ಸಂಘಗಳು ವಿಫಲವಾಗಿವೆ. ಅನಧಿಕೃತ ಸಾಗುವಳಿ, ಅಕ್ರಮ ನೀರು ಎತ್ತುವಳಿ, ಕೆರೆ, ಕಾಲುವೆಗಳ ಒತ್ತುವರಿ ತಡೆಯುವಲ್ಲಿ ಯಾವ ಸಂಘವು ಯಶಸ್ವಿಯಾಗಿಲ್ಲ. ಅಂತರ್ಜಲ, ಮಳೆ ನೀರು, ಕೆರೆ, ಒಡ್ಡುಗಳ ನೀರನ್ನು ಕಾಲುವೆ ನೀರಿಗೆ ಪೂರಕವಾಗಿ ಯಾವ ಸಂಘವೂ ಬಳಕೆ ಮಾಡುತ್ತಿಲ್ಲ. ಪೋಲಾಗುವ ನೀರನ್ನು ಉಪಯುಕ್ತವಾಗಿ ಬಳಕೆ ಮಾಡಿಕೊಂಡಿಲ್ಲ. ಕಾಲುವೆಯ ಮೇಲ್ತುದಿ ರೈತರ ಅಧಿಕ ನೀರು ಬಳಕೆಯನ್ನು ತಡೆಗಟ್ಟಿ, ಕೆಳತುದಿ ರೈತರಿಗೆ ಸಾಕಷ್ಟು ನೀರು ಪೂರೈಸಲು ಯಾವ ಸಂಘದಿಂದಲೂ ಸಾಧ್ಯವಾಗಿಲ್ಲ.

ನೀರು ದರ ಮತ್ತು ಅಭಿವೃದ್ಧಿಯ ವಂತಿಗೆ ಸಂಗ್ರಹದಲ್ಲಿ ಹೊಸಹಳ್ಳಿ ಸಂಘವನ್ನು ಹೊರತುಪಡಿಸಿದರೆ ಉಳಿದ ಸಂಘಗಳ ಸಾಧನೆ ಶೂನ್ಯ. ಒಟ್ಟಾರೆ ಸರ್ಕಾರದ ಒತ್ತಾಯದ ಮೇರೆಗೆ ಬಲವಂತವಾಗಿ ನೀ.ಬ.ಸ. ಸಂಘಗಳನ್ನು ಸ್ಥಾಪಿಸಲಾಗಿದೆಯೇ ಹೊರತು ರೈತರೇ ತಮ್ಮ ಸ್ವಯಿಚ್ಛೆಯಿಂದ ಸಂಘಗಳ ಮುಂದುವರಿಕೆಗೆ ಯಾವುದೇ ಪ್ರಯತ್ನಗಳನ್ನು ಮಾಡುತ್ತಿಲ್ಲ. ಸಂಘಗಳ ಸಬಲೀಕರಣಕ್ಕೆ ಕರ್ತೃ ಸಂಸ್ಥೆ ಕಾಡಾ ಹಲವಾರು ಕ್ರಮಗಳನ್ನು ಕೈಗೊಂಡಿದೆ. ಆದರೂ ರೈತರ ಇಚ್ಛಾಸಕ್ತಿಯ ಕೊರತೆಯಿಂದ ಸಂಘಗಳು ಸಕಾರಾತ್ಮಕವಾಗಿ ಸ್ಪಂದಿಸಲು ಸಾಧ್ಯವಾಗುತ್ತಿಲ್ಲ.

**೭.೧೦.೧. ಆಯ್ದ ಎರಡು ನೀ.ಬ.ಸ. ಸಂಘಗಳ ಕಾರ್ಯ ಸಾಧನೆಯ ತೌಲನಿಕ ನೋಟ**

ಹೊಸಹಳ್ಳಿ ನೀ.ಬ.ಸ. ಸಂಘ ಮತ್ತು ಅರಹತೊಳಲು ನೀ.ಬ.ಸ. ಸಂಘಗಳ ಸಾಮಾಜಿಕ ರಚನೆಯನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಈ ಎರಡು ಸಂಘಗಳ ಕಾರ್ಯ ಸಾಧನೆಯನ್ನು ವಿಶ್ಲೇಷಿಸಲಾಗಿದೆ.

**೧. ಹೊಸಹಳ್ಳಿ ನೀ.ಬ.ಸ. ಸಂಘ**

ಈ ಸಂಘದ ವ್ಯಾಪ್ತಿಯಲ್ಲಿ ಒಟ್ಟು ೬೬೧ ಅಚ್ಚುಕಟ್ಟುದಾರರಿದ್ದು ಎಲ್ಲರು ಸಂಘದ ಸದಸ್ಯತ್ವ ಪಡೆದಿದ್ದಾರೆ. ಶೇ. ೧೦೦ ರಷ್ಟು ನೀರು ದರ ವಸೂಲಿ ಮಾಡಲಾಗಿದೆ. ಸರ್ಕಾರದ ಯಾವುದೇ ನೆರವಿಲ್ಲದೆ ರೂ. ೩,೩೦,೦೦೦ ಮೊತ್ತದ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ. ಆಯಾ ಪ್ರದೇಶದ ಕಾಲುವೆಯ ವ್ಯಾಪ್ತಿಯ ರೈತರ ಹಣಕಾಸು ಮತ್ತು ಶ್ರಮದಾನದಿಂದ ಅತ್ಯಂತ ಕಡಿಮೆ ವೆಚ್ಚದಲ್ಲಿ ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಅನಧಿಕೃತ ಮತ್ತು ಅಕ್ರಮ ನೀರು ಎತ್ತುವಳಿದಾರರಿಂದ ದಂಡದ ರೂಪದಲ್ಲಿ ಪ್ರತಿ ಎಕರೆಗೆ ಯಾವುದೇ ಬೆಳೆಯಾದರೂ ರೂ. ೧೧೦ ವಸೂಲಿ ಮಾಡಲಾಗುತ್ತಿದೆ.

ಸಂಘದ ಕಟ್ಟಡದ ನಿವೇಶನವನ್ನು ಅತ್ಯಂತ ಕಡಿಮೆ ಬೆಲೆಯಲ್ಲಿ ಸದಸ್ಯರಿಂದ ಪಡೆಯಲಾಗಿದೆ. ಕಟ್ಟಡ ನಿಧಿಗಾಗಿ ಪ್ರತಿ ಸದಸ್ಯರಿಂದ ರೂ. ೫೦ ಸಂಗ್ರಹಿಸಲಾಗಿದೆ. ಸರ್ಕಾರದ ಸಹಾಯಧನದಲ್ಲಿ ಕಟ್ಟಡವನ್ನು ಪೂರ್ಣಗೊಳಿಸಲಾಗಿದೆ. ಶೇ. ೧೦ ರಷ್ಟು ವೆಚ್ಚವನ್ನು ಸಂಘವೇ ಭರಿಸಿದೆ. ಕಚೇರಿಯ ಉಗ್ರಾಣವನ್ನು ನಿರ್ಮಾಣ ಮಾಡಲಾಗಿದೆ. ಉಗ್ರಾಣವನ್ನು ಎರಡು ಕೊಠಡಿಗಳನ್ನಾಗಿ ವಿಂಗಡಿಸಿ ಒಂದು ದಿನಸಿ ಅಂಗಡಿ ಮತ್ತು ಇನ್ನೊಂದನ್ನು ಕ್ಯಾಂಟೀನ್‌ಗೆ ಒಟ್ಟು ಮಾಸಿಕ ರೂ. ೬೦೦ ಬಾಡಿಗೆಗೆ ನೀಡಲಾಗಿದೆ. ಕಟ್ಟಡ ಸಮಿತಿಯ ಮಾರ್ಗದರ್ಶನದಲ್ಲಿ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.

ಸಂಘವು ೨೦೦೩-೦೪ ನೇ ಸಾಲಿನಲ್ಲಿ ರೂ. ೪,೮೧೨ ನಿವ್ವಳ ಲಾಭ ಗಳಿಸಿದೆ. ೨೦೦೫-೦೬ನೇ ಸಾಲಿನಲ್ಲಿ ರೂ. ೨,೦೭೧ ರಷ್ಟಿದೆ. ಸಂಘವು ೨೦೦೫-೦೬ನೇ ಸಾಲಿನಲ್ಲಿ ೬ ಲಕ್ಷದಷ್ಟು ಹಣಕಾಸಿನ ವ್ಯವಹಾರ ನಡೆಸಿದೆ.

ಸಂಘವು ಇಷ್ಟೆಲ್ಲ ಸಾಧನೆಗಳನ್ನು ಸಾಧಿಸಿದ್ದರೂ ಅಕ್ರಮ ನೀರು, ಎತ್ತುವಳಿ ಮತ್ತು ಅನಧಿಕೃತ ಸಾಗುವಳಿಯನ್ನು ತಡೆಗಟ್ಟುವಲ್ಲಿ, ಬೆಳೆ ಮಾದರಿ ಪಾಲನೆ, ವಾರಾಬಂದಿ ಅಳವಡಿಕೆ, ಕಾಲುವೆ, ಆಯಕಟ್ಟಿನ ರಸ್ತೆಗಳು, ಕೆರೆ ಒತ್ತುವರಿಗಳನ್ನು ತಡೆಯುವಲ್ಲಿ ವಿಫಲವಾಗಿದೆ. ಅಗತ್ಯ ನೀರುಗಂಟಿಗಳನ್ನು ನೇಮಕ ಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಬಸಿಗಾಲುವೆಗಳ ಬಗ್ಗೆ ತೀವ್ರ ನಿರ್ಲಕ್ಷ್ಯ ಮಾಡಲಾಗಿದೆ. ಪೋಲಾಗುವ ನೀರಿನ ಬಳಕೆಯಲ್ಲಿ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಸಂಯೋಜಿತ ನೀರಿನ ಬಳಕೆಗೆ ಆದ್ಯತೆ ನೀಡಿಲ್ಲ.

**೨. ಅರಹತೊಳಲು ನೀ.ಬ.ಸ. ಸಂಘ**

ಈ ಸಂಘವು ಒಟ್ಟು ೭೮೦ ಅಚ್ಚುಕಟ್ಟುದಾರರನ್ನು ಹೊಂದಿದೆ. ಆರಂಭದಲ್ಲಿ ಕೇವಲ ೧೨೦ ಸದಸ್ಯರನ್ನು ಸಂಘದ ಸದಸ್ಯರನ್ನಾಗಿಸಿಕೊಳ್ಳಲಾಗಿದೆ. ಆನಂತರ ಒಡಂಬಡಿಕೆ ಒಪ್ಪಂದಕ್ಕೆ ಅಗತ್ಯವಾದಷ್ಟು ಷೇರುದಾರರನ್ನು ಸದಸ್ಯರನ್ನಾಗಿಸಿಕೊಳ್ಳಲಾಗಿದೆ. ಒಡಂಬಡಿಕೆ ಒಪ್ಪಂದದ ನಂತರ ಒಂದು ಸರ್ವ ಸದಸ್ಯರ ಸಭೆಯನ್ನು ನಡೆಸಿ ಕಾರ್ಯಕಾರಿ ಮಂಡಳಿಯನ್ನು ಆಯ್ಕೆ ಮಾಡಿದ್ದು ಬಿಟ್ಟರೆ ಆ ಬಳಿಕ ೨೦೦೧ ರಿಂದ ಇಲ್ಲಿಯತನಕ ಯಾವುದೇ ಸಭೆಯನ್ನು ನಡೆಸಿಲ್ಲ. ಪರಿಶಿಷ್ಟರಿಗೆ ದೊರೆಯುವ ಸರ್ಕಾರದ ಷೇರು ಹಣ ೧೫ ಸಾವಿರ ಪಡೆದಿರುವುದು ಬಿಟ್ಟರೆ ಇನ್ನು ಯಾವುದೇ ಹಣ ಸಂಗ್ರಹ ಮಾಡಿಲ್ಲ. ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳ ನಡುವಿನ ಭಿನ್ನಾಭಿಪ್ರಾಯಗಳಿಂದ ಕಾರ್ಯದರ್ಶಿ ರಾಜೀನಾಮೆ ನೀಡಿದ್ದಾರೆ. ಸಂಘದ ಹಣಕಾಸಿನ ವ್ಯವಹಾರವನ್ನು ಇಲ್ಲಿಯತನಕ ಲೆಕ್ಕ ಪರಿಶೋಧನೆ ಮಾಡಿಸಿಲ್ಲ. ಸಂಘದಲ್ಲಿ ಯಾವುದೇ ಚಟುವಟಿಕೆ ನಡೆಯುತ್ತಿಲ್ಲ.

ಸಂಘದ ಅಸ್ತಿತ್ವದ ಬಗ್ಗೆ ಬಹುತೇಕ ರೈತರಿಗೆ ಯಾವುದೇ ಮಾಹಿತಿಯಿಲ್ಲ. ಹಣಕಾಸಿನ ಕೊರತೆಯಿಂದ ಸಂಘ ಸ್ಥಗಿತಗೊಂಡಿದೆ. ರೈತರಲ್ಲಿ ಸಹಕಾರವಿಲ್ಲದೇ ಇರುವುದರಿಂದ ಸಂಘ ಯಶಸ್ವಿಯಾಗಿಲ್ಲ

ವಹಿಸುತ್ತಾರೆ ಅಧ್ಯಕ್ಷರು. ಸಂಘದ ವ್ಯಾಪ್ತಿಯಲ್ಲಿ ಪ್ರಸ್ತುತ ಹಿಂದಿನಂತೆ ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಗಳೇ ಎಲ್ಲ ರೀತಿ ನೀರಾವರಿ ಕಾರ್ಯಗಳನ್ನು ನಿರ್ವಹಿಸುತ್ತಿವೆ.

ಒಟ್ಟಾರೆ ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯ ನಿರ್ವಹಣೆಯನ್ನು ಗಮನಿಸಿದರೆ ಅವುಗಳು ಹಲವಾರು ಸಮಸ್ಯೆಗಳಿಂದ ಬಳಲುತ್ತಿರುವುದು ತಿಳಿದುಬರುತ್ತದೆ. ಅಧ್ಯಯನ ಕ್ಷೇತ್ರದಲ್ಲಿ ಹೊಸಹಳ್ಳಿ ನೀ.ಬ.ಸ. ಸಂಘವನ್ನು ಹೊರತುಪಡಿಸಿದರೆ ಉಳಿದ ೨೪ ಸಂಘಗಳು ಹೆಸರಿಗೆ ಮಾತ್ರ ಅಸ್ತಿತ್ವದಲ್ಲಿವೆ. ಅವುಗಳು ಹಣಕಾಸಿನ ಕೊರತೆಯಿಂದ ಯಾವುದೇ ಕಾರ್ಯಗಳನ್ನು ಇನ್ನು ಆರಂಭ ಮಾಡಿಲ್ಲ. ಸಂಘಗಳು ಸ್ಥಾಪನಾಪೂರ್ವದ ಸ್ಥಿತಿಯಲ್ಲಿಯೇ ಮುಂದುವರಿಯುತ್ತಿವೆ. ಕೆಲವು ಸಂಘಗಳು ತಾಂತ್ರಿಕವಾಗಿ ಕೆಲವು ಉದ್ದೇಶಗಳನ್ನು ಪೂರ್ಣಗೊಳಿಸಿವೆಯಾದರೂ ಗುಣಾತ್ಮಕವಾಗಿ ಯಾವುದೇ ಸಂಘ ಪ್ರಗತಿ ಸಾಧಿಸಿಲ್ಲ. ಅಕ್ರಮ ಮತ್ತು ಅನಧಿಕೃತ ನೀರು ಬಳಕೆಯನ್ನು ನಿರ್ಬಂಧಿಸುವಲ್ಲಿ ಸಫಲವಾಗಿಲ್ಲ. ನಿಯಮಾನುಸಾರ ಬೆಳೆ ಮಾದರಿ, ವಾರಾಬಂದಿಯನ್ನು ಪಾಲಿಸಿಲ್ಲ. ಅಂದರೆ ಸಂಘಗಳ ಸ್ಥಾಪನೆಯ ಉದ್ದೇಶಗಳು ಇನ್ನು ಈಡೇರಿಲ್ಲ. ಈಡೇರುವ ಲಕ್ಷಣಗಳೂ ಕಂಡುಬರುತ್ತಿಲ್ಲ. ವಿಕೇಂದ್ರೀಕರಣ ತತ್ವ, ಸಹಕಾರ ತತ್ವ, ಪ್ರಜಾಸತ್ತಾತ್ಮಕ ನಿಯಮಗಳು ಕಾಲ್ಪನಿಕವಾಗಿದ್ದು, ಪ್ರಾಯೋಗಿಕವಾಗಿ ಜಾರಿಯಾಗಿಲ್ಲ. ಅಧಿಕಾರ ಹಸ್ತಾಂತರ ಪ್ರಕ್ರಿಯೆಯು ಅನುಷ್ಠಾನದಲ್ಲಿ ಬಂದಿಲ್ಲ. ಸರ್ಕಾರದ ಇತರೆ ಕಾರ್ಯಕ್ರಮಗಳಂತೆ ಸಹಭಾಗಿತ್ವ ನೀರಾವರಿ ನಿರ್ವಹಣೆ ಯೋಜನೆಯು ವೈಫಲ್ಯಕ್ಕೆ ಗುರಿಯಾಗಿದೆ.

□□

# ಅಧ್ಯಾಯ ಎಂಟು

# ಉಪಸಂಹಾರ

೮.೧. ಅಧ್ಯಯನದ ಸಾರಾಂಶ

೮.೨. ಅಧ್ಯಯನದ ಮುಖ್ಯ ತಥ್ಯಗಳು

೮.೩. ಪ್ರಮುಖ ಶಿಫಾರಸ್ಸುಗಳು

೮.೪. ಅಧ್ಯಯನದ ಹೊಸ ಸಾಧ್ಯತೆಗಳು

# ಅಧ್ಯಾಯ ೮

# ಉಪಸಂಹಾರ

**ಪ್ರಸ್ತಾವನೆ**

ಯಾವುದೇ ಸಂಶೋಧನೆಯ ಫಲಿತ ಈವರೆಗಿನ ತಿಳುವಳಿಕೆಗೆ ಹೊಸ ಆಯಾಮವನ್ನು ಕೊಡುವ ಅಥವಾ ಸಾರ್ವತ್ರಿಕ ಹೇಳಿಕೆಗಳನ್ನು ವಿಮರ್ಶಿಸಿ ನೋಡುವ ಮೂಲಕ ಸೂಕ್ಷ್ಮತೆಯಲ್ಲಿ ಅದರ ಇನ್ನೊಂದು ಮುಖವನ್ನು ಕಾಣುವುದಾಗಿದೆ. ಈಗಾಗಲೇ ಪ್ರಚಲಿತದಲ್ಲಿರುವ ಎಷ್ಟೋ ಸಿದ್ಧಾಂತಗಳು, ಯೋಜನೆಗಳು, ನೀತಿ-ನಿಯಮಗಳು, ನೋಡಲು-ಕೇಳಲು ಆಕರ್ಷಕವೆನಿಸುತ್ತವೆ. ದೋಷರಹಿತವೆಂದು ಮೇಲ್ನೋಟಕ್ಕೆ ತಿಳಿಯುತ್ತವೆ. ಆದರೆ ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾ ಹೋದಂತೆ ಅದರ ಒಳಗಿನ ಹಲವಾರು ಮುಖಗಳು, ಮಿತಿಗಳು ಕಾಣಸುತ್ತವೆ. ಯಾವುದೇ ಒಂದು ಸರಕಾರದ ಯೋಜನೆ ಅಥವಾ ಕಾರ್ಯಕ್ರಮ ಯಾವ ವರ್ಗದ ಹಿತಾಸಕ್ತಿಯನ್ನು ಕಾಪಾಡುತ್ತದೆ? ಇದನ್ನು ರೂಪಿಸುವ ಅಧಿಕಾರಿಶಾಹಿಗೆ ಅದರ ಲಾಭ ಹೆಚ್ಚಾಗಿ ಸಿಗುತ್ತದೆಯೇ? ಇಲ್ಲ, ನಿಜವಾದ ಫಲಾನುಭವಿಗಳಿಗೆ ದೊರೆಯುತ್ತದೆಯೇ? ಎನ್ನುವುದು ಅಧ್ಯಯನದಿಂದ ಹೊರಬರುತ್ತದೆ. ಅಧ್ಯಯನ ಮಾಡಿದಾಗ ಅದರ ನಿಜಮುಖ ಬಯಲಾಗುತ್ತಾ ಹೋಗುತ್ತದೆ. ಅದೇ ರೀತಿ ಪ್ರಸ್ತುತ ಅಧ್ಯಯನದ ವಸ್ತುವಾದ 'ಸಹಭಾಗಿತ್ವ ನೀರಾವರಿ ನಿರ್ವಹಣೆ' ಪರಿಕಲ್ಪನೆಯನ್ನು ಆರ್ಥಿಕ ನೆಲೆಯಿಂದ ನೋಡಿದಾಗ ಅದು ಪ್ರಜಾಪ್ರಭುತ್ವ, ವಿಕೇಂದ್ರೀಕರಣದ ಬಹು ದೊಡ್ಡ ಯಶಸ್ವಿಯಂತೆ ಕಾಣುತ್ತದೆ. ಈ ಸಹಭಾಗಿತ್ವ ಪರಿಕಲ್ಪನೆಯಲ್ಲಿ ರೈತರು ನೀರಾವರಿಯ ಎಲ್ಲಾ ಚಟುವಟಿಕೆಗಳಲ್ಲಿ ಸಮಾನವಾಗಿ ಅಧಿಕಾರವನ್ನು ಪಡೆದು ತಮ್ಮ ಸಂಕಷ್ಟಗಳನ್ನು ತಾವೇ ಪರಿಹರಿಸಿ ಕೊಳ್ಳುತ್ತಾರೆ. ಇಲ್ಲಿ ರೈತರೇ ಪ್ರಭುಗಳು, ಅವರೇ ಸ್ವತಂತ್ರರು ಎನ್ನುವ ಆದರ್ಶ ವ್ಯವಸ್ಥೆಯ ಕಲ್ಪನೆಯನ್ನು ಈ ಯೋಜನೆ ಪ್ರತಿಬಿಂಬಿಸುತ್ತದೆ. ಅಂದರೆ ಬಳಕೆದಾರರೇ ವ್ಯವಸ್ಥೆಯ ಉಸ್ತುವಾರಿಯನ್ನು ನೋಡಿಕೊಂಡಾಗ ಯಾವುದೇ ಸಮಸ್ಯೆಗಳು ಉದ್ಭವಿಸುವುದಿಲ್ಲ. ಅವರೇ ನೇರವಾಗಿ ಭಾಗಿಯಾಗುವುದರಿಂದ ಅವರು ಯಾವುದೇ ರೀತಿಯ ಶೋಷಣೆಗೆ ಗುರಿಯಾಗುವುದಿಲ್ಲ ಎನ್ನುವ ನಂಬಿಕೆಯನ್ನು ಸೃಷ್ಟಿಸಲಾಗಿದೆ. ಇದು ಅಧಿಕಾರಿಶಾಹಿ ಸೃಷ್ಟಿಸಿರುವ ರಾಜಕಾರಣ ಅಥವಾ ಈ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವನ್ನು ಹೊರನಿಂತು ನೋಡುವ ವಿಚಾರ ತಜ್ಞರಿಗೆ ಇದು ಸರಿ. ಆದರೆ ವಾಸ್ತವ ಆಗಿಲ್ಲ. ಅದು ತನ್ನ ಆಂತರಿಕ ವ್ಯವಸ್ಥೆಯಲ್ಲಿ ಹಲವು ಗೊಂದಲಮಯ ಸಮಸ್ಯೆಗಳನ್ನು ಎದುರಿಸುತ್ತಿದೆ.

ಭಾರತದಂತಹ ಸಂಕೀರ್ಣ ದೇಶವನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಅಥವಾ ಈ ದೇಶದ ಗ್ರಾಮೀಣ ಭಾಗದ ದುರ್ಬಲ ವರ್ಗದವರ ಕಣ್ಣಿಂದ ಈ ಯೋಜನೆಗಳನ್ನು ದಿಟ್ಟಿಸಿ ನೋಡಿದಾಗ ಅವುಗಳ ವೈಫಲ್ಯಗಳು ಕಾಣಿಸುತ್ತವೆ. ಇಂದು ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಗಣನೀಯ ಬದಲಾವಣೆಗಳಾಗುತ್ತಿವೆ. ಈ ಬದಲಾವಣೆಗಳನ್ನು ಕೇವಲ ಆರ್ಥಿಕ ದೃಷ್ಟಿಕೋನದಿಂದ ಮಾತ್ರ ಅಳತೆ ಮಾಡಿದರೆ, ಅದು ಒಟ್ಟಾರೆ ಸಂಗತಿಗಳನ್ನು ಪ್ರತಿಬಿಂಬಿಸಲಾರದು. ಏಕಮುಖಿ ಅಧ್ಯಯನಗಳು ಈಗಾಗಲೇ 'ಸಹಭಾಗಿತ್ವ ನೀರಾವರಿ ನಿರ್ವಹಣೆ' ನಡೆದಿವೆ. ಆದರೆ ಬಹುಶಿಸ್ತಿನ ನೆಲೆಯಲ್ಲಿ ನಡೆದಿರುವ ಅಧ್ಯಯನ ಅತಿ ಕಡಿಮೆ. ನೀರಾವರಿ ನಿರ್ವಹಣೆ ಎಂಬುದು ಹಲವಾರು ಸಂಗತಿಗಳನ್ನು ಒಳಗೊಂಡ ಒಂದು ಸಂಯುಕ್ತ ಘಟಕ. ಇಂತಹ ಸಂಕೀರ್ಣ ವಿಷಯವನ್ನು ವಿವಿಧ ನೆಲೆಗಳಿಂದ ಅಭ್ಯಸಿಸಬೇಕಾಗುತ್ತದೆ. ನಿದರ್ಶನಾತ್ಮಕ ಅಧ್ಯಯನ ವಿಧಾನದ ಮೂಲಕ ಕ್ಷೇತ್ರಕಾರ್ಯದಲ್ಲಿ ಇಂದಿನ ಸಾಧನ ಸಾಮಗ್ರಿಗಳನ್ನು ಬಳಕೆ ಮಾಡಿ ವಸ್ತುಸ್ಥಿತಿಯನ್ನು ಅವಲೋಕನ ಮಾಡಬೇಕಾಗಿದೆ. ಇದರೊಂದಿಗೆ 'ಸಹಭಾಗಿತ್ವ ನೀರಾವರಿ ನಿರ್ವಹಣೆ'ಯ ತಾತ್ವಿಕ ಹಿನ್ನೆಲೆಯನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳುವ ಅಗತ್ಯವಿದೆ.

'ನೀರಾವರಿ ನಿರ್ವಹಣೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳ ಪಾತ್ರ' (ಭದ್ರಾ ಅಚ್ಚುಕಟ್ಟು ಪ್ರದೇಶ ಒಂದು ಅಧ್ಯಯನ) ಎಂಬ ಈ ಸಂಶೋಧನೆಯಲ್ಲಿ ರೂಪಿಸಿಕೊಳ್ಳಲಾದ ಪ್ರಮುಖ ಪ್ರಶ್ನೆಗಳೆಂದರೆ ನೀರಾವರಿಯಲ್ಲಿ ರೈತರು ಎದುರಿಸುತ್ತಿರುವ ಸಮಸ್ಯೆಗಳೇನು? ನೀರು ಬಳಕೆದಾರರು ಎಂದರೆ ಯಾರು? ಸಹಭಾಗಿತ್ವದ ವಿವಿಧ ನೆಲೆಗಳು ಯಾವುವು? ಸಹಕಾರಿ ಸಂಘಗಳ ಈ ಹೊತ್ತಿನ ಸ್ವರೂಪ ಏನು? ಜನ ಸಹಭಾಗಿತ್ವದ ಈವರೆಗಿನ ತಾತ್ವಿಕ ತಿಳುವಳಿಕೆಗೂ ಅದರ ವಾಸ್ತವ ತಿಳುವಳಿಕೆಗೂ ಇರುವ ವ್ಯತ್ಯಾಸ ಯಾವ ಬಗೆಯದು? ವರ್ಗ ಶ್ರೇಣೀಕರಣ, ಆರ್ಥಿಕ ಶ್ರೇಣೀಕರಣಗಳ ನೆಲೆಯಲ್ಲಿ ಫಲಾನುಭವಿಗಳ ಪಾಲ್ಗೊಳ್ಳುವಿಕೆಯಲ್ಲಿ ಕಂಡುಬರುವ ವೈರುದ್ಯಗಳ ಹೊಸ ರೂಪಗಳು ಯಾವುವು? ಯೋಜನೆಯ ಕಾರ್ಯಗತಗೊಳಿಸುವ ಕರ್ತೃಸಂಸ್ಥೆಯ ಸಾಮರ್ಥ್ಯ, ಸಾಧಕ-ಭಾದಕಗಳೇನು? ಸಂಘಗಳ ಕಾರ್ಯ ನಿರ್ವಹಣೆಯ ಹಾದಿಯಲ್ಲಿ ತೊಡಕಾಗಿರುವ ಅಂಶಗಳಾವುವು? ಇವೆ ಮೊದಲಾದ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಹೀಗೆ ಕಂಡುಕೊಂಡ ಉತ್ತರಗಳು ಇತರ ಪ್ರಶ್ನೆಗಳನ್ನು ಹುಟ್ಟು ಹಾಕಿವೆ. ಮತ್ತೆ ಹಲವಾರು ಪ್ರಶ್ನೆಗಳನ್ನು ಕೇಳಿಕೊಳ್ಳುವಂತೆ ಮಾಡಿವೆ. ಈ ನೆಲೆಯಲ್ಲಿ ಅಧ್ಯಯನದ ಸಾರಾಂಶ ಮತ್ತು ಅಧ್ಯಯನದ ತಥ್ಯಗಳನ್ನು ಮೊದಲ ಭಾಗದಲ್ಲಿ, ಶಿಫಾರಸ್ಸುಗಳು ಮತ್ತು ಅಧ್ಯಯನದ ಹೊಸ ಸಾಧ್ಯತೆಗಳನ್ನು ಎರಡನೆಯ ಭಾಗದಲ್ಲಿ ವಿವರಿಸಲಾಗಿದೆ.

## ೮.೧. ಅಧ್ಯಯನದ ಸಾರಾಂಶ

ಪ್ರಸ್ತುತ ಅಧ್ಯಯನವು ಎಂಪಿರಿಕಲ್ ಆಗಿದ್ದರೂ ಅದಕ್ಕೆ ಪೂರಕವಾದ ತಾತ್ವಿಕ ಸಂಗತಿಗಳನ್ನು ಆರಂಭಿಕ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಫಲಾನುಭವಿಗಳನ್ನು ಸಕ್ರಿಯವಾಗಿ ತೊಡಗಿಸುವ ಉದ್ದೇಶದಿಂದ ಸಹಭಾಗಿತ್ವ ಮಾದರಿಯನ್ನು ವಿಶ್ವದಾದ್ಯಂತ ಬಳಕೆ ಮಾಡಿಕೊಳ್ಳಲಾಗುತ್ತಿದೆ. ಅಭಿವೃದ್ಧಿ ಹೊಂದಿದ ಕೆಲವು ದೇಶಗಳಲ್ಲಿ ಈ ಮಾದರಿಯು ಯಶಸ್ವಿಯಾಗಿರುವುದರಿಂದ ಅಂತರರಾಷ್ಟ್ರೀಯ ಆರ್ಥಿಕ ಸಂಸ್ಥೆಗಳು ಸಹಭಾಗಿತ್ವಕ್ಕೆ ಹೆಚ್ಚಿನ ಮಹತ್ವ ನೀಡುತ್ತಿವೆ. ಏಕರೂಪಿ ಸಮಾಜದಲ್ಲಿ ಜನರ ಸಹಭಾಗಿತ್ವ ತತ್ವ ಸುಲಭವಾಗಿ ಅನುಷ್ಠಾನಗೊಳ್ಳುತ್ತದೆ. ಆದರೆ ಭಾರತದಂತಹ ಬಹುರೂಪಿ ಸಾಮಾಜಿಕ ಸಂರಚನೆ ವ್ಯವಸ್ಥೆಯಲ್ಲಿ ಜನ ಸಹಭಾಗಿತ್ವಕ್ಕೆ ಅನೇಕ ಅಡೆತಡೆಗಳಿವೆ. ನಮ್ಮ ಸಮಾಜದಲ್ಲಿನ ಅಸಮಾನತೆ, ಜಾತೀಯತೆ, ಶ್ರೇಣೀಕರಣ ಮೊದಲಾದ ಅಂಶಗಳು ಸಹಭಾಗಿತ್ವ ಮಾದರಿಗೆ ಧಕ್ಕೆಯನ್ನುಂಟು ಮಾಡುತ್ತವೆ.

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವೂ ಈ ಮೇಲಿನ ಸಂಗತಿಗಳಿಗಿಂತ ಹೊರತಾಗಿಲ್ಲ. ಫಲಾನುಭವಿಗಳ ಆಶೋತ್ತರಗಳಿಗೆ ಅನುಗುಣವಾಗಿ ಈ ಮಾದರಿ ಅನುಷ್ಠಾನಗೊಳ್ಳುತ್ತಿಲ್ಲ. ಈ ಕಾರ್ಯಕ್ರಮ ರೂಪಿಸುವಲ್ಲಿ ಬಳಕೆದಾರರಿಗೆ ಅವಕಾಶವಾಗುತ್ತಿಲ್ಲ. ಹೀಗಿದ್ದರೂ ಜಾಗತಿಕ ಸಹಭಾಗಿತ್ವ ನೀರಾವರಿ ನಿರ್ವಹಣೆ ಮಾದರಿಯನ್ನು ರಾಷ್ಟ್ರಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ ಯಥಾವತ್ತಾಗಿ ಅಳವಡಿಸಿಕೊಳ್ಳುತ್ತಿರುವುದು ಒಂದು ದೋಷ. ಪ್ರಾದೇಶಿಕ ವಿಶಿಷ್ಟತೆಯನ್ನು ಪರಿಗಣಿಸದೆ ಈ ಕಾರ್ಯಕ್ರಮ ಯಶಸ್ವಿಯಾಗಲಾರದು. ಜಾಗತಿಕವಾಗಿ ಎಲ್ಲ ಜನರ ವರ್ತನೆಗಳು ಏಕರೂಪವಾಗಿರಲು ಸಾಧ್ಯವಿಲ್ಲ. ಆದುದರಿಂದ ಒಂದೇ ರೀತಿಯ ಸಹಭಾಗಿತ್ವ ಮಾದರಿಯನ್ನು ಎಲ್ಲ ದೇಶಗಳಿಗೂ ಅನ್ವಯಿಸುವುದು ಸಮಂಜಸವಲ್ಲ. ಹಾಗೇ ಅಳವಡಿಕೆ ಮಾಡಿದ ಕಾರಣದಿಂದಲೇ ಇಂದು ವೈಫಲ್ಯಗಳನ್ನು ಕಾಣುವಂತಾಗಿದೆ.

ನಮ್ಮ ದೇಶದಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ಎರಡು ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ. ಮಹಾರಾಷ್ಟ್ರ, ಗುಜರಾತ್ ಹಾಗೂ ಕರ್ನಾಟಕ ಮೊದಲಾದ ರಾಜ್ಯಗಳಲ್ಲಿ ಸಹಕಾರ ತತ್ವದ ಅಡಿಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳು ಸ್ಥಾಪಿಸಲ್ಪಟ್ಟಿದ್ದರೆ, ಆಂಧ್ರಪ್ರದೇಶ ಮತ್ತು ಮಧ್ಯಪ್ರದೇಶಗಳಲ್ಲಿ ವಿಶೇಷ ನೀರಾವರಿ ಕಾಯಿದೆಗಳನ್ನು ಜಾರಿಗೊಳಿಸಿ ಎಲ್ಲ ವಿಧವಾದ ನೀರಾವರಿ ವ್ಯವಸ್ಥೆಗಳನ್ನು ಸಂಘಗಳ ವ್ಯಾಪ್ತಿಗೆ ತಂದು ಸದಸ್ಯತ್ವವನ್ನು ಕಡ್ಡಾಯ ಮಾಡಲಾಗಿದೆ. ಮೊದಲ ವ್ಯವಸ್ಥೆ ಸ್ವಯಂ ಪ್ರೇರಿತ ಸದಸ್ಯತ್ವಕ್ಕೆ ಅವಕಾಶ ನೀಡಿದರೆ, ಎರಡನೆಯದು ಕಡ್ಡಾಯ ಸದಸ್ಯತ್ವವನ್ನು ಬಯಸುತ್ತದೆ. ಈ ಎರಡೂ ರೀತಿಯ ವ್ಯವಸ್ಥೆಗಳಲ್ಲಿ ಯಶಸ್ಸು ಮತ್ತು ವೈಫಲ್ಯಗಳಿರುವುದನ್ನು ಹಲವು ಅಧ್ಯಯನಗಳು

ದೃಢಪಡಿಸಿವೆ. ಕರ್ನಾಟಕದಲ್ಲಿಯೂ ಸಹಕಾರ ಕಾಯಿದೆ ಅಡಿ ಸ್ವಯಂಪ್ರೇರಿತ ಸದಸ್ಯತ್ವ ತತ್ವದಂತೆ ನೀ.ಬ.ಸ. ಸಂಘಗಳನ್ನು ಸ್ಥಾಪಿಸುವ ಪ್ರಕ್ರಿಯೆ ನಡೆಯುತ್ತಿದೆ. ಆದರೆ ಕಡ್ಡಾಯ ಸದಸ್ಯತ್ವವಿಲ್ಲದೆ ಇರುವುದರಿಂದ ಎಲ್ಲ ಫಲಾನುಭವಿಗಳನ್ನು ಸಂಘಗಳ ವ್ಯಾಪ್ತಿಗೆ ತರಲು ಸಾಧ್ಯವಾಗಿಲ್ಲ. ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ಸರಕಾರೇತರ ಸಂಸ್ಥೆಗಳ ಮೂಲಕ ಬಳಕೆದಾರರನ್ನು ಸಂಘಗಳತ್ತ ಪ್ರೇರೇಪಿಸುವ ಕಾರ್ಯ ನಡೆಯುತ್ತಿದೆ. ಆದರೆ ಕರ್ನಾಟಕದಲ್ಲಿ ಇಂತಹ ವ್ಯವಸ್ಥೆ ಇಲ್ಲದಿರುವುದು ಒಂದು ತೊಡಕಾಗಿದೆ. ಒಟ್ಟಾರೆ ಈ ಮೇಲಿನ ಎರಡೂ ಪ್ರಕಾರಗಳಲ್ಲಿ ಅನುಷ್ಠಾನಗೊಳ್ಳುತ್ತಿರುವ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವು ಮೇಲ್‌ಸ್ತರದಿಂದ ಕೆಳಸ್ತರಕ್ಕೆ ಹರಿಯುವ (ಟಾಪ್‌ಡೌನ್) ಮಾದರಿಯಾಗಿದೆ. ಬದಲಾಗಿ ಅದು ತಳಮಟ್ಟದಿಂದ ಮೇಲ್ಮಟ್ಟಕ್ಕೆ ಪ್ರವಹಿಸುವ 'ಬಾಟಮ್ ಅಪ್' ಮಾದರಿಯಾಗಿ ಪರಿವರ್ತನೆಯಾಗಬೇಕು.

ಈ ಅಧ್ಯಯನದಲ್ಲಿ ನಾಲ್ಕು ಉದ್ದೇಶಗಳನ್ನು ಇಟ್ಟುಕೊಂಡು ಸಂಶೋಧನೆ ನಡೆಸಲಾಯಿತು. ಈ ಉದ್ದೇಶಗಳನ್ನು ಪರಿಶೀಲಿಸಿದಾಗ ಕಂಡುಬಂದ ಪ್ರಮುಖ ಸಂಗತಿಗಳೆಂದರೆ, ನೀರು ಬಳಕೆದಾರರ ಸಹಕಾರ ಸಂಘಗಳ ಪದಾಧಿಕಾರಿಗಳು ಮತ್ತು ಸದಸ್ಯರ ಸಾಮಾಜಿಕ ಸಂರಚನೆಯ ಹಿನ್ನೆಲೆಯನ್ನು ಪರೀಕ್ಷಿಸುವುದು ಈ ಸಂಶೋಧನೆಯ ಮೊದಲ ಉದ್ದೇಶ. ಭದ್ರಾ ಅಚ್ಚುಕಟ್ಟು ಪ್ರದೇಶದ ೨೫ ನೀ.ಬ.ಸ. ಸಂಘಗಳ ಸಾಮಾಜಿಕ ಸಂರಚನೆಯನ್ನು ಗಮನಿಸಿದಾಗ ಅವುಗಳು ಪ್ರಧಾನ ಜಾತಿಗಳ ಪ್ರಭಾವ ಮತ್ತು ನಿಯಂತ್ರಣದಲ್ಲಿರುವುದು ಕಂಡುಬರುತ್ತದೆ. ಈ ಪ್ರಧಾನ ಜಾತಿಗಳು ಕಡಿಮೆ ಜನಸಂಖ್ಯೆಯನ್ನು ಹೊಂದಿದ್ದರೂ ಭೂ ಹಿಡುವಳಿ, ವರಮಾನ, ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನಗಳಲ್ಲಿ ಇತರೆ ಜಾತಿಗಳಿಗಿಂತ ಉನ್ನತ ಮಟ್ಟದಲ್ಲಿವೆ. ಸಂಘಗಳ ಆಡಳಿತ ಮಂಡಳಿಗಳಲ್ಲಿ ಅತಿಮುಖ್ಯ ಹುದ್ದೆಗಳು ಈ ಮೇಲ್ವರ್ಗಗಳ ವಶದಲ್ಲಿವೆ. ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳು ಈ ಪ್ರಧಾನ ಜಾತಿಗಳಲ್ಲಿಯೇ ಮಡುಗಟ್ಟಿಕೊಂಡಿವೆ. ಪರಿಶಿಷ್ಟರಿಗೆ, ಅಲ್ಪಸಂಖ್ಯಾತರಿಗೆ ಹಾಗೂ ಮಹಿಳೆಯರಿಗೆ ಇಂತಹ ಯಾವುದೇ ಹುದ್ದೆಗಳು ದೊರೆತಿಲ್ಲ. ಮೀಸಲಾತಿಯಿಂದ ಮುಖ್ಯವಲ್ಲದ ಹುದ್ದೆಗಳು ಈ ವರ್ಗಗಳಿಗೆ ಲಭಿಸಿವೆ. ಆದರೂ ಅವರ ಭಾಗವಹಿಸುವಿಕೆಗೆ ಹೆಚ್ಚಿನ ಅವಕಾಶಗಳಿಲ್ಲ.

ಭೂಮಾಲೀಕತ್ವವಿಲ್ಲದ ಮಹಿಳೆಯರಿಗೆ ಸಂಘದಲ್ಲಿ ಯಾವುದೇ ಸ್ಥಾನ ಹೊಂದುವ ಅರ್ಹತೆಯಿಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯಾಗಿದೆ. ಇದು ಅಂತಿಮವಾಗಿ ಮಹಿಳಾ ಸಬಲೀಕರಣಕ್ಕೆ ಕೊಡಲಿ ಪೆಟ್ಟು ನೀಡಿದೆ. ಹೀಗೆ ಅಸಮಾನ ಸಾಮಾಜಿಕ ಸಂರಚನೆಯ ಹಿನ್ನೆಲೆಯಲ್ಲಿ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವು ನಿರೀಕ್ಷಿತ ಯಶಸ್ಸು ಸಾಧಿಸಿಲ್ಲ. ದೇಶ ಕಾಲಮಾನಕ್ಕೆ ತಕ್ಕುದಾದ ಸಮಸ್ಯೆಯನ್ನು ಪರಿಹರಿಸಬಲ್ಲ ಒಂದು ಪರ್ಯಾಯ ಕಾರ್ಯಕ್ರಮವನ್ನು ರೂಪಿಸಿ ಜಾರಿಗೊಳಿಸುವ ಅಗತ್ಯವಿದೆ.

ಭದ್ರಾ ಅಚ್ಚುಕಟ್ಟು ಪ್ರದೇಶದ ನೀರಾವರಿ ನಿರ್ವಹಣೆಯಲ್ಲಿ ರೈತರು ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು ಈ ಅಧ್ಯಯನದ ಎರಡನೇ ಉದ್ದೇಶ. ಈ ಅಚ್ಚುಕಟ್ಟು ಪ್ರದೇಶದ ಕಾಲುವೆಯು ಬಹಳ ಸಂಪೂರ್ಣವಾಗಿ ಶಿಥಿಲವಾಗಿದ್ದು ನೀರಿನ ಹರಿಯುವಿಕೆ ಸಮರ್ಪಕವಾಗಿಲ್ಲ. ಉಪಕಾಲುವೆಗಳ ದುರಸ್ತಿ ಮತ್ತು ನಿರ್ಮಾಣವನ್ನು ಸರಕಾರ ಮತ್ತು ಸಂಬಂಧಿಸಿದ ಇಲಾಖೆಗಳು ನಿರ್ಲಕ್ಷಿಸಿರುವುದರಿಂದ ಅಗಾಧವಾದ ನೀರು ಪೋಲಾಗುತ್ತಿದೆ. ಕಾಲುವೆಯ ಮೇಲ್ತುದಿ ರೈತರು ಅಧಿಕ ನೀರಿನ ಸಮಸ್ಯೆಗೆ ಗುರಿಯಾಗಿದ್ದು ಕೆಳತುದಿ ರೈತರು ನೀರಿನ ತೀವ್ರ ಅಭಾವವನ್ನು ಅನುಭವಿಸುತ್ತಿದ್ದಾರೆ. ಇದು ಎರಡೂ ಭಾಗದ ರೈತರ ನಡುವೆ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿದೆ. ಬೆಳೆಯ ಮಾದರಿ ಮತ್ತು ವಾರಾಬಂದಿಯನ್ನು ರೈತರು ಸಂಪೂರ್ಣವಾಗಿ ಕಡೆಗಣಿಸಿದ್ದಾರೆ. ಈ ನಿಯಮಪಾಲನೆಯಾಗದೆ ನೀರಾವರಿ ವಿತರಣೆ ವ್ಯವಸ್ಥೆ ಹದಗೆಟ್ಟಿದೆ. ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿಯಿಂದ ನೈಜ ವಾರಸುದಾರರಿಗೆ ನೀರು ಲಭ್ಯವಾಗುತ್ತಿಲ್ಲ. ಹಕ್ಕುದಾರರಲ್ಲದವರಿಗೆ ಅಧಿಕ ನೀರು ದೊರೆಯುತ್ತಿರುವುದು ಕಾನೂನಿನ ಅನುಷ್ಠಾನದ ಕೊರತೆಯನ್ನು ಸೂಚಿಸುತ್ತದೆ. ಕಾಯಿದೆ ಕಾನೂನಿನ ಹೆದರಿಕೆಯಿಲ್ಲದೆ ಅಕ್ರಮ ನೀರು ಬಳಕೆದಾರರು ಅಕ್ರಮವನ್ನು ಸಕ್ರಮ ಎನ್ನುವಂತೆ ಸಂಘಟಿತರಾಗಿ ತಮ್ಮ ಚಟುವಟಿಕೆಗಳನ್ನು ಮುಂದುವರಿಸಿದ್ದಾರೆ. ಇಂತಹ ಚಟುವಟಿಕೆಗಳಿಗೆ ರಾಜಕೀಯ ಧುರೀಣರೂ ಪರೋಕ್ಷವಾಗಿ ಬೆಂಬಲ ನೀಡುತ್ತಿರುವುದು ಸಮಸ್ಯೆಯ ಉಲ್ಬಣಕ್ಕೆ ಕಾರಣವಾಗಿದೆ. ಒಟ್ಟಾರೆ ನ್ಯಾಯಬದ್ಧ ಹಕ್ಕುದಾರರಿಗೆ ನೀರಿನ ಕೊರತೆ ಒಂದು ಬಗೆಹರಿಸಲಾಗದ ಸಮಸ್ಯೆಯಾಗಿದೆ.

ಈ ಮೇಲ್ಕಂಡ ಸಮಸ್ಯೆಗಳನ್ನು ಬಗೆಹರಿಸದೆ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿರುವುದು ಅದರ ವೈಫಲ್ಯಗಳಿಗೆ ಅವಕಾಶ ಮಾಡಿಕೊಟ್ಟಿದೆ. ಅಮೂಲ್ಯವಾದ ಜಲಸಂಪತ್ತಿನ ಮಹತ್ವವನ್ನು ಅರಿಯದ ಬಳಕೆದಾರರು, ನಿರ್ವಹಣೆಯಲ್ಲಿ ಕೇಂದ್ರೀಕರಣವನ್ನೇ ಹೊಂದಿರಬೇಕೆಂಬ ಅಧಿಕಾರಶಾಹಿ, ಮೇಲಿನಿಂದಲೇ ಯೋಜನೆಗಳನ್ನು ಜಾರಿಗೊಳಿಸಬೇಕೆಂಬ ಪ್ರಭುತ್ವದ ಹಠಮಾರಿ ಧೋರಣೆಗಳಿಂದ ನೀರಾವರಿ ವ್ಯವಸ್ಥೆಯಲ್ಲಿನ ಸಮಸ್ಯೆಗಳ ಮತ್ತಷ್ಟು ಜಟಿಲವಾಗುತ್ತಿವೆ.

ನೀರು ಬಳಕೆದಾರರ ಸಹಕಾರ ಸಂಘಗಳ ಸ್ಥಾಪನೆಯ ಹೊಣೆಗಾರಿಕೆ ಹೊತ್ತಿರುವ ಭದ್ರಾ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಕಾರ್ಯ ವೈಖರಿಯನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸುವುದು ಅಧ್ಯಯನದ ಮತ್ತೊಂದು ಉದ್ದೇಶ. ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮದ ಅನುಷ್ಠಾನದ ಕರ್ತೃ ಭದ್ರಾ ಕಾಡಾ. ಇದು ತನ್ನ ಆಂತರಿಕ ಆಡಳಿತದ ರಚನೆಯಲ್ಲಿಯೇ ಹಲವಾರು ಲೋಪದೋಷಗಳನ್ನು ಹೊಂದಿದೆ. ಮುಖ್ಯವಾಗಿ ಕಾಡಾ ಒಂದು ಖಾಯಂ ಅಧಿಕಾರಿ ಸಿಬ್ಬಂದಿಯನ್ನು ಹೊಂದಿಲ್ಲ. ಎಲ್ಲಾ ಅಧಿಕಾರಿಗಳು ಇತರೆ ಇಲಾಖೆಗಳಿಂದ ನಿಯೋಜಿಸಲ್ಪಡುತ್ತಾರೆ. ಭಾರತೀಯ ಆಡಳಿತ ಸೇವೆ ದರ್ಜೆಯ ಅಧಿಕಾರಿ ಇದರ ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿರುತ್ತಾರೆ. ಇತರೆ ಅಧಿಕಾರಿಗಳು, ಜಲ

ಸಂಪನ್ಮೂಲ, ಸಹಕಾರ ಮತ್ತು ಕೃಷಿ ಇಲಾಖೆಗಳಿಂದ ನಿಯೋಜನೆಯಾಗಿರುತ್ತಾರೆ. ಇದರೊಂದಿಗೆ ಸರಕಾರದಿಂದ ನಾಮನಿರ್ದೇಶನಗೊಂಡ ಅಧ್ಯಕ್ಷ ಮತ್ತು ಸದಸ್ಯರಿರುತ್ತಾರೆ. ಈ ಎರಡೂ ಪ್ರಕಾರದ ಆಡಳಿತ ವರ್ಗದಲ್ಲಿ ಪರಸ್ಪರ ಸಹಕಾರವಿಲ್ಲ. ವೈರುಧ್ಯಗಳೇ ಮುಖ್ಯವಾಗಿ ಕಾರ್ಯನಿರ್ವಹಣೆ ಕಠಿಣವಾಗುತ್ತದೆ. ತಮ್ಮದೇ ಮಾತು ನಡೆಯಬೇಕೆಂಬ ಹಠಮಾರಿತನದಿಂದ ಆಡಳಿತ ವ್ಯವಸ್ಥೆ ಹದಗೆಟ್ಟಿದೆ.

ವಿವಿಧ ಇಲಾಖೆಗಳಿಂದ ನಿಯೋಜನೆಗೊಂಡಿರುವ ಅಧಿಕಾರಿ ವರ್ಗದಲ್ಲಿ ಅಸಹಕಾರ ಹೆಚ್ಚಾಗಿದೆ. ಇದರಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮಕ್ಕೆ ಧಕ್ಕೆಯುಂಟಾಗಿದೆ. ಅಧಿಕಾರ ಹಸ್ತಾಂತರ ಮಾಡುವ ಇಚ್ಛೆಯಿಲ್ಲದ ಅಧಿಕಾರಿ ವರ್ಗದಿಂದ ಕಾರ್ಯಕ್ರಮ ಹಾದಿ ತಪ್ಪಿದೆ. ನೀರಾವರಿ ಸಲಹಾ ಸಮಿತಿ ಸಭೆಗಳಲ್ಲಿ ಜನಪ್ರತಿನಿಧಿಗಳು ತಮ್ಮ ಮೂಗಿನ ನೇರಕ್ಕೆ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆ. ನೀರಾವರಿ ವ್ಯವಸ್ಥೆಯ ಸಂಪೂರ್ಣ ಅರಿವು ಇರುವ ಅಧಿಕಾರಿ ವರ್ಗ, ತಾಂತ್ರಿಕ ಸಿಬ್ಬಂದಿ ಹಾಗೂ ತಜ್ಞರ ಅಭಿಪ್ರಾಯಗಳನ್ನು ಕಡೆಗಣಿಸುತ್ತಿರುವುದು ಒಂದು ಸಮಸ್ಯೆಯಾಗಿದೆ. ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರವು ನೀ.ಬ.ಸ. ಸಂಘಗಳ ಸ್ಥಾಪನೆ ಮತ್ತು ಒಡಂಬಡಿಕೆ ಒಪ್ಪಂದ ಮಾಡಿಸುವಲ್ಲಿ ಕೆಲಮಟ್ಟಿನ ಯಶಸ್ಸನ್ನು ಸಾಧಿಸಿದೆಯಾದರೂ ಅಧಿಕಾರ ಹಸ್ತಾಂತರ ಮಾಡುವಲ್ಲಿ ಮೀನಾವೇಷ ಎಣಿಸುತ್ತಿರುವುದು ಸಂಘಗಳ ಬೆಳವಣಿಗೆಗೆ ತೊಡಕಾಗಿ ಪರಿಣಮಿಸಿದೆ. ಹೀಗೆ ಅನುಷ್ಠಾನ ಸಂಸ್ಥೆ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವನ್ನು ನಿಜ ಅರ್ಥದಲ್ಲಿ ಕಾರ್ಯಗತಗೊಳಿಸದೇ ಇರುವುದು ಅದರ ವಿಫಲತೆಗೆ ದಾರಿ ಮಾಡಿದೆ.

ನೀರು ಬಳಕೆದಾರರ ಸಹಕಾರ ಸಂಘಗಳ ಕಾರ್ಯ ಸಾಧನೆಯನ್ನು ಅವುಗಳ ಕಾರ್ಯ ನಿರ್ವಹಣೆಯ ಹಿನ್ನೆಲೆಯಲ್ಲಿ ಪರೀಕ್ಷಿಸುವುದು ಈ ಅಧ್ಯಯನದ ಅಂತಿಮ ಉದ್ದೇಶ. ಒಡಂಬಡಿಕೆ ಒಪ್ಪಂದವಾಗಿರುವ ೨೫ ನೀ.ಬ.ಸ. ಸಂಘಗಳ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸಿದಾಗ ಕಂಡುಬಂದ ಮುಖ್ಯ ಸಂಗತಿ ಯೆಂದರೆ ಶೇ. ೯೬ ಸಂಘಗಳ ಸ್ಥಗಿತ ಸ್ಥಿತಿಯಲ್ಲಿವೆ. ಕೇವಲ ಒಂದು ಸಂಘ ಮಾತ್ರ ತನ್ನ ಉದ್ದೇಶಗಳನ್ನು ಸಾಧಿಸುವಲ್ಲಿ ಸ್ವಲ್ಪಮಟ್ಟಿಗೆ ಸಫಲವಾಗಿದೆ. ಉಳಿದೆಲ್ಲಾ ಸಂಘಗಳು ನಾಮಮಾತ್ರಕ್ಕೆ ಒಡಂಬಡಿಕೆ ಒಪ್ಪಂದವನ್ನು ಮಾಡಿಕೊಂಡಿದ್ದು ನೆಪಮಾತ್ರದಲ್ಲಿ ಅಸ್ತಿತ್ವದಲ್ಲಿವೆ. ಜಲಸಂಪನ್ಮೂಲ ಇಲಾಖೆಯೊಂದಿಗೆ ಒಪ್ಪಂದ ಮಾಡಿಕೊಳ್ಳುವ ತನಕ ಸಂಘಗಳು ಕೆಲಮಟ್ಟಿನ ತಾಂತ್ರಿಕ ಸಂಗತಿಗಳನ್ನು ಪೂರೈಸುವಲ್ಲಿ ಯಶಸ್ವಿಯಾಗಿವೆ. ಆನಂತರ ಸಂಘಗಳು ತಮ್ಮ ಸಾಮರ್ಥ್ಯಗಳನ್ನು ವೃದ್ಧಿಸಿಕೊಳ್ಳಲು ಪ್ರಯತ್ನಿಸಿಲ್ಲ. ಅವಕಾಶಗಳನ್ನು ದಕ್ಕಿಸಿಕೊಳ್ಳುವಲ್ಲಿ ವಿಫಲವಾಗಿವೆ. ಸದಸ್ಯತ್ವವನ್ನು ಹೆಚ್ಚಿಸಲು, ನೀರು ದರ ಸಂಗ್ರಹದಲ್ಲಿ, ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳುವಲ್ಲಿ ಒಂದು ಸಂಘ ಹೊರತುಪಡಿಸಿ ಉಳಿದೆಲ್ಲವುಗಳ ಸಾಧನೆ ಶೂನ್ಯ. ಹಣಕಾಸಿನ ಸ್ವಾಯತ್ತತೆಯನ್ನು ಸಾಧಿಸುವಲ್ಲಿ ಸಂಘಗಳು ಹಿಂದೆ ಬಿದ್ದಿವೆ. ಸಂಘಗಳು ತಮ್ಮ ಉಪನಿಯಮಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಅನೇಕ ಅಡ್ಡಿ ಆತಂಕಗಳನ್ನು ಎದುರಿಸುತ್ತಿವೆ.

ನೀರಿನ ಹಂಚಿಕೆಯನ್ನು ಜಲಸಂಪನ್ಮೂಲ ಇಲಾಖೆಯೇ ನಿರ್ವಹಿಸುತ್ತಿದೆ. ಕೇವಲ ಒಂದು ಸಂಘ ಮಾತ್ರ ನೀರಾವರಿ ನಿರ್ವಹಣೆಯಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದೆ. ಪಾಲುದಾರರೆಲ್ಲ ಒಟ್ಟಾಗಿ ತಮ್ಮದೇ ವೆಚ್ಚದಲ್ಲಿ ಕೆಲವು ಕಾಮಗಾರಿಗಳನ್ನು ಕೈಗೊಂಡಿದ್ದಾರೆ. ಈ ಸಂಘದಲ್ಲಿ ಸುಶಿಕ್ಷಿತ ಮತ್ತು ಉತ್ತಮ ನಾಯಕತ್ವದ ಗುಣಗಳುಳ್ಳ ಪದಾಧಿಕಾರಿಗಳಿದ್ದಾರೆ. ರಾಜಕೀಯವಾಗಿ ಪ್ರಭಾವಶಾಲಿಗಳಾಗಿದ್ದು, ಯಾವುದೇ ಸಮಸ್ಯೆಯನ್ನು ಉನ್ನತ ಮಟ್ಟದ ಜನಪ್ರತಿನಿಧಿಗಳ ಮೂಲಕ ಬಗೆಹರಿಸಿಕೊಳ್ಳುವ ಸಾಮರ್ಥ್ಯವನ್ನು ಸಂಘ ಹೊಂದಿದೆ. ನೀರು ದರ ಸಂಗ್ರಹಕ್ಕೆ ಎಲ್ಲ ಸದಸ್ಯರು ಸ್ಪಂದಿಸುತ್ತಾರೆ. ಆದರೆ ಉಳಿದ ಸಂಘಗಳಲ್ಲಿ ಇಂತಹ ಪರಿಸ್ಥಿತಿಯಿಲ್ಲ. ಭಾಗೀದಾರರಲ್ಲಿ ಹಲವಾರು ಗೊಂದಲಗಳಿರುವುದರಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ಸಂಪೂರ್ಣ ವೈಫಲ್ಯಕ್ಕೆ ಗುರಿಯಾಗಿದೆ.

ಅಧ್ಯಯನಗಳ ಸಮೀಕ್ಷೆಯನ್ನು ಪ್ರಸ್ತುತ ಅಧ್ಯಯನದ ಫಲಿತಗಳೊಂದಿಗೆ ಹೋಲಿಸಿ ನೋಡಿದರೆ ಹಲವಾರು ಸಂಗತಿಗಳು ಪೂರಕವಾಗಿವೆ. ಕೆಲವು ಅಂಶಗಳು ಹೊಸ ತಥ್ಯಗಳಾಗಿ ಹೊರಹೊಮ್ಮಿವೆ. ಬಹುತೇಕ ಅಧ್ಯಯನಗಳು ಕಾಲುವೆ ನೀರಾವರಿ ನಿರ್ವಹಣೆಯಲ್ಲಿನ ತಾಂತ್ರಿಕ ಸಂಗತಿಗಳಿಗೆ ಒತ್ತುಕೊಟ್ಟಿವೆ. ಇದು ಅಚ್ಚುಕಟ್ಟು ಪ್ರದೇಶದ ಭೌತಿಕ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ. ಈ ಅಧ್ಯಯನದಲ್ಲೂ ಭೌತಿಕ ಸ್ಥಿತಿಗತಿಗಳು ದುಸ್ಥಿತಿಯಲ್ಲಿರುವುದನ್ನೇ ಸೂಚಿಸುತ್ತದೆ. ಒಟ್ಟಾರೆ ತಾಂತ್ರಿಕ ವಿಷಯಗಳು ಪ್ರಸ್ತುತ ಅಧ್ಯಯನದಲ್ಲಿ ತಾಳೆಯಾಗುತ್ತವೆ. ಕೆಳತುದಿ ಮತ್ತು ಮೇಲ್ತುದಿ ರೈತರ ಪರಿಸ್ಥಿತಿಯಲ್ಲಿಯೂ ಏಕರೀತಿಯ ಸತ್ಯಗಳೇ ಕಂಡುಬಂದಿವೆ. ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ಜಾರಿಯಾದ ನಂತರದ ಅಧ್ಯಯನಗಳು ನೀರು ಬಳಕೆದಾರರ ಸಹಕಾರ ಸಂಘಗಳ ಸ್ಥಿತಿಗತಿಗಳಲ್ಲಿ ಪ್ರದೇಶ ವಿಶಿಷ್ಟತೆಗೆ ಹೆಚ್ಚಿನ ಒತ್ತು ನೀಡಿವೆ. ಆದರೆ ಹಿಂದಿನ ಅಧ್ಯಯನಗಳಲ್ಲಿ ಕಂಡುಕೊಂಡ ಫಲಿತಗಳಿಗೂ ಪ್ರಸ್ತುತ ಅಧ್ಯಯನದ ಫಲಿತಗಳಿಗೂ ಹಲವಾರು ವ್ಯತ್ಯಾಸಗಳಿರುವುದನ್ನು ಗಮನಿಸಬಹುದು.

ಕೆಲವು ಅಧ್ಯಯನಗಳು ಸಂಘಗಳ ಆಡಳಿತಾತ್ಮಕ ಸಮಸ್ಯೆಗಳು, ಅನುಷ್ಠಾನ ಸಂಸ್ಥೆಗಳಲ್ಲಿನ ಲೋಪದೋಷಗಳು, ಸರಕಾರದ ನೀತಿ ಧೋರಣೆಗಳಲ್ಲಿನ ವೈಫಲ್ಯಗಳ ಕುರಿತು ಬಿಡಿಬಿಡಿಯಾದ ವಿಷಯಗಳನ್ನು ಚರ್ಚೆ ಮಾಡಿವೆ. ಪ್ರಸ್ತುತ ಅಧ್ಯಯನದಲ್ಲಿ ಈ ಮೇಲ್ಕಂಡ ಎಲ್ಲ ಅಂಶಗಳ ಜೊತೆಗೆ ನೀ.ಬ.ಸ. ಸಂಘಗಳ ಪದಾಧಿಕಾರಿಗಳ ಸದಸ್ಯರ ಸಾಮಾಜಿಕ ಹಿನ್ನೆಲೆಯನ್ನು, ಅವುಗಳ ಕಾರ್ಯ ಸಾಧನೆಯಲ್ಲಿನ ತೊಡಕುಗಳನ್ನು ಬಹುಶಿಸ್ತೀಯ ನೆಲೆಯಲ್ಲಿ ಅಧ್ಯಯನ ಮಾಡಿ ಹಲವಾರು ನವೀನ ತಥ್ಯಗಳನ್ನು ಕಂಡುಕೊಳ್ಳಲಾಗಿದೆ.

ಸಹಭಾಗಿತ್ವಕ್ಕೆ ತೊಡಕಾಗಿರುವ ಸಂಗತಿಗಳನ್ನು ಪತ್ತೆ ಹಚ್ಚುವುದರೊಂದಿಗೆ ಸಂಘಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯಲ್ಲಿ ಸಮಸ್ಯೆಗಳನ್ನು ಗುರುತಿಸಲಾಗಿದೆ. ಲಿಂಗಸ್ಪಂದಿಯಲ್ಲದ ಸಹಭಾಗಿತ್ವ ನೀರಾವರಿ

ನಿರ್ವಹಣೆ ಕಾರ್ಯಕ್ರಮ ಹೇಗೆ ದಾರಿ ತಪ್ಪುತ್ತಿದೆ ಎನ್ನುವುದನ್ನು ಪ್ರಸ್ತುತ ಅಧ್ಯಯನ ಕೂಲಂಕುಶವಾಗಿ ಚರ್ಚಿಸಿದೆ.

ಭಾಗೀದಾರರೆಲ್ಲರೂ ಜಲಸಂಪನ್ಮೂಲದ ಸಂರಕ್ಷಣೆ ಮತ್ತು ನಿರ್ವಹಣೆಯಲ್ಲಿ ಸಮಾನವಾಗಿ ಪಾಲ್ಗೊಳ್ಳದಿರಲು ಕಾರಣಗಳೇನು? ಫಲಾನುಭವಿಗಳ ಭಾಗವಹಿಸುವಿಕೆಗೆ ಇರುವ ಅಡೆತಡೆಗಳಾವುವು ಎನ್ನುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಒಟ್ಟಾರೆ ಈಗಾಗಲೇ ಪೂರ್ವ ಸೂರಿಗಳು ಸಹಭಾಗಿತ್ವ ನೀರಾವರಿ ನಿರ್ವಹಣೆಯಲ್ಲಿ ಕೈಗೊಂಡ ಅಧ್ಯಯನಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಕೆಲವು ಸಂಗತಿಗಳಲ್ಲಿ ಪೂರಕವಾದ ತಥ್ಯಗಳನ್ನು ಪಡೆದಿದೆಯಾದರೂ ಹಲವಾರು ಅಂಶಗಳಲ್ಲಿ ತನ್ನದೇ ಆದ ಪ್ರತ್ಯೇಕ ತಥ್ಯಗಳನ್ನು ಕಂಡುಕೊಂಡಿರುವುದನ್ನು ಗಮನಿಸಬಹುದಾಗಿದೆ. ಮುಖ್ಯವಾಗಿ ಈ ಅಧ್ಯಯನ ಭದ್ರಾ ಅಚ್ಚುಕಟ್ಟು ಪ್ರದೇಶದ ಪ್ರಾದೇಶಿಕ ವೈಶಿಷ್ಟ್ಯತೆಯ ನೆಲೆಯಲ್ಲಿ ಹೊಸ ಫಲಿತಗಳನ್ನು ಗುರುತಿಸಿಕೊಂಡಿದೆ.

## ೮.೨. ಅಧ್ಯಯನದ ಮುಖ್ಯ ತಥ್ಯಗಳು

ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ನೀ.ಬ.ಸ. ಸಂಘಗಳ ಮತ್ತು ವಿವಿಧ ಇಲಾಖೆಗಳ ನಡುವಿನ ಸಹಕಾರ, ಸಮನ್ವಯತೆ, ಸಂಘಗಳ ಕಾರ್ಯ ಸಾಧನೆ ಮತ್ತು ಬೆಳವಣಿಗೆಯಲ್ಲಿ ಸಾಮಾಜಿಕ ಸಂಗತಿಗಳ ಪ್ರಭಾವ, ಸಂಘಗಳ ಆಂತರಿಕ ಸಮಸ್ಯೆಗಳು ಮತ್ತು ಗೊಂದಲಗಳು ನೀ.ಬ.ಸ. ಸಂಘಗಳ ಯಶಸ್ಸು ಮತ್ತು ವೈಫಲ್ಯಗಳ ಹಿಂದಿರುವ ಅಂಶಗಳು, ಸರಕಾರದ ನೀತಿ ಧೋರಣೆಗಳು ಎನ್ನುವ ನೆಲೆಯಲ್ಲಿ ವಿಂಗಡಿಸಿಕೊಳ್ಳಲಾಗಿದೆ.

### ೮.೨.೧. ಸಂಘಗಳು ಮತ್ತು ವಿವಿಧ ಇಲಾಖೆಗಳ ನಡುವಿನ ಸಹಕಾರ, ಸಮನ್ವಯತೆ

ನೀ.ಬ.ಸ. ಸಂಘಗಳು ಮತ್ತು ವಿವಿಧ ಇಲಾಖೆಗಳ ನಡುವಿನ ಸಹಕಾರದಿಂದ ಭದ್ರಾ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯಲ್ಲಿ ಶೇ. ೯೮ಕ್ಕಿಂತ ಹೆಚ್ಚಿನ ಸಂಘಗಳು ಜಲಸಂಪನ್ಮೂಲ ಇಲಾಖೆಯೊಂದಿಗೆ ಒಡಂಬಡಿಕೆ ಒಪ್ಪಂದವನ್ನು ಮಾಡಿಕೊಂಡಿವೆ. ಗುರಿ ಸಾಧನೆಯಲ್ಲಿ ಅಚ್ಚುಕಟ್ಟು ಪ್ರಾಧಿಕಾರ (ಕಾಡಾ) ಉತ್ತಮ ಪ್ರಗತಿಯನ್ನು ಕಂಡಿದೆ. ತರಬೇತಿ ನೀಡುವಲ್ಲಿ ಸರಕಾರದಿಂದ ದೊರೆಯುವ ಹಣಕಾಸಿನ ನೆರವು ಒದಗಿಸುವಲ್ಲಿ ಕಾಡಾ ಸಂಘಗಳಿಗೆ ಬೆಂಬಲವಾಗಿ ನಿಂತಿದೆ. ಇಷ್ಟೇ ಬೆಂಬಲವನ್ನು ಕಂದಾಯ ಇಲಾಖೆ, ಕೃಷಿ ಇಲಾಖೆ, ಜಲಸಂಪನ್ಮೂಲ ಇಲಾಖೆ ನೀಡದೇ ಇರುವುದು ಸಂಘಗಳ ಕಾರ್ಯಸಾಧನೆಯ ಮೇಲೆ ಕೆಟ್ಟ ಪರಿಣಾಮಗಳನ್ನು ಬೀರುತ್ತಿದೆ. ನೀರಾವರಿ ನಿರ್ವಹಣೆಗೆ ಸಂಬಂಧಿಸಿದ ಎಲ್ಲ ಇಲಾಖೆಗಳ ನಡುವೆ ಅಸಹಕಾರವಿರುವುದರಿಂದ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ನಿರೀಕ್ಷಿತ ಪ್ರಗತಿಯನ್ನು ಸಾಧಿಸಿಲ್ಲ.

ಅಧಿಕಾರ ಹಸ್ತಾಂತರ ಮಾಡುವಲ್ಲಿ ಕಾಡಾದಲ್ಲಿರುವ ಸಹಕಾರ ಇಲಾಖೆಯಿಂದ ನಿಯೋಜನೆಗೊಂಡಿರುವ ಅಧಿಕಾರಿ ವರ್ಗ ಉತ್ತಮವಾಗಿ ಸ್ಪಂದಿಸುತ್ತಿದ್ದಾರೆ. ಆದರೆ ಒಡಂಬಡಿಕೆ ಒಪ್ಪಂದ ಮಾಡಿಕೊಂಡಿರುವ ಜಲಸಂಪನ್ಮೂಲ ಇಲಾಖೆಯು ಅಧಿಕಾರಿ ವರ್ಗ ಸಂಘಗಳ ಪದಾಧಿಕಾರಿಗಳನ್ನು ಗೊಂದಲಗಳಿಗೆ ಸಿಲುಕಿಸಿ, ಅಧಿಕಾರ ಹಸ್ತಾಂತರಕ್ಕೆ ಅಡ್ಡಿಯನ್ನುಂಟು ಮಾಡುತ್ತಿದ್ದಾರೆ. ಅದೇ ರೀತಿ ಕಂದಾಯ ಇಲಾಖೆ ನೀರು ದರ ಸಂಗ್ರಹವನ್ನು ತಾನೇ ಮಾಡುತ್ತಿದ್ದು ಸಂಘಗಳ ಹಣಕಾಸಿನ ಸಬಲೀಕರಣಕ್ಕೆ ಅಡ್ಡಿಯಾಗಿದೆ.

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮದ ನಿಯೋಗಿ ಸಂಸ್ಥೆ ಕಾಡಾದಲ್ಲಿ ಸಿಬ್ಬಂದಿಯ ಕೊರತೆಯಿದೆ. ಇರುವ ಸಿಬ್ಬಂದಿಯೂ ನಿವೃತ್ತಿಯ ಅಂಚಿನಲ್ಲಿದ್ದಾರೆ. ಇದರಿಂದ ಸ.ನೀ.ನಿ. ಕಾರ್ಯಕ್ರಮದ ಅನುಷ್ಠಾನಕ್ಕೆ ದಕ್ಕೆಯಾಗಿದೆ. ಖಾಯಂ ಸಿಬ್ಬಂದಿಯಿಲ್ಲದೆ ಇತರೆ ಇಲಾಖೆಗಳಿಂದ ನಿಯೋಜನೆಗೊಂಡ ಅಧಿಕಾರಿ ವರ್ಗ ತಮ್ಮ ಮಾತೃ ಇಲಾಖೆಗೆ ಮರು ವರ್ಗಾವಣೆ ಬಯಸುವುದರಿಂದ ಅವರ ಕಾರ್ಯಕ್ಷಮತೆ ಕಡಿಮೆಯಿರುತ್ತದೆ. ಆಸಕ್ತಿಯಿಲ್ಲದ ಅಧಿಕಾರಿ ವರ್ಗದಿಂದ ಸಹಭಾಗಿತ್ವ ಯೋಜನೆ ಫಲಾನುಭವಿಗಳಿಗೆ ಸಮಂಜಸವಾಗಿ ತಲುಪುತ್ತಿಲ್ಲ.

ಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿನ ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿಯನ್ನು ತಡೆಗಟ್ಟುವಲ್ಲಿ ಕಾಡಾ ಸೇರಿದಂತೆ ಇತರೆ ಇಲಾಖೆಗಳು ವಿಫಲವಾಗಿವೆ. ಈ ವೈಫಲ್ಯಕ್ಕೆ ಮುಖ್ಯ ಕಾರಣ ಈ ಇಲಾಖೆಗಳಲ್ಲಿನ ದ್ವಂದ್ವ ಆದೇಶಗಳು. ಸರಕಾರದ ಆದೇಶಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ವಚಿಸುತ್ತಿರುವುದಾಗಿದೆ. ನಿಯಮಪಾಲನೆ ಮತ್ತು ಕಾನೂನು ಕ್ರಮಗಳನ್ನು ತೆಗೆದುಕೊಳ್ಳುವುದರಲ್ಲಿ ಒಂದೊಂದು ಇಲಾಖೆ ಒಂದೊಂದು ಮಾರ್ಗವನ್ನು ಅನುಸರಿಸುತ್ತಿದೆ. ವಿದ್ಯುತ್ ಇಲಾಖೆ ಮತ್ತು ಕಂದಾಯ ಇಲಾಖೆಗಳು ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಯ ಗಮನಕ್ಕೆ ತರದಂತೆ ಅಕ್ರಮ ನೀರು ಎತ್ತುವಳಿದಾರರಿಗೆ ವಿದ್ಯುತ್ ಸಂಪರ್ಕ ನೀಡುವ ಪರಿಪಾಠವಿದೆ. ಇದು ಅಕ್ರಮ ಚಟುವಟಿಕೆಗಳಿಗೆ ದಾರಿ ಮಾಡಿಕೊಟ್ಟಿದೆ. ರೈತರ ನಡುವಿನ ಸಂಘರ್ಷಗಳಿಗೆ ಎಡೆಮಾಡಿಕೊಡುತ್ತದೆ. ನೈಜ ವಾರಸುದಾರರಿಗೆ ನೀರು ಸಿಗದಂತಾಗುತ್ತದೆ.

ಬೆಳೆ ಮಾದರಿ ಮತ್ತು ವಾರಾಬಂದಿ ಉಲ್ಲಂಘನೆ ಮಾಡುವ ರೈತರ ವಿರುದ್ಧ ಕಾಡಾ ಅಥವಾ ಜಲಸಂಪನ್ಮೂಲ ಇಲಾಖೆ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಇದರಿಂದ ನೀರಿನ ಬಳಕೆ ಹಾಗೂ ಹಂಚಿಕೆಯಲ್ಲಿ ಸಮಾನತೆ ಸಾಧ್ಯವಾಗಿಲ್ಲ. ಕೆಳತುದಿ ರೈತರಿಗೆ ನೀರಿನ ಕೊರತೆ ತೀವ್ರವಾಗಿದ್ದು ಮೇಲ್ತುದಿ ರೈತರಿಗೆ ಅಧಿಕ ನೀರಿನ ಸಮಸ್ಯೆಯಾಗಿದೆ. ಅಧಿಕ ನೀರು ಬೇಡುವ ಭತ್ತ, ಕಬ್ಬು ಬೆಳೆಗಳೇ ಹೆಚ್ಚಾಗಿದ್ದು ಬೆಳೆಗಳ ವೈವಿಧ್ಯತೆಗೆ ಅವಕಾಶವಿಲ್ಲದಂತಾಗಿದೆ. ಏಕಬೆಳೆ ಪದ್ಧತಿಯಿಂದ ಭೂಮಿಯ ಫಲವತ್ತತೆ ಕಡಿಮೆಯಾಗುತ್ತಿದೆ.

ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯ ಕಾಲುವೆ, ಆಯಕಟ್ಟಿನ ರಸ್ತೆ, ಕೆರೆ, ಗೋಮಾಳ ಮೊದಲಾದವುಗಳ ಒತ್ತುವರಿ ಮತ್ತು ಅತಿಕ್ರಮಗಳು ಸಾಮಾನ್ಯವಾಗಿದೆ. ಇಂತಹ ಒತ್ತುವರಿ ಮತ್ತು ಅತಿಕ್ರಮಗಳನ್ನು ತಡೆಯಲು ಕಂದಾಯ, ಕಾಡಾ, ಜಲಸಂಪನ್ಮೂಲ ಇಲಾಖೆಗಳು ಜಂಟಿಯಾಗಿ ಕ್ರಮ ತೆಗೆದುಕೊಳ್ಳಬೇಕು. ಆದರೆ ಇಂತಹ ಒತ್ತುವರಿಯನ್ನು ತೆರವುಗೊಳಿಸುವಲ್ಲಿ ಇಲಾಖೆಗಳ ನಡುವೆ ಸಹಯೋಗವಿಲ್ಲ. ಅವುಗಳಿಗೆ ಆಸಕ್ತಿಯೂ ಇಲ್ಲ.

ಅಚ್ಚುಕಟ್ಟು ಪ್ರದೇಶದಲ್ಲಿ ಸಂಯೋಜಿತ ನೀರು ಬಳಕೆ ಮಾಡುವ ಕುರಿತು ಕಾಡಾ ಅಥವಾ ಜಲಸಂಪನ್ಮೂಲ ಇಲಾಖೆ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಇದರಿಂದ ಅಪಾರ ಜಲ ಅಪವ್ಯಯ ವಾಗುತ್ತಿದೆ. ಕಾಲುವೆ ನೀರನ್ನು ಸಮರ್ಪಕವಾಗಿ ವಿತರಣೆ ಮಾಡಲು ಅಗತ್ಯವಾದ ನೀರುಗಂಟಿಗಳು ನೇಮಕವಾಗಿಲ್ಲ.

ನೀರು ಬಳಕೆದಾರರ ಸಹಕಾರ ಸಂಘಗಳ ಆಡಳಿತ ಮಂಡಳಿ ಮತ್ತು ಸರ್ವ ಸದಸ್ಯರ ಸಭೆಗಳಲ್ಲಿ ಜಲಸಂಪನ್ಮೂಲ ಇಲಾಖೆಯ ಅಧಿಕಾರಿಗಳು ನಾಮನಿರ್ದೇಶಿತ ಪದಾಧಿಕಾರಿಗಳಾಗಿದ್ದರೂ ಅವರ ಭಾಗವಹಿಸುವಿಕೆ ಅತಿ ಕಡಿಮೆ. ವಿಶೇಷ ಆಹ್ವಾನ ನೀಡಿದರೂ ಕಾಡಾದ ಅಧಿಕಾರಿ ವರ್ಗವೂ ಗೈರು ಹಾಜರಾಗುವುದೇ ಹೆಚ್ಚು. ಇದರಿಂದ ನೀ.ಬ.ಸ. ಸಂಘಗಳ ಅನೇಕ ಸಮಸ್ಯೆಗಳಿಗೆ ಯಾವುದೇ ಪರಿಹಾರ ಸಿಗುತ್ತಿಲ್ಲ. ವಿವಿಧ ಇಲಾಖೆಗಳಲ್ಲಿನ ಲಂಚಗುಳಿತನ, ಸ್ವಜನ ಪಕ್ಷಪಾತ, ವಿಳಂಬ ನೀತಿಯಿಂದ ನೀ.ಬ.ಸ. ಸಂಘಗಳ ಕಾರ್ಯ ಚಟುವಟಿಕೆಗಳಿಗೆ ತೊಡಕಾಗಿದೆ.

**೮.೨.೨. ಸಂಘಗಳ ಕಾರ್ಯಚಟುವಟಿಕೆಗಳ ಸಾಮಾಜಿಕ ಆಯಾಮಗಳು**

ಭದ್ರಾ ಅಚ್ಚುಕಟ್ಟು ಪ್ರದೇಶದ ನೀ.ಬ.ಸ. ಸಂಘಗಳ ಗ್ರಾಮಗಳ ಜಾತಿವಾರು ಸಂರಚನೆ ಮತ್ತು ಭೂಹಿಡುವಳಿಗಳ ರಚನೆಯನ್ನು ಗಮನಿಸಿದರೆ ಉನ್ನತ ಜಾತಿಗಳ ಜನಸಂಖ್ಯೆ ಪಾಲು ಕಡಿಮೆ ಇದ್ದು (ಶೇ. ೫೦ಕ್ಕಿಂತ ಕಡಿಮೆ) ಅವರು ಹೊಂದಿರುವ ಭೂಮಿ ಪ್ರಮಾಣ ಅಧಿಕವಾಗಿದೆ (ಶೇ. ೭೫ಕ್ಕಿಂತ ಹೆಚ್ಚು). ಅಂದರೆ ಉನ್ನತ ಜಾತಿಗಳು ಭೂಹಿಡುವಳಿಗಳಲ್ಲಿ ಹೆಚ್ಚಿನ ಪಾಲು ಹೊಂದಿರುವುದರೊಂದಿಗೆ ಶೈಕ್ಷಣಿಕ, ಆರ್ಥಿಕ, ರಾಜಕೀಯ, ಸಾಮಾಜಿಕವಾಗಿಯೂ ಉತ್ತಮ ಪ್ರಗತಿಯನ್ನು ಸಾಧಿಸಿವೆ.

ಇದಕ್ಕೆ ವ್ಯತಿರಿಕ್ತವಾಗಿ ಹಿಂದುಳಿದ ವರ್ಗ, ಅಲ್ಪಸಂಖ್ಯಾತರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಜನಸಂಖ್ಯೆಗಿಂತ ಅವರು ಪಡೆದಿರುವ ಭೂಮಿಯ ಪ್ರಮಾಣ ಕಡಿಮೆಯಿದೆ. ಅದರಂತೆ ಅವರು ಶೈಕ್ಷಣಿಕ, ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳು ಕೆಳಮಟ್ಟದಲ್ಲಿವೆ. ಮಹಿಳೆಯರು ಇತರೆ ಎಲ್ಲಾ ವರ್ಗಗಳಿಗಿಂತ ದುಸ್ಥಿತಿಯಲ್ಲಿದ್ದಾರೆ. ಭೂಹಿಡುವಳಿಗಳಲ್ಲಿ ಅವರ ಪಾಲು ಅತ್ಯಂತ ಕಡಿಮೆ. ಅವರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಅತ್ಯಂತ ಹೀನಾಯ

ಸ್ಥಿತಿಯಲ್ಲಿದ್ದಾರೆ. ಉನ್ನತ ಜಾತಿಯ ಮಹಿಳೆಯರು ಕೆಲಮಟ್ಟಿನ ಸ್ಥಾನಮಾನಗಳನ್ನು ಹೊಂದಿದ್ದರೂ, ಕೆಳವರ್ಗದ ಮಹಿಳೆಯರು ಎಲ್ಲ ರಂಗಗಳಲ್ಲಿ ಅವಕಾಶ ವಂಚಿತರಾಗಿದ್ದಾರೆ. ಅವರ ಪರಿಸ್ಥಿತಿ ಶೋಚನೀಯವಾಗಿದೆ.

ಸಂಘಗಳ ಪದಾಧಿಕಾರಿಗಳ ಆಯ್ಕೆಯಲ್ಲಿ ಪ್ರಧಾನ ಜಾತಿಗಳೇ ಹೆಚ್ಚಿನ ಪಾಲು ಪಡೆದಿವೆ. ಶೇ. ೭೫ಕ್ಕಿಂತ ಹೆಚ್ಚಿನ ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಗಳು ಮೇಲ್ಜಾತಿಗಳಿಗೆ ಸೇರಿವೆ. ಉಳಿದ ಸ್ಥಾನಗಳು ಹಿಂದುಳಿದ ಜಾತಿಗಳ ಪಾಲಾಗಿವೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ ಹಾಗೂ ಮಹಿಳೆಯರಿಗೆ ಒಂದೇ ಒಂದು ಅಧ್ಯಕ್ಷ ಅಥವಾ ಉಪಾಧ್ಯಕ್ಷ ಹುದ್ದೆಯೂ ಲಭಿಸಿಲ್ಲ. ಮುಖ್ಯ ಸ್ಥಾನಗಳಲ್ಲಿರುವ ಆಡಳಿತ ಮಂಡಳಿಯ ನಿರ್ದೇಶಕ ಹುದ್ದೆಗಳಲ್ಲಿ ಮೇಲ್ವರ್ಗದವರೇ ಹೆಚ್ಚಾಗಿದ್ದಾರೆ. ಇವರು ಈಗಾಗಲೇ ಇತರೇ ಸಂಘಸಂಸ್ಥೆಗಳಲ್ಲಿ ಹಲವಾರು ಹುದ್ದೆಗಳನ್ನು ಅಲಂಕರಿಸಿದವರಾಗಿದ್ದಾರೆ (ಶೇ. ៩೦). ಅಂದರೆ ಬಹುತೇಕ ನೀ.ಬ.ಸ. ಸಂಘಗಳು ಪ್ರಬಲ ವರ್ಗದವರ ನಿಯಂತ್ರಣದಲ್ಲಿವೆ. ದುರ್ಬಲ ವರ್ಗದವರು ಮತ್ತು ಮಹಿಳೆಯರು ಬಲಾಢ್ಯರ ಅಧೀನದಲ್ಲಿದ್ದು ಅವರ ಧ್ವನಿಗೆ ಮನ್ನಣೆ ದೊರೆಯುತ್ತಿಲ್ಲ.

ನೀ.ಬ.ಸ. ಸಂಘಗಳಲ್ಲಿ ಸದಸ್ಯತ್ವ ಪಡೆದಿರುವವರನ್ನು ಗಮನಿಸಿದಾಗಲೂ ಮೇಲ್ಜಾತಿಯವರ ಸಂಖ್ಯೆಯೇ ಅಧಿಕ. ಕೆಳಸಮುದಾಯಗಳು ಮತ್ತು ಮಹಿಳೆಯರು ಕಡಿಮೆ ಸಂಖ್ಯೆಯ ಸದಸ್ಯತ್ವ ಪಡೆದಿದ್ದಾರೆ. ಪ್ರಧಾನ ಜಾತಿಗೆ ಸೇರಿದ ಸದಸ್ಯರು ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ. ತಳವರ್ಗದವರು ಈ ಎಲ್ಲ ಸಂಗತಿಗಳಲ್ಲಿ ದುಸ್ಥಿತಿಯಲ್ಲಿದ್ದಾರೆ. ಮಹಿಳೆಯರಲ್ಲಿ ಮೇಲ್ಜಾತಿಯವರಿಗೆ ಮಾತ್ರ ಅಲ್ಪಪ್ರಮಾಣದ ಸ್ಥಾನಮಾನಗಳು ದೊರೆತಿವೆ. ಕೆಳವರ್ಗದ ಮಹಿಳೆಯರ ಸ್ಥಿತಿ ಧಾರುಣವಾಗಿದೆ.

ಸಂಘಗಳ ಕಾರ್ಯಕಾರಿ ಮಂಡಳಿ ಸಭೆಗಳಲ್ಲಿ ಉನ್ನತ ಜಾತಿಗೆ ಸೇರಿದ ಪದಾಧಿಕಾರಿಗಳ ಹಾಜರಾತಿ ಹೆಚ್ಚಾಗಿದೆ (ಶೇ. ೭೦.೬೬). ಉಳಿದಂತೆ ಹಿಂದುಳಿದ ವರ್ಗದವರ, ಅಲ್ಪಸಂಖ್ಯಾತರ (ಶೇ. ៥೬.೦೦) ಪರಿಶಿಷ್ಟ ಜಾತಿ (ಶೇ. ೩೩.೩೩) ಪರಿಶಿಷ್ಟ ವರ್ಗ (ಶೇ. ៤೦.೦೦)ದವರ ಹಾಜರಾತಿ ಕಡಿಮೆ. ಪರಿಶಿಷ್ಟ ಪಂಗಡದವರ ಹಾಜರಾತಿ ಪರಿಶಿಷ್ಟ ಜಾತಿಯವರಿಗೆ ಹೋಲಿಸಿದರೆ ಉತ್ತಮವಾಗಿದೆ. ಮಹಿಳೆಯರ ಹಾಜರಾತಿಯು ಅತ್ಯಂತ ಕೆಳಮಟ್ಟದಲ್ಲಿದೆ (ಶೇ. ೨៥). ಕೆಲವು ಸಭೆಗಳಲ್ಲಿ ಮಹಿಳಾ ಪದಾಧಿಕಾರಿಗಳ ಬದಲಿಗೆ ಕುಟುಂಬದ ಪುರುಷ ಸದಸ್ಯರು ಹಾಜರಾಗುವುದು ಸಾಮಾನ್ಯ ಸಂಗತಿಯಾಗಿದೆ.

ಸಂಘಗಳ ಆಡಳಿತ ಮಂಡಳಿ ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ, ನಿರ್ಧಾರ ಕೈಗೊಳ್ಳುವ, ತೆಗೆದುಕೊಂಡ ನಿರ್ಧಾರಗಳನ್ನು ಅನುಷ್ಠಾನಗೊಳಿಸುವ, ಕಾರ್ಯಗತ ಯೋಜನೆಯ ಮೇಲ್ವಿಚಾರಣೆ

ಹಾಗೂ ಕಾರ್ಯ ಚಟುವಟಿಕೆಗಳನ್ನು ಮೌಲ್ಯಮಾಪನ ಮಾಡುವಲ್ಲಿ ಮೇಲ್ವರ್ಗದವರ ಪಾತ್ರ ಹೆಚ್ಚಾಗಿದೆ. ಕೆಳವರ್ಗಗಳ ಪಾಲ್ಗೊಳ್ಳುವಿಕೆ ಕಡಿಮೆ. ಮಹಿಳೆಯರ ಪಾತ್ರ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ (ನೋಡಿ ಕೋಷ್ಟಕ ೭.೪).

**೮.೨.೩. ಸಂಘಗಳ ಆಂತರಿಕ ಸಮಸ್ಯೆಗಳು**

ಔಪಚಾರಿಕವಾಗಿ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮವನ್ನು ಜಾರಿಗೊಳಿಸುವಾಗ ಆರಂಭದಲ್ಲಿ ರೈತರು ಸ್ಪಂದಿಸುತ್ತಿಲ್ಲ. ಸರಕಾರದಿಂದ ಲಭಿಸುವ ಹಣಕಾಸಿನ ಉತ್ತೇಜನಗಳಿಂದ ಪ್ರೇರೇಪಿತವಾಗಿ ಬಹುತೇಕ ಸಂಘಗಳು ಒಡಂಬಡಿಕೆ ಒಪ್ಪಂದ ಮಾಡಿಕೊಂಡು ಆನಂತರ ಯಾವುದೇ ಪ್ರಗತಿ ಸಾಧಿಸಿಲ್ಲ. ಅಚ್ಚುಕಟ್ಟು ರೈತರನ್ನು ಸಂಘಗಳಲ್ಲಿ ಸದಸ್ಯತ್ವ ಮಾಡಿಸುವಲ್ಲಿ ಅಧ್ಯಕ್ಷ, ಉಪಾಧ್ಯಕ್ಷ ಅಥವಾ ಕಾರ್ಯದರ್ಶಿಗಳೇ ಷೇರುಹಣ ತುಂಬಿದ್ದಾರೆ. ರೈತರನ್ನು ಸಂಘಗಳತ್ತ ಆಕರ್ಷಿಸುವ ಯಾವ ಸಂಗತಿಯೂ ಪ್ರಸ್ತುತ ಸಹಭಾಗಿತ್ವ ಮಾದರಿಯಲ್ಲಿ ಇಲ್ಲ.

ಸದಸ್ಯತ್ವ ಪಡೆದವರು ನೀರನ್ನು ಅನಧಿಕೃತವಾಗಿ ಅಥವಾ ಅಕ್ರಮವಾಗಿ ಬಳಕೆ ಮಾಡುತ್ತಿರುವುದು ಸಂಘಗಳ ಪ್ರಗತಿಗೆ ಅಡ್ಡಿಯಾಗಿದೆ. ಪದಾಧಿಕಾರಿಗಳೂ ಅಕ್ರಮ ಚಟುವಟಿಕೆಗಳಲ್ಲಿ ತೊಡಗಿರುವಾಗ ಅವುಗಳನ್ನು ತಡೆಯುವುದಾದರೂ ಹೇಗೆ? ಎನ್ನುವ ಇಕ್ಕಟ್ಟಿನಲ್ಲಿ ಸಂಘಗಳಿವೆ. ಸರಕಾರದಿಂದಲೇ ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿಯನ್ನು ತಡೆಯಲು ಸಾಧ್ಯವಿಲ್ಲದಿರುವಾಗ ಅಂತಹ ಕಾರ್ಯವನ್ನು ನೀ.ಬ.ಸ. ಸಂಘಗಳಿಗೆ ವಹಿಸಿರುವುದು ಗೊಂದಲಕ್ಕೆ ಕಾರಣವಾಗಿದೆ.

ಅಕ್ರಮ ನೀರು ಬಳಕೆಯನ್ನು ಹಾಗೂ ಮೇಲ್ತುದಿ ರೈತರ ಅತಿಯಾದ ನೀರು ಬಳಕೆಯನ್ನು ತಡೆಗಟ್ಟದೆ ಕೆಳತುದಿ ರೈತರಿಗೆ ನೀರು ದೊರೆಯುವುದಿಲ್ಲ. ಅತಿಯಾದ ನೀರಿನ ಬಳಕೆ ಮತ್ತು ಅಕ್ರಮ ನೀರು ಬಳಕೆಯನ್ನು ತಡೆಯದೇ ಇರುವುದರಿಂದ ಸಂಘಗಳು ಕೊನೆಯ ತುದಿಗೆ ನೀರು ಒದಗಿಸಲು ವಿಫಲವಾಗಿವೆ. ಇದರಿಂದ ಕೆಳತುದಿ ರೈತರು ಸಂಘಗಳಲ್ಲಿ ಸದಸ್ಯತ್ವ ಪಡೆಯುತ್ತಿಲ್ಲ. ನೀರಿನ ಸಮಾನ ವಿತರಣೆಗೆ ಯಾವುದೇ ಕಾರ್ಯತಂತ್ರವನ್ನು ರೂಪಿಸದೇ ಕಾಲುವೆಯ ಎಲ್ಲ ಭಾಗದ ರೈತರನ್ನು ನೀ.ಬ.ಸ. ಸಂಘಗಳತ್ತ ಸೆಳೆಯಲು ಸಾಧ್ಯವಾಗಿಲ್ಲ. ನೀರು ನೈಜ ಹಕ್ಕುದಾರರಿಗೆ ದೊರೆಯದೆ ವಾರಸುದಾರರಲ್ಲದವರಿಗೆ ಸಿಗುತ್ತಿರುವಾಗ ಸದಸ್ಯತ್ವ ಪಡೆಯುವಂತೆ ರೈತರನ್ನು ಪ್ರೇರಣೆಗೊಳಿಸಲು ಸಾಧ್ಯವಿಲ್ಲ.

ಇಲ್ಲಿಯತನಕ ನೀರು ದರ ಪಾವತಿ ಮಾಡದೇ ನುಣಚಿಕೊಳ್ಳುವ ಮನೋವೃತ್ತಿ ಹೊಂದಿದ್ದ ರೈತರನ್ನು ನೀರು ದರ ನೀಡುವಂತೆ ಮಾಡುವುದು ಸಂಘಗಳಿಗೆ ಸವಾಲಾಗಿದೆ. ಪುಕ್ಕಟೆಯಾಗಿ ಎಲ್ಲವೂ ದೊರೆಯುತ್ತಿರುವ ಸಂದರ್ಭದಲ್ಲಿ ಸಂಘಗಳು ನೀರು ದರ ವಸೂಲಿ ಮಾಡುವುದನ್ನು ಮೇಲ್ತುದಿ ರೈತರು ಪ್ರತಿರೋಧಿಸುತ್ತಾರೆ. ಕೆಳತುದಿ ರೈತರಿಗೆ ನೀರು ದೊರೆಯದೇ ಇರುವುದರಿಂದ ನೀರು ದರ ನೀಡುವ ಪ್ರಶ್ನೆ

ಉದ್ಭವಿಸುವುದಿಲ್ಲ. ನೀರು ದರ ಸಂಗ್ರಹವೇ ಕಠಿಣವಾಗಿರುವಾಗ ಇತರೆ ಅಭಿವೃದ್ಧಿ ಕಾರ್ಯಗಳಿಗೆ ಹೆಚ್ಚುವರಿ ವಂತಿಗೆಗಳನ್ನು ಸಂಗ್ರಹಿಸಲು ಸಂಘಗಳಿಗೆ ಸಾಧ್ಯವಾಗುತ್ತಿಲ್ಲ. ಇದರಿಂದ ಸಂಘಗಳು ಹಣಕಾಸಿನ ಕೊರತೆಯಿಂದ ಬಳಲುತ್ತಿವೆ. ಹೊಸಹಳ್ಳಿ ಸಂಘ ಈ ನಿಟ್ಟಿನಲ್ಲಿ ರೈತರ ಮನವೊಲಿಸಿದೆ. ಬಹುತೇಕ ಯಶಸ್ವಿಯಾಗಿದೆ. ಉಳಿದ ಸಂಘಗಳು ಹಣಕಾಸಿನ ಮುಗ್ಗಟ್ಟಿನಲ್ಲಿ ಸಿಲುಕಿವೆ.

ಸಂಘಗಳ ಸುಸ್ಥಿರತೆಗೆ ಮತ್ತು ನಿರಂತರತೆಯನ್ನು ಕಾಯ್ದುಕೊಳ್ಳಲು ಸಂಬಂಧಿಸಿದ ಎಲ್ಲ ಫಲಾನುಭವಿಗಳು ಕೆಲಮಟ್ಟಿನ ತ್ಯಾಗಕ್ಕೆ ಸಿದ್ಧರಿರಬೇಕು. ಆದರೆ ನೀ.ಬ.ಸ. ಸಂಘಗಳ ಸದಸ್ಯತ್ವ ಐಚ್ಛಿಕವಾಗಿರುವುದರಿಂದ ಇಚ್ಛೆ ಇರುವವರು, ಲಾಭ ದೊರೆಯುವವರು ಮಾತ್ರ ಸದಸ್ಯರಾಗುತ್ತಾರೆ. ಉಳಿದವರು ಸಂಘಗಳಿಂದ ಹೊರಗೆ ಇರುತ್ತಾರೆ. ಇದರಿಂದ ಸಂಘಗಳು ಹಣಕಾಸಿನ ಸ್ವಾವಲಂಬನೆ ಸಾಧಿಸಲು ಸಾಧ್ಯವಿಲ್ಲ. ಇದರಿಂದ ನಿಸರ್ಗದತ್ತ ಜಲಸಂಪನ್ಮೂಲದ ಸಂರಕ್ಷಣೆ ಮತ್ತು ನಿರ್ವಹಣೆ ಕ್ಲಿಷ್ಟವಾಗುತ್ತದೆ.

ಅಚ್ಚುಕಟ್ಟು ಪ್ರದೇಶದ ರೈತರಲ್ಲಿ ಬೆಳೆಗಳಿಗೆ ಹೆಚ್ಚು ನೀರುಣಿಸಿದರೆ ಅಧಿಕ ಇಳುವರಿ ದೊರೆಯುತ್ತದೆ ಎನ್ನುವ ತಪ್ಪು ನಂಬಿಕೆಯಿದೆ. ಇದರಿಂದ ನೀರಿನ ಬಗ್ಗೆ ರೈತರು ಅತಿವ್ಯಾಮೋಹ ಹೊಂದಿದ್ದಾರೆ. ಪರಿಣಾಮವಾಗಿ ಭದ್ರಾ ಅಚ್ಚುಕಟ್ಟು ಪ್ರದೇಶದ ಶೇ. ೩೦ ರಷ್ಟು ಭೂಮಿ ತನ್ನ ಫಲವತ್ತತೆಯನ್ನು ಕಳೆದುಕೊಂಡಿದೆ. ಬಳಕೆದಾರರಲ್ಲಿ ಸಹಕಾರ ಮನೋಭಾವ ಕಡಿಮೆಯಿದ್ದು ವೈಯಕ್ತಿಕ ಹಿತಾಸಕ್ತಿಗಳು ಹೆಚ್ಚಾಗಿರುವುದರಿಂದ ಎಲ್ಲ ಭಾಗೀದಾರರನ್ನು ಸಹಭಾಗಿತ್ವದಲ್ಲಿ ತೊಡಗಿಸಿಕೊಳ್ಳುವುದು ಒಂದು ಸಮಸ್ಯೆಯಾಗಿದೆ.

**೮.೨.೪. ಯಶಸ್ಸು ಮತ್ತು ವೈಫಲ್ಯಗಳ ನೆಲೆ**

ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಕೆಲವು ಸಂಗತಿಗಳಲ್ಲಿ ಹೊಸಹಳ್ಳಿ ನೀ.ಬ.ಸ. ಸಂಘ ತನ್ನ ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ಸಫಲವಾಗಿದೆ. ಉಳಿದ ಎಲ್ಲ ೨೪ ಸಂಘಗಳು ಇನ್ನು ಸ್ಥಗಿತ ಸ್ಥಿತಿಯಲ್ಲಿವೆ. ಹೊಸಹಳ್ಳಿ ಸಂಘವು ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ಅವಕಾಶಗಳನ್ನು ಸದುಪಯೋಗ ಮಾಡಿಕೊಂಡಿದೆ. ಈ ಸಂಘದಲ್ಲೂ ಅಸಮಾನ ಸಾಮಾಜಿಕ ಸಂರಚನೆ ಇದ್ದರೂ ಸಂಘದ ಚಟುವಟಿಕೆಗಳಲ್ಲಿ ಎಲ್ಲ ಫಲಾನುಭವಿಗಳನ್ನು ತೊಡಗಿಸಿಕೊಂಡಿದೆ. ಹಣಕಾಸಿನ ಸ್ವಾಯತ್ತತೆಯನ್ನು ಸಾಧಿಸಿದೆ. ಸದಸ್ಯರ ನೆರವಿನಿಂದಲೇ ಹಲವಾರು ಕಾಮಗಾರಿಗಳನ್ನು ಕೈಗೊಂಡಿದೆ. ತನ್ನ ರಾಜಕೀಯ ವರ್ಚಸ್ಸಿನಿಂದ ನೀರುದರ ಸಂಗ್ರಹದ ಹೊಣೆಯನ್ನು ಕಂದಾಯ ಇಲಾಖೆಯಿಂದ ಹೋರಾಟ ಮಾಡಿ ದಕ್ಕಿಸಿಕೊಂಡಿದೆ. ಉತ್ತಮ ನಾಯಕತ್ವದ ಪರಿಣಾಮವಾಗಿ ಸಂಘವು ಅಭಿವೃದ್ಧಿ ಪಥದಲ್ಲಿದೆ.

ಹೊಸಹಳ್ಳಿ ಸಂಘವು ಕಾರ್ಯದರ್ಶಿಯನ್ನು ಹೊರಗಿನಿಂದ ಆಯ್ಕೆ ಮಾಡಿಕೊಂಡಿದೆ. ಕಾರ್ಯದರ್ಶಿಗೆ ಸಹಕಾರ ಇಲಾಖೆಯಿಂದ ತರಬೇತಿಯನ್ನು ಕೊಡಿಸಿದೆ. ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಯೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿದೆ. ಸರಕಾರದಿಂದ ಹಾಗೂ ವಿವಿಧ ಇಲಾಖೆಗಳಿಂದ ದೊರೆಯುವ ಎಲ್ಲ ರೀತಿಯ ಸೌಲಭ್ಯಗಳನ್ನು ಪಡೆದುಕೊಂಡಿದೆ. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಸಂಘದ ಪದಾಧಿಕಾರಿಗಳು ಸ್ವತಃ ಹಣಕಾಸಿನ ನೆರವನ್ನು ನೀಡಿದ್ದಾರೆ. ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಯಿಂದ ಕಾಮಗಾರಿಗಳಿಗೆ ತಗಲುವ ವೆಚ್ಚವನ್ನು ಅಂದಾಜು ಮಾಡಿಸಿದ್ದಾರೆ. ಕಡಿಮೆ ವೆಚ್ಚದಲ್ಲಿ ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಪೂರೈಸಲಾಗಿದೆ. ಹೀಗೆ ಹೊಸಹಳ್ಳಿ ನೀ.ಬ.ಸ. ಸಂಘ ಇಷ್ಟೆಲ್ಲಾ ಯಶೋಗಾಥೆ ಹೊಂದಿದ್ದರೂ ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿಯನ್ನು ತಡೆಗಟ್ಟುವಲ್ಲಿ ವಿಫಲವಾಗಿದೆ. ಅಣೆಕಟ್ಟೆಯ ಅಂಚಿನಲ್ಲಿಯೇ ಈ ಸಂಘವಿರುವುದರಿಂದ ಕೆಳತುದಿ ರೈತರ ಸಮಸ್ಯೆ ಕಂಡುಬರುವುದಿಲ್ಲ. ಬೆಳೆ ಮಾದರಿ ಪಾಲನೆ ಮತ್ತು ವಾರಾಬಂದಿ ಅಳವಡಿಕೆಯಲ್ಲಿ ಸಂಘ ಸಫಲವಾಗಿಲ್ಲ. ಒಟ್ಟಾರೆ ಸಂಘದ ಚಟುವಟಿಕೆಗಳು ಆಶಾದಾಯಕವಾಗಿವೆ.

ಇತರೆ ನೀ.ಬ.ಸ. ಸಂಘಗಳಲ್ಲಿ ಒಡಂಬಡಿಕೆ ಒಪ್ಪಂದ ನಂತರ ಯಾವುದೇ ಉಪಯುಕ್ತ ಚಟುವಟಿಕೆಗಳು ನಡೆಯುತ್ತಿಲ್ಲ. ಕೆಲವು ಸಂಘಗಳು ನೀರುದರ ಸಂಗ್ರಹಕ್ಕೆ ಪ್ರಯತ್ನಗಳನ್ನು ನಡೆಸಿವೆ. ಆದರೆ ಫಲಶೃತಿ ಶೂನ್ಯ. ಅಚ್ಚುಕಟ್ಟು ಪ್ರದೇಶ ವ್ಯಾಪ್ತಿಯಲ್ಲಿ ಮೂರು ಸಂಘಗಳು ಕಾಡಾ ನೆರವಿನಿಂದ ಕಛೇರಿ ಕಂ ಉಗ್ರಾಣಗಳನ್ನು ನಿರ್ಮಾಣ ಮಾಡಿಕೊಂಡಿವೆ. ಉಳಿದ ಸಂಘಗಳಿಗೆ ಅಂತಹ ಅವಕಾಶವಿದ್ದರೂ ಹಣಕಾಸಿನ ಮುಗ್ಗಟ್ಟಿನಿಂದ ಕಟ್ಟಡ ಸಹಾಯಧನ ಪಡೆಯಲು ವಿಫಲವಾಗಿವೆ. ಕಾರ್ಯದರ್ಶಿಗಳಿಗೆ ವೇತನ ನೀಡುವಷ್ಟು ಸಾಮರ್ಥ್ಯವನ್ನು ಹೊಂದಿಲ್ಲ.

ಬಹುತೇಕ ಸಂಘಗಳು ವಾರ್ಷಿಕ ಲೆಕ್ಕ ಪರಿಶೋಧನೆಯನ್ನು ಮಾಡಿಸುವ ಪರಿಪಾಠ ಹೊಂದಿಲ್ಲ. ಕೆಲವು ಸಂಘಗಳು ಲೆಕ್ಕ ಪರಿಶೋಧನೆಯನ್ನು ಮಾಡಿಸುತ್ತವೆ. ಆದರೆ ಅವು ನಿವ್ವಳ ನಷ್ಟದಲ್ಲಿವೆ. ಲೆಕ್ಕ ಶೀರ್ಷಿಕೆಗಳಲ್ಲಿನ ಹಲವಾರು ಲೋಪದೋಷಗಳಿಂದ ಲೆಕ್ಕ ಪರಿಶೋಧನೆ ವಿಳಂಬವಾಗುತ್ತದೆ. ಹೊಸಹಳ್ಳಿ ನೀ.ಬ.ಸ. ಸಂಘ ಆರಂಭದಿಂದಲೂ ನಿವ್ವಳ ಲಾಭ ಗಳಿಸುತ್ತಿದೆ. ಆದರೆ ಅದರ ಪ್ರಮಾಣ ಕಡಿಮೆಯಾಗುತ್ತಿದೆ. ಉತ್ತರದಾಯಿತ್ವ ಮತ್ತು ಪಾರದರ್ಶಕತೆಯಲ್ಲಿ ಸಂಘಗಳು ಸಕಾರಾತ್ಮಕ ಪ್ರತಿಕ್ರಿಯೆಯನ್ನು ತೋರುತ್ತಿಲ್ಲ. ಈ ಕುರಿತು ಸಂಘಗಳಿಗೆ ಪ್ರಾಥಮಿಕ ಮಾಹಿತಿಯಿಲ್ಲ. ಮಾಹಿತಿ ಒದಗಿಸಬೇಕಾದ ನಿಯೋಗಿ ಸಂಸ್ಥೆಯೂ ಸಂಘಗಳಿಗೆ ಮಾರ್ಗದರ್ಶನ ಮಾಡುತ್ತಿಲ್ಲ.

೮.೨.೫. ಸರಕಾರದ ನೀತಿಧೋರಣೆ

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ಕರ್ನಾಟಕದ ದೃಷ್ಟಿಯಿಂದ ಒಂದು ಆಶಾದಾಯಕ ಮೊದಲ ಹೆಜ್ಜೆ. ಪಾಲುದಾರರ ಸಹಯೋಗದಲ್ಲಿ ಜಲಸಂರಕ್ಷಣೆ ಮತ್ತು ನಿರ್ವಹಣೆ ನೆರವೇರಬೇಕೆನ್ನುವುದು ಈ ಕಾರ್ಯಕ್ರಮದ ಉದ್ದೇಶ. ಫಲಾನುಭವಿಗಳು ಸ್ವಯಂ ಪ್ರೇರಿತವಾಗಿ ನೀ.ಬ.ಸ. ಸಂಘದ ಸದಸ್ಯತ್ವ ಪಡೆದುಕೊಂಡರೆ ಒತ್ತಾಯಕ್ಕೆ ಅವಕಾಶವಿಲ್ಲದೆ ರೈತ ಆಸಕ್ತಿಯಿಂದ ಪಾಲುಗೊಳ್ಳುತ್ತಾನೆ ಎನ್ನುವ ಕಾರಣಕ್ಕೆ ಸಂಘಗಳನ್ನು ಸಹಕಾರ ಕಾಯ್ದೆಯ ಅಡಿ ನೋಂದಾಯಿಸುವ ವ್ಯವಸ್ಥೆ ಕಲ್ಪಿಸಲಾಗಿದೆ. ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯಗಳ ಮಾದರಿಯನ್ನು ಇಲ್ಲಿ ಅನುಸರಿಸಲಾಗಿದೆ. ಈ ರಾಜ್ಯಗಳಲ್ಲಿ ಸರಕಾರೇತರ ಸಂಸ್ಥೆಗಳು ರೈತರ ಮನವೊಲಿಸಿ ಆನಂತರ ಸಹಕಾರ ತತ್ವದ ಅಡಿಯಲ್ಲಿ ಸಂಘಗಳ ಸದಸ್ಯತ್ವ ಮಾಡಿಸಲಾಗುತ್ತದೆ. ಕರ್ನಾಟಕದಲ್ಲಿ ಇಂತಹ ಮನವೊಲಿಕೆಯ ಯಾವುದೇ ಕಾರ್ಯಕ್ರಮವಿಲ್ಲದೇ ಇರುವುದರಿಂದ ಸಹಭಾಗಿತ್ವ ಕಾರ್ಯಕ್ರಮ ಯಶಸ್ವಿಯಾಗುತ್ತಿಲ್ಲ.

ಸಮುದಾಯ ಸ್ವತ್ತಿನ ನಿರ್ವಹಣೆಯು ಕೆಲವೇ ಪಾಲುದಾರರಿಂದ ಸಾಧ್ಯವಿಲ್ಲ. ಜಲಸಂಪತ್ತಿನ ಬಳಕೆಗೆ ಸಂಬಂಧಿಸಿದ ಎಲ್ಲ ಭಾಗೀದಾರರನ್ನು ಜವಾಬ್ದಾರರನ್ನಾಗಿಸಿದರೆ ಮಾತ್ರ ಅದು ಸಾಧ್ಯ. ಇಲ್ಲವಾದರೆ ನಿಸರ್ಗದತ್ತ ಸಂಪನ್ಮೂಲದ ಅಪಬಳಕೆಯಾಗುತ್ತದೆ. ಆದುದರಿಂದ ಪ್ರಸ್ತುತ ನೀರಾವರಿ ಕಾಯ್ದೆ ಮತ್ತು ನೀರು ಬಳಕೆದಾರರ ಸಹಕಾರ ಸಂಘಗಳ ರಚನೆಯಲ್ಲಿನ ಲೋಪಗಳೇ ಸಹಭಾಗಿತ್ವದ ಶತ್ರುವಾಗಿದೆ.

ಸಂಘಗಳನ್ನು ಆರ್ಥಿಕವಾಗಿ ಸದೃಢಗೊಳಿಸುವ ವ್ಯವಸ್ಥೆ ಇಲ್ಲದಿರುವುದು ಅವುಗಳ ಸಬಲೀಕರಣಕ್ಕೆ ತೊಡಕಾಗಿದೆ. ಪ್ರಸ್ತುತ ನೀಡುತ್ತಿರುವ ಹಣಕಾಸಿನ ನೆರವು ಸಾಕಾಗುತ್ತಿಲ್ಲ. ಸಂಘಗಳ ಸುಸ್ಥಿರ ಅಭಿವೃದ್ಧಿಗೆ ಹಾಗೂ ನಿರಂತರತೆಯನ್ನು ಕಾಯ್ದುಕೊಳ್ಳಲು ಸೂಚಿಸಿರುವ ವಿವಿಧ ಮೂಲಗಳು ಉತ್ತೇಜನಕಾರಿಯಲ್ಲ. ಕೃಷಿ ಯಂತ್ರಗಳನ್ನು ಬಾಡಿಗೆಗೆ ನೀಡುವ, ರಸಗೊಬ್ಬರ, ಬಿತ್ತನೆ ಬೀಜ ಮಾರಾಟ ಮಾಡಿ ಲಾಭ ಗಳಿಸಿ ಆರ್ಥಿಕವಾಗಿ ಬಲಿಷ್ಠವಾಗಲು ಸಾಧ್ಯವಿಲ್ಲ. ಈ ವ್ಯವಹಾರವನ್ನು ಕೈಗೊಳ್ಳಲು ಮೂಲ ಬಂಡವಾಳದ ಮಾರ್ಗವನ್ನು ಸರಕಾರ ಸೂಚಿಸಿಲ್ಲ.

ಸಂಘಗಳ ಸಶಕ್ತೀಕರಣಕ್ಕೆ ಸರಕಾರ ಹೊರಡಿಸಿರುವ ಅನೇಕ ಆದೇಶಗಳನ್ನು ಸಂಬಂಧಿಸಿದ ಇಲಾಖೆಗಳು ಕಟ್ಟುನಿಟ್ಟಾಗಿ ಪಾಲನೆ ಮಾಡದೇ ಇರುವುದು ಸಂಘಗಳ ಪ್ರಗತಿಗೆ ಅಡ್ಡಿಯಾಗಿದೆ. ಸರಕಾರ ತಾನು ಹಾಕಿಕೊಂಡ ಷರತ್ತುಗಳನ್ನು ಪೂರೈಸದೇ ಇರುವುದು ಸಂಘಗಳ ಅವನತಿಗೆ ಕಾರಣವಾಗಿದೆ. ಒಡಂಬಡಿಕೆ ಒಪ್ಪಂದದಂತೆ ಸಂಘದ ವ್ಯಾಪ್ತಿಯ ಕಾಲುವೆ, ರಸ್ತೆ, ತೂಬು ಇತ್ಯಾದಿಗಳನ್ನು ದುರಸ್ತಿಗೊಳಿಸಿ ನಂತರ ಅಧಿಕಾರ ಹಸ್ತಾಂತರ ಮಾಡಬೇಕು. ಆದರೆ ಜಲಸಂಪನ್ಮೂಲ ಇಲಾಖೆ ಸರಕಾರದಿಂದ ಹಣಕಾಸು ದೊರೆಯುತ್ತಿಲ್ಲ ಎನ್ನುವ ನೆಪದಲ್ಲಿ ಷರತ್ತನ್ನು ಪೂರೈಕೆ ಮಾಡಿಲ್ಲ. ಇದರಿಂದ ಸುಧಾರಣೆ ಕಾಣದ ವ್ಯವಸ್ಥೆಯಲ್ಲಿ ಬಳಕೆದಾರರು ನಂಬಿಕೆಯಿಟ್ಟಿಲ್ಲ.

ನೀರಾವರಿ ನಿರ್ವಹಣೆಯು ಹೊಣೆಗಾರಿಕ ಸಂಘಗಳಿಗೆ ವರ್ಗಾವಣೆಯಾಗಿದ್ದರೂ ಜಲಸಂಪನ್ಮೂಲ ಇಲಾಖೆಯ ಅಧಿಕಾರಿಗಳ ದ್ವಂದ್ವ ನಿಲುವುಗಳಿಂದ ಅದು ಕಾರ್ಯರೂಪಕ್ಕೆ ಬಂದಿಲ್ಲ. ತಮ್ಮ ಅಧಿಕಾರ, ನಿಯಂತ್ರಣ, ರುಷುವತ್ತುಗಳು ತಪ್ಪಿ ಹೋಗುತ್ತವೆ ಮತ್ತು ಸಂಘಗಳ ಅಧೀನದಲ್ಲಿ ಕಾರ್ಯ ನಿರ್ವಹಿಸಬೇಕೆನ್ನುವ ಮನೋಭಾವದಿಂದ ಸಹಭಾಗಿತ್ವ ಕಾರ್ಯಕ್ರಮ ಸ್ಥಗಿತ ಸ್ಥಿತಿಯಲ್ಲಿದೆ. ಈ ಬಗ್ಗೆ ಸರಕಾರಕ್ಕೆ ಅರಿವಿದ್ದರೂ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಅಂದರೆ ಜನಪ್ರತಿನಿಧಿಗಳಿಗೂ ಸಹಭಾಗಿತ್ವ ಲಾಭದಾಯಕವಲ್ಲ ಎನ್ನುವ ಆಲೋಚನೆಯಲ್ಲಿ ಇದ್ದಂತಿದೆ. ಇರುವ ನೀರಾವರಿ ಕಾಯ್ದೆಯನ್ನು ಸಮರ್ಪಕವಾಗಿ ಬಳಕೆ ಮಾಡಿ ಅನಧಿಕೃತ ಸಾಗುವಳಿ ಮತ್ತು ಅಕ್ರಮ ನೀರು ಎತ್ತುವಳಿಯನ್ನು ತಡೆಗಟ್ಟಲು ಸಾಧ್ಯವಿಲ್ಲದೇ ಇರುವುದು ಸರಕಾರದ ಮೃದು ಧೋರಣೆಯನ್ನು, ಓಟು ಬ್ಯಾಂಕ್ ರಾಜಕಾರಣವನ್ನು ಸೂಚಿಸುತ್ತದೆ.

ಪ್ರಸ್ತುತ ಸನ್ನಿವೇಶದಲ್ಲಿ ಜಾರಿಯಲ್ಲಿರುವ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ಟಾಪ್‌ಡೌನ್ ಮಾದರಿಯೇ ಆಗಿದೆ. ಏಕೆಂದರೆ ಪ್ರದೇಶ ವಿಶಿಷ್ಟತೆಗೆ ಅವಕಾಶ ನೀಡದೇ, ಬಳಕೆದಾರರನ್ನು ಯೋಜನೆಯ ರೂಪರೇಷೆಗಳಲ್ಲಿ ಬಳಕೆ ಮಾಡಿಕೊಳ್ಳದೇ ಏಕಮುಖವಾಗಿ ಈ ಕಾರ್ಯಕ್ರಮ ಅನುಷ್ಠಾನ ಗೊಂಡಿದೆ. ಜಾಗತಿಕವಾಗಿ ಕೆಲವು ದೇಶಗಳಲ್ಲಿ ಯಶಸ್ವಿಯಾಗಿರುವ ಯಥಾವತ್ತಾದ ಮಾದರಿಗಳನ್ನು ನಮ್ಮ ದೇಶದಲ್ಲಿ ಜಾರಿಗೊಳಿಸಿದರೆ ವೈಫಲ್ಯ ಕಟ್ಟಿಟ್ಟ ಬುತ್ತಿ ಎನ್ನುವ ಸತ್ಯ ಇಂತಹ ಸಹಭಾಗಿತ್ವ ಮಾದರಿಯಿಂದ ಗೊತ್ತಾಗುತ್ತದೆ.

## ಭಾಗ ೨

### ೮.೩. ಪ್ರಮುಖ ಶಿಫಾರಸ್ಸುಗಳು

ಅಧ್ಯಯನದ ತಥ್ಯಗಳ ಆಧಾರದ ಮೇಲೆ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮದ ಯಶಸ್ಸಿಗೆ ಅಗತ್ಯವಾದ ಕೆಲವು ಮುಖ್ಯ ಸಲಹೆ ಸೂಚನೆಯನ್ನು ಈ ಭಾಗದಲ್ಲಿ ನೀಡಲಾಗಿದೆ.

#### ೮.೩.೧. ಸಹಕಾರ ತತ್ವದ ನೈಜ ಅನುಷ್ಠಾನ

ಬಳಕೆದಾರರ ಸಹಭಾಗಿತ್ವದಲ್ಲಿ ನೀರಾವರಿ ನಿರ್ವಹಣೆಯನ್ನು ಕೈಗೊಳ್ಳುತ್ತಿರುವುದು ಅಭಿವೃದ್ಧಿಯ ಚಟುವಟಿಕೆಗಳನ್ನು ತಳಮಟ್ಟದವರಿಗೂ ವಿಕೇಂದ್ರೀಕರಿಸುತ್ತಿರುವ ಒಂದು ಪ್ರಕ್ರಿಯೆ. ಈ ಕಾರ್ಯಕ್ರಮವು ಸಹಕಾರ ತತ್ವ ಅಡಿಯಲ್ಲಿ ಕಾರ್ಯರೂಪಕ್ಕೆ ಬರುತ್ತಿದೆ. ಸಹಕಾರ ಎಂಬುದು ಕೇವಲ ಸದಸ್ಯರ ನಡುವೆ ಇದ್ದರೆ ಸಾಕಾಗುವುದಿಲ್ಲ. ಈ ಕಾರ್ಯಕ್ರಮದ ಭಾಗೀದಾರರಾದ ಫಲಾನುಭವಿಗಳು, ವಿವಿಧ ಇಲಾಖೆಗಳು, ನಿಯೋಗಿ ಸಂಸ್ಥೆ ಕಾಡಾ ಹಾಗೂ ಸರಕಾರಗಳ ನಡುವೆಯೂ ಸಹಕಾರ ತತ್ವ ಆಚರಣೆಗೆ ಬರುವಂತೆ

ಕಾರ್ಯಕ್ರಮ ರೂಪುಗೊಳ್ಳಬೇಕು. ಈ ಎಲ್ಲ ಪಾತ್ರಧಾರರೂ ಸೌಹಾರ್ದಯುತವಾಗಿ ಸಹಭಾಗಿತ್ವ ಮಾದರಿಯನ್ನು ಬೆಂಬಲಿಸಿದಾಗ ಅದು ಯಶಸ್ಸನ್ನು ಕಾಣಲು ಸಾಧ್ಯ. ಈ ಸಂಸ್ಥೆಗಳ ಆಂತರಿಕ ಆಡಳಿತದಲ್ಲೂ ಸಹಕಾರ ಮತ್ತು ಸಮನ್ವಯತೆಗೆ ಅಗತ್ಯವಾದ ನೀತಿ ಧೋರಣೆಗಳನ್ನು ಜಾರಿಗೊಳಿಸುವ ಅಗತ್ಯವಿದೆ. ಒಂದು ಇಲಾಖೆ ಮತ್ತೊಂದು ಇಲಾಖೆಯನ್ನು ಕೀಳಾಗಿ ಕಾಣುವ, ಸರಕಾರದ ಆದೇಶಗಳನ್ನು ನಿರ್ಲಕ್ಷಿಸುವ ಪ್ರವೃತ್ತಿಗೆ ಕಡಿವಾಣ ಹಾಕಬೇಕು.

ನೀ.ಬ.ಸ. ಸಂಘಗಳಿಗೆ ಅಧಿಕಾರ ಹಸ್ತಾಂತರ ಮಾಡುವ ವಿಷಯದಲ್ಲಿ ಕಾಡಾದ ಜಲಸಂಪನ್ಮೂಲ ಇಲಾಖೆಯ ಅಧಿಕಾರಿಗಳು ಅನಗತ್ಯ ಗೊಂದಲಗಳನ್ನು ಸೃಷ್ಟಿಸಿ ಸಂಘಗಳ ಚಟುವಟಿಕೆಗಳಿಗೆ ಅಡ್ಡಿಯಾಗುತ್ತಿರುವುದನ್ನು ಸರಕಾರ ತಪ್ಪಿಸಬೇಕು. ಕಂದಾಯ ಇಲಾಖೆ ನೀರುದರ ಸಂಗ್ರಹ ಮಾಡುತ್ತಿರುವುದನ್ನು ಕಡ್ಡಾಯವಾಗಿ ನಿಲ್ಲಿಸಲು ಸರಕಾರ ಕ್ರಮ ತೆಗೆದುಕೊಳ್ಳಬೇಕು. ಕಂದಾಯ ಇಲಾಖೆ ಮತ್ತು ವಿದ್ಯುತ್ ನಿಗಮಗಳು ಅನಧಿಕೃತ ಮತ್ತು ಅಕ್ರಮ ಪಂಪ್‌ಸೆಟ್‌ದಾರರಿಗೆ ಅಗತ್ಯವಾದ ಪರವಾನಿಗೆಗಳನ್ನು ನೀಡುವಾಗ ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಯ ನಿರಾಪೇಕ್ಷಣ ಪ್ರಮಾಣಪತ್ರ ಪಡೆಯುವಂತೆ ಕಡ್ಡಾಯ ನಿಯಮವನ್ನು ಜಾರಿಗೊಳಿಸಬೇಕು. ಈ ಎಲ್ಲ ಕಾರಣಗಳಿಂದಾಗಿ ಸಹಕಾರ ತತ್ವವನ್ನು ಎಲ್ಲ ಸಂಸ್ಥೆಗಳಿಗೂ ಅನ್ವಯಗೊಳಿಸಬೇಕು.

ಸಹಕಾರ ಸಂಘಗಳಲ್ಲಿ ಸದಸ್ಯತ್ವ ಪಡೆಯುವುದು ಐಚ್ಛಿಕವಾಗಿದ್ದರೂ ಪರೋಕ್ಷವಾಗಿ ಎಲ್ಲ ಬಳಕೆದಾರರನ್ನು ಸದಸ್ಯತ್ವ ಪಡೆದುಕೊಳ್ಳುವಂತೆ ಕ್ರಮಗಳನ್ನು ತೆಗೆದುಕೊಳ್ಳಬೇಕು. ರೈತರು ಇತರೆ ಹಣಕಾಸಿನ ಸಂಸ್ಥೆಗಳಿಂದ ಮತ್ತು ಸರಕಾರದಿಂದ ಪಡೆಯುವ ಸಾಲ ಅಥವಾ ಇತರೆ ಸೌಲಭ್ಯಗಳನ್ನು ಪಡೆಯುವಾಗ ನೀ.ಬ.ಸ. ಸಂಘಕ್ಕೆ ಸದಸ್ಯರಾಗಿರುವ ಕುರಿತು ಗುರುತು ಪತ್ರವನ್ನು ಹಾಜರಿಪಡಿಸುವಂತೆ ಆದೇಶ ಹೊರಡಿಸಬೇಕು.

ನೀರು ಬಳಕೆದಾರರು, ಸಂಬಂಧಿಸಿದ ಇಲಾಖಾ ಅಧಿಕಾರಿಗಳಿಗೆ ತಾಂತ್ರಿಕ ಸಂಗತಿಗಳೊಂದಿಗೆ ಸಹಕಾರ ತತ್ವದ ಕುರಿತು ತರಬೇತಿ ನೀಡಬೇಕು. ಇದಕ್ಕಾಗಿ ಒಂದು ಪ್ರತ್ಯೇಕ ಘಟಕವನ್ನು ಸ್ಥಾಪಿಸಿ ಈ ಘಟಕದಲ್ಲಿ ಸಹಕಾರ ಕ್ಷೇತ್ರದ ಪರಿಣಿತರು, ಸಮಾಜವಿಜ್ಞಾನಿಗಳು, ಮಾನವಶಾಸ್ತ್ರಜ್ಞರು, ಅಭಿವೃದ್ಧಿ ತಜ್ಞರನ್ನು ಬಳಕೆ ಮಾಡಿಕೊಳ್ಳಬೇಕು. ಈ ಸಹಕಾರ ಘಟಕವು ತಾಂತ್ರಿಕ ತಜ್ಞರನ್ನು ಒಳಗೊಂಡಂತೆ ಬಹುಶಿಸ್ತೀಯ ಪರಿಣಿತರ ಒಂದು ಕಾರ್ಯಪಡೆಯನ್ನು ಹೊಂದಿರಬೇಕು.

**೮.೩.೨. ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆ ಸಬಲೀಕರಣ**

ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮದ ನಿಯೋಗಿ ಸಂಸ್ಥೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರವನ್ನು ಯುವ ಸಿಬ್ಬಂದಿಯೊಂದಿಗೆ ಉನ್ನತೀಕರಿಸಬೇಕು. ನಿಯೋಜನೆಗೆ ಬದಲು

ಸಾಯಂ ಸಿಬ್ಬಂದಿಯನ್ನು ನೇಮಕ ಮಾಡಬೇಕು. ಅಗತ್ಯವಾದ ನೀರುಗಂಟಿಗಳನ್ನು ನೇಮಕ ಮಾಡಬೇಕು. ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣಕ್ಕೆ ಅನುಗುಣವಾಗಿ ನೀರಾವರಿ ಜಾಲವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳಲು ಅಗತ್ಯವಾದ ಹಣಕಾಸನ್ನು ಸರಕಾರ ತನ್ನ ಆಯವ್ಯಯದಲ್ಲಿಯೇ ಒದಗಿಸಬೇಕು. ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಯ ಅಧಿಕಾರಿ ವರ್ಗದ ನಡುವೆ ಸಮನ್ವಯತೆಗೆ ಅಗತ್ಯವಾದ ವಾತಾವರಣವನ್ನು ಕಲ್ಪಿಸಬೇಕು.

ಜಲಸಂಪನ್ಮೂಲ ಇಲಾಖೆ ಮತ್ತು ಕಾಡಾ ಜಂಟಿಯಾಗಿ ಕಾರ್ಯ ನಿರ್ವಹಿಸುವಾಗ ನೀ.ಬ.ಸ. ಸಂಘಗಳ ಹಿತಾಸಕ್ತಿಗೆ ಧಕ್ಕೆ ಬಾರದಂತೆ ನೋಡಿಕೊಳ್ಳಬೇಕು. ಸಂಘಗಳ ಆದ್ಯತೆಗಳನ್ನು ಪರಿಗಣಿಸುವಂತೆ ಕ್ರಮ ತೆಗೆದುಕೊಳ್ಳಬೇಕು. ಸರಕಾರದಿಂದ ದೊರೆಯುವ ಸೌಲಭ್ಯಗಳನ್ನು ಯಾವುದೇ ವಿಳಂಬ, ರುಷುವತ್ತುಗಳಿಗೆ ಅವಕಾಶವಾಗದಂತೆ ಸಂಘಗಳಿಗೆ ತಲುಪಿಸುವ ವ್ಯವಸ್ಥೆಯಾಗಬೇಕು. ಅಚ್ಚುಕಟ್ಟು ವ್ಯಾಪ್ತಿಯಲ್ಲಿನ ಅಕ್ರಮ ನೀರು ಬಳಕೆಯನ್ನು ತಡೆಗಟ್ಟಲು ಅಗತ್ಯವಾದ ರಕ್ಷಣಾ ವ್ಯವಸ್ಥೆಯನ್ನು ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಗೆ ಕಲ್ಪಿಸಿಕೊಡಬೇಕು.

### ೮.೩.೩. ಅಕ್ರಮ ಚಟುವಟಿಕೆಗಳಿಗೆ ಕಡಿವಾಣ

ಅಚ್ಚುಕಟ್ಟು ಪ್ರದೇಶದಲ್ಲಿ ಅಧಿಸೂಚಿತ ಸಾಗುವಳಿ ಭೂಮಿಗೆ ಮಾತ್ರ ನೀರು ಪೂರೈಸಲು ಸಾಧ್ಯ. ಮೇಲ್ಬುದಿಯ ರೈತರು ಅನಧಿಕೃತ ಸಾಗುವಳಿ ಮಾಡುವುದು. ಅಕ್ರಮವಾಗಿ ಕಾಲುವೆಯ ನೀರನ್ನು ಬಳಕೆ ಮಾಡುವುದನ್ನು ನಿರ್ದಾಕ್ಷಿಣ್ಯವಾಗಿ ನಿರ್ಬಂಧಿಸಬೇಕು. ಉಗ್ರಕ್ರಮಗಳನ್ನು ಕೈಗೊಂಡು ಅಪರಾಧಿಗಳಿಗೆ ದಂಡದೊಂದಿಗೆ ಶಿಕ್ಷೆಯನ್ನು ವಿಧಿಸಬೇಕು. ಕಾಲುವೆ ನೀರನ್ನು ಹೊರತುಪಡಿಸಿ ಇಂತಹ ರೈತರಿಗೆ ಪರ್ಯಾಯವಾಗಿ ಅಂತರ್ಜಲ ಬಳಕೆಗೆ ಅಗತ್ಯವಾದ ಸವಲತ್ತುಗಳನ್ನು, ಮೂಲ ಸೌಕರ್ಯಗಳನ್ನು ಒದಗಿಸಬೇಕು. ಈ ಕುರಿತು ಯಾವ ಮರ್ಜಿಗೂ ಒಳಗಾಗಬಾರದು.

ಅದೇ ರೀತಿಯಾಗಿ ಕಾಲುವೆ, ತೂಬು, ಆಯಕಟ್ಟಿನ ರಸ್ತೆಗಳ ಒತ್ತುವರಿ ಮತ್ತು ಹಾನಿಯುಂಟು ಮಾಡುವವರ ವಿರುದ್ಧ ಕಠಿಣ ಕ್ರಮ ಜರುಗಿಸಬೇಕು. ಮನವೊಲಿಕೆಯ ಕ್ರಮಗಳಿಂದ ಇಂತಹ ಚಟುವಟಿಕೆಗಳನ್ನು ನಿಗ್ರಹ ಮಾಡಲು ಸಾಧ್ಯವಿಲ್ಲ. ಕಾನೂನು ಕ್ರಮ ತೆಗೆದುಕೊಂಡಾಗ ಇತರರು ಮುಂದೆ ಇಂತಹ ಅಪರಾಧ ಮಾಡುವುದಿಲ್ಲ.

ಬೆಳೆಮಾದರಿ ಮತ್ತು ವಾರಾಬಂದಿ ಉಲ್ಲಂಘನೆ ಮಾಡುವವರಿಗೂ ಜುಲ್ಮಾನೆ ವಿಧಿಸಬೇಕು. ಸಂಯೋಜಿತ ನೀರು ಬಳಕೆ ಮಾಡುವಂತೆ ಒತ್ತಾಯದ ಕ್ರಮಗಳನ್ನು ಜಾರಿಗೊಳಿಸಬೇಕು.

**೮.೩.೪. ಅಂಚಿನಲ್ಲಿರುವವರನ್ನು ಮುಂಚೂಣಿಗೆ ತರುವುದು.**

ಶ್ರೇಣೀಕೃತ ಸಮಾಜದಲ್ಲಿನ ಅಸಮಾನತೆಗಳನ್ನು ತೊಡೆದು ಹಾಕಲು ಸರಕಾರ ಅಗತ್ಯ ಅಭಿವೃದ್ಧಿ ಕ್ರಮಗಳನ್ನು ಕೈಗೊಳ್ಳಬೇಕು. ಸಹಭಾಗಿತ್ವ ಕಾರ್ಯಕ್ರಮದಲ್ಲಿ ಭಾಗೀದಾರರೆಲ್ಲ ಸಮನಾಗಿ ಭಾಗವಹಿಸಲು ದುಸ್ಥಿತಿಯಲ್ಲಿರುವ ಪರಿಶಿಷ್ಟರು, ಮಹಿಳೆಯರು ಹಾಗೂ ಹಿಂದುಳಿದ ವರ್ಗಗಳ ಜೀವನವನ್ನು ಸುಸ್ಥಿತಿಗೆ ತರುವ ಕಾರ್ಯತಂತ್ರಗಳನ್ನು ರೂಪಿಸಿ ಜಾರಿಗೊಳಿಸಬೇಕು. ಈ ತಳವರ್ಗಗಳನ್ನು ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕವಾಗಿ ಸದೃಢಗೊಳಿಸುವ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸಬೇಕು.

ತಳಸಮುದಾಯಗಳು ಸಕ್ರಿಯವಾಗಿ ನೀ.ಬ.ಸ. ಸಂಘಗಳಲ್ಲಿ ಭಾಗವಹಿಸಲು ಅವಕಾಶಗಳನ್ನು ಸೃಷ್ಟಿಸಿ ಅವರ ಧಾರಣಶಕ್ತಿಯನ್ನು ಸಂವರ್ಧಿಸುವಂತೆ ಮಾಡಬೇಕು. ಮಹಿಳೆಯರ ಆಯ್ಕೆಗಳನ್ನು ವೃದ್ಧಿಸಿ ನೀ.ಬ.ಸ. ಸಂಘಗಳಲ್ಲಿ ಅವರು ತೊಡಗಿಕೊಳ್ಳುವಂತೆ ಮಾಡಬೇಕು. ತಾಂತ್ರಿಕ ಸಂಗತಿಗಳನ್ನು ಬದಿಗಿಟ್ಟು ಲಿಂಗ ಸಾಪೇಕ್ಷ ಸಹಭಾಗಿತ್ವ ಮಾದರಿಯನ್ನು ಕಾರ್ಯರೂಪಕ್ಕೆ ತರಬೇಕು.

ಭೂಸುಧಾರಣೆಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿ ಭೂಮಿ ಹಂಚಿಕೆಯಲ್ಲಿ ಸಮಾನತೆ ಸಾಧಿಸಬೇಕು. ಯಜಮಾನ ಮತ್ತು ಸೇವಕ ಎನ್ನುವ ಅಸಮಾನತೆಯನ್ನು ತೊಡೆದು ಹಾಕಬೇಕು. ಬಲಾಢ್ಯರ ಮಟ್ಟಕ್ಕೆ ದುರ್ಬಲರ ಬದುಕನ್ನು ಎತ್ತರಿಸುವ ಅಭಿವೃದ್ಧಿ ತಂತ್ರಗಳನ್ನು ಕಾರ್ಯಗತಗೊಳಿಸಬೇಕು.

ದುಸ್ಥಿತಿಯಲ್ಲಿರುವವರ ಭಾಗವಹಿಸುವಿಕೆ ಮಟ್ಟವನ್ನು ಹೆಚ್ಚಿಸಲು ಅವರಿಗೆ ವಿಶೇಷ ತರಬೇತಿ, ಜಾಗೃತಿಶಿಬಿರಗಳನ್ನು ಹಮ್ಮಿಕೊಂಡು ಅವರ ಸಾಮರ್ಥ್ಯಗಳನ್ನು ಮನವರಿಕೆ ಮಾಡಿಕೊಡಬೇಕು. ಪರಿಶಿಷ್ಟರು, ಮಹಿಳೆಯರು ಹಾಗೂ ಹಿಂದುಳಿದ ವರ್ಗದ ನೀ.ಬ.ಸ. ಸಂಘಗಳ ಪದಾಧಿಕಾರಿಗಳಿಗೆ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸಲು ಉತ್ತಮ ಗುಣಮಟ್ಟದ ತರಬೇತಿಗಳನ್ನು ನೀಡಬೇಕು.

**೮.೩.೫. ಸಂಘಗಳ ಆರ್ಥಿಕ ಸಬಲೀಕರಣ ಮತ್ತು ಸುಸ್ಥಿರತೆ**

ನೀರು ಬಳಕೆದಾರರ ಸಹಕಾರ ಸಂಘಗಳಿಗೆ ಅಗತ್ಯವಾದ ಹಣಕಾಸನ್ನು ಸರಕಾರ ಒದಗಿಸಬೇಕು. ಸಂಘಗಳು ಆರ್ಥಿಕ ಸ್ವಾವಲಂಬನೆ ಹೊಂದುವ ತನಕ ಅವಶ್ಯಕವಾದ ಧನಸಹಾಯವನ್ನು ನೀಡಬೇಕು. ಹಣಕಾಸಿನ ಮೂಲಗಳನ್ನು ಸಂಘಗಳೇ ಹೊಂದಿಸಿಕೊಳ್ಳಲು ಇರುವ ಮಾರ್ಗಗಳ ಜೊತೆಗೆ ಇನ್ನಷ್ಟು ಅವಕಾಶಗಳನ್ನು ಕಲ್ಪಿಸಬೇಕು. ತಮ್ಮ ಸಂಘದ ವ್ಯಾಪ್ತಿಯ ಕೆರೆಗಳಲ್ಲಿ ಮೀನು ಸಾಕಾಣೆ ಮಾಡಲು ಅಗತ್ಯ ನೆರವು ನೀಡಿ ಬಂದ ವರಮಾನವನ್ನು ಸಂಘದ ಅಭಿವೃದ್ಧಿಗೆ ಬಳಕೆ ಮಾಡುವಂತೆ ಅಗತ್ಯ ಅನುಮತಿಯನ್ನು, ಮೀನುಗಾರಿಕೆ ಇಲಾಖೆಯ ಸಹಕಾರವನ್ನು ಒದಗಿಸಬೇಕು. ಕೆರೆ ಕಾಲುವೆಗಳ ಹೂಳು ತೆಗೆದು ಮಾರಾಟ ಮಾಡಿ ಬರುವ ಲಾಭವನ್ನು ಸಂಘದ ಏಳಿಗೆಗೆ ಬಳಕೆ ಮಾಡುವ ಅವಕಾಶ ನೀಡಬೇಕು.

ಸರಕಾರದಿಂದ ಸಂಘಗಳಿಗೆ ದೊರೆಯುವ ಹಣಕಾಸಿನ ಮತ್ತು ಇತರೆ ಸವಲತ್ತುಗಳನ್ನು ಮಧ್ಯವರ್ತಿ ಸಂಸ್ಥೆಗಳ ಮೂಲಕ ಒದಗಿಸದೇ ಸಂಘಗಳಿಗೆ ನೇರವಾಗಿ ತಲುಪುವಂತೆ ವ್ಯವಸ್ಥೆ ಮಾಡಬೇಕು. ಇದರಿಂದ ವಿಳಂಬ ಮತ್ತು ಭ್ರಷ್ಟಾಚಾರವನ್ನು ತಡೆಗಟ್ಟಬಹುದು.

ಉತ್ತಮವಾಗಿ ಕಾರ್ಯಸಾಧನೆ ಮಾಡಿರುವ ನೀ.ಬ.ಸ. ಸಂಘಗಳಿಗೆ ವಿಶೇಷ ಪ್ರೋತ್ಸಾಹಗಳನ್ನು ನೀಡಬೇಕು. ಅತ್ಯಂತ ಹಿಂದುಳಿದ ಸಂಘಗಳ ಸಶಕ್ತೀಕರಣಕ್ಕೆ ಹೊಸ ಕಾರ್ಯತಂತ್ರಗಳನ್ನು ರೂಪಿಸಿ ಅನುಷ್ಠಾನಗೊಳಿಸಬೇಕು. ಸಂಘಗಳು ಪ್ರಗತಿಯಲ್ಲಿ ಒಂದು ಹಂತ ತಲುಪಿದ ನಂತರ ಅವುಗಳ ನಿರಂತರತೆಯನ್ನು ಕಾಯ್ದುಕೊಳ್ಳಲು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಸಂಘಗಳ ಉತ್ತರದಾಯಿತ್ವ ಮತ್ತು ಪಾರದರ್ಶಕತೆಯನ್ನು ಹೆಚ್ಚಿಸಲು, ಆಡಳಿತಾತ್ಮಕ ಕಾರ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಅಗತ್ಯವಾದ ಕಾರ್ಯದರ್ಶಿಗಳನ್ನು ಸರಕಾರವೇ ನೇಮಕ ಮಾಡಬೇಕು.

ಬಳಕೆದಾರರಲ್ಲಿರುವ ಹಳೆಯ, ಜಿಡ್ಡುಗಟ್ಟಿದ ಪೂರ್ವಗ್ರಹ ಸಂಗತಿಗಳನ್ನು ತೊಲಗಿಸಲು, ಫಲಾನುಭವಿಗಳನ್ನು ಹೊಸ ಆಲೋಚನೆಗಳತ್ತ ಆಕರ್ಷಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕು.

ಸಂಘಗಳು ಯಾವ ಹಂತದಲ್ಲಿ ಬಿಕ್ಕಟ್ಟುಗಳನ್ನು ಎದುರಿಸುತ್ತಿವೆ ಎಂಬುದನ್ನು ಸರಕಾರ ಮತ್ತು ಸಂಬಂಧಿಸಿದ ಇಲಾಖೆಗಳು ಕಂಡುಕೊಳ್ಳಬೇಕು. ಅಂತೆಯೇ ಅಂತಹ ಬಿಕ್ಕಟ್ಟುಗಳಿಗೆ ತಕ್ಷಣ ನಿವಾರಣೋಪಾಯಗಳನ್ನು ಸೂಚಿಸಿ ಸಂಘಗಳ ಏಳ್ಗೆಗೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕು. ಸರಕಾರ ಆಗಿಂದಾಗ್ಗೆ ಸಂಘಗಳ ಸ್ಥಿತಿಗತಿಗಳ ಬಗ್ಗೆ ಸಮೀಕ್ಷೆ ನಡೆಸಿ ಅವುಗಳ ಕೊರತೆ ಮತ್ತು ಬೇಡಿಕೆಗಳನ್ನು ಈಡೇರಿಸಬೇಕು.

ಅಚ್ಚುಕಟ್ಟು ಪ್ರದೇಶದ ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿಗಳು ಸಂಘಗಳ ನೀರಾವರಿ ನಿರ್ವಹಣೆಯ ಸಮಸ್ಯೆಗಳ ಕುರಿತು ಚರ್ಚಿಸಿ ತಮ್ಮ ಸಂಪನ್ಮೂಲಗಳ ಒಂದು ಭಾಗವನ್ನು ಸಂಘಗಳ ಶ್ರೇಯೋಭಿವೃದ್ಧಿಗೆ ನೀಡಬೇಕು. ಈ ಸಂಸ್ಥೆಗಳಲ್ಲಿರುವ ಎಲ್ಲ ಜನಪ್ರತಿನಿಧಿಗಳು ಸಂಘಗಳ ಸಬಲೀಕರಣಕ್ಕಾಗಿ ಸರಕಾರದೊಂದಿಗೆ ಮತ್ತು ಸಂಬಂಧಿಸಿದ ಇಲಾಖೆಗಳೊಂದಿಗೆ ವ್ಯವಹರಿಸಿ ಅಗತ್ಯ ಸಹಾಯ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕು.

**೬.೩.೬. ಕಾಯಿದೆ ಮತ್ತು ಶಾಸನಗಳ ಮಾರ್ಪಾಡು**

ಸಂಘಗಳ ಸದಸ್ಯತ್ವವನ್ನು ಐಚ್ಛಿಕಗೊಳಿಸದೇ ಕಡ್ಡಾಯ ಸದಸ್ಯತ್ವ ಪಡೆಯುವಂತೆ ಮಾಡಲು ಪ್ರತ್ಯೇಕ ನೀರಾವರಿ ಕಾಯಿದೆಯನ್ನು ಜಾರಿಗೊಳಿಸಬೇಕು.

ನೀರಾವರಿ ಸಲಹಾ ಸಮಿತಿಯಲ್ಲಿ ನೀ.ಬ.ಸ. ಸಂಘಗಳ ಪದಾಧಿಕಾರಿಗಳಿಗೂ ಅವಕಾಶ ಕಲ್ಪಿಸುವಂತೆ ಕಾಡಾ ಕಾಯ್ದೆಗೆ ತಿದ್ದುಪಡಿ ಮಾಡಬೇಕು.

ಮಹಿಳೆಯರು ಸಂಘಗಳಲ್ಲಿ ಸದಸ್ಯತ್ವ ಪಡೆಯಲು ಭೂಮಾಲೀಕತ್ವ ಹೊಂದಿರಲೇಬೇಕೆಂಬ ನಿಯಮವನ್ನು ಸಡಿಲಿಸಬೇಕು. ಪತಿಯ ಹೆಸರಿನಲ್ಲಿ ಜಮೀನು ಇದ್ದರೆ ಮಹಿಳೆ ಸದಸ್ಯತ್ವ ಪಡೆಯಲು ಅರ್ಹಳು ಎನ್ನುವ ನಿಯಮವನ್ನು ಜಾರಿಗೊಳಿಸಬೇಕು.

ಅಚ್ಚುಕಟ್ಟು ಪ್ರದೇಶದಲ್ಲಿ ಆಧುನಿಕ ಜಲಮಾಪಕಗಳನ್ನು ಅಳವಡಿಸಿ, ನೀರಿನ ಮಿತ ಬಳಕೆಗೆ ಉತ್ತೇಜನ ನೀಡಬೇಕು. ಬಳಕೆ ಮಾಡಿದ ನೀರಿನ ಪ್ರಮಾಣಕ್ಕೆ ಅನುಗುಣವಾಗಿ ಪ್ರಗತಿಪರ ನೀರು ದರ ನಿಗದಿಗೊಳಿಸಬೇಕು.

ಉಪಗ್ರಹ ಆಧಾರಿತ ಸ್ವಯಂಚಾಲಿತ ತೂಬುಗಳನ್ನು ಅಳವಡಿಸಿ ಆ ಮೂಲಕ ವಾರಾಬಂದಿಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕು.

ಒಟ್ಟಾರೆ ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮ ಪ್ರದೇಶ ವಿಶಿಷ್ಟವಾಗಿದ್ದರೆ ಉತ್ತಮ. ಜೊತೆಗೆ ಅದು ಲಿಂಗಸ್ಪಂದಿಯಾಗಿರಬೇಕು. ಕೆಳವರ್ಗದವರ ಹಿತಾಸಕ್ತಿಗೆ ದಕ್ಕೆ ಬರದಂತೆ, ಮೇಲ್ವರ್ಗದವರ ಯಜಮಾನಿಕೆಗೆ ಅವಕಾಶ ನೀಡದಂತಿರಬೇಕು. ಉತ್ತಮ ನಾಯಕತ್ವದ, ದಕ್ಷ ಆಡಳಿತಗಾರರ ಅನುಭವ ಗಳಿಂದ ಹೊಸಹಳ್ಳಿ ನೀ.ಬ.ಸ. ಸಂಘದ ಮಾದರಿಯನ್ನು ಉಳಿದ ಸಂಘಗಳಿಗೂ ಅನ್ವಯಿಸಿದರೆ ಆರ್ಥಿಕವಾಗಿ ಉತ್ತಮ ಸ್ಥಿತಿ ಕಾಣುವ ಸಾಧ್ಯತೆಯಿದೆ.

## ೮.೪. ಅಧ್ಯಯನದ ಹೊಸ ಸಾಧ್ಯತೆಗಳು

ಇಲ್ಲಿ ಚರ್ಚಿಸಲಾದ ಅಧ್ಯಯನದ ಫಲಿತಗಳು ಮತ್ತೆ ಅನೇಕ ಪ್ರಶ್ನೆಗಳನ್ನು ಹುಟ್ಟು ಹಾಕಿದೆ. ಸಹಭಾಗಿತ್ವ ಪರಿಕಲ್ಪನೆ ಜೊತೆ ಲಗತ್ತಿಸಲಾದ ಜನಪ್ರಿಯ ಸತ್ಯಗಳನ್ನು ಹೊಡೆದು ನೋಡಲು ಸಾಧ್ಯವಾಗಿದೆ. ಬಹುಶಃ ಇದುವೇ ಈ ಅಧ್ಯಯನದ ಶಕ್ತತೆ. ಪ್ರಸ್ತುತ ಅಧ್ಯಯನವು ಹೊಸ ಸಂಶೋಧನಕಾರರಿಗೆ ಒಂದು ಸಣ್ಣ ಅಣತೆಯಂತೆ ಬೆಳಕು ತೋರುತ್ತದೆ. ನೀರಾವರಿ ಎಂಬ ವಿಷಯವು ಅನೇಕ ಸಂಗತಿಗಳ ಒಂದು ಸಂಯುಕ್ತ ಘಟಕವಾಗಿರುವುದರಿಂದ ಅಧ್ಯಯನಕಾರರಿಗೆ ಕೊನೆ ಎಂಬುದು ಇರುವುದಿಲ್ಲ. ನೀರಾವರಿ ನಿರ್ವಹಣೆಯ ಕುರಿತು ಅದರ ವಿವಿಧ ಮಗ್ಗಲುಗಳನ್ನು ಶೋಧಿಸಲು ಅಧ್ಯಯನಕಾರರಿಗೆ ಅವಕಾಶವಿದೆ. ಪ್ರಸ್ತುತ ಇರುವ ಅಧ್ಯಯನ ವಿಧಾನಗಳ ಮಿತಿಗಳನ್ನು ಮೀರಿ ಹೊಸ ವಿಧಾನಗಳನ್ನು ಕಟ್ಟಿಕೊಂಡು ಅಧ್ಯಯನಕಾರರು ನವೀನ ಫಲಿತಗಳನ್ನು ಕಂಡುಕೊಳ್ಳಬೇಕಿದೆ. ಈ ಹಿನ್ನೆಲೆಯಲ್ಲಿ ನೈಸರ್ಗಿಕ ಸಂಪನ್ಮೂಲ ವಾದ ಜಲದ ಕುರಿತು ಹೊಸ ಸಂಶೋಧನೆಗಳನ್ನು ಕೈಗೊಳ್ಳಲು ವಿಪುಲ ಅವಕಾಶಗಳಿವೆ. ಆ ಮೂಲಕ

ಕೊರತೆಯಲ್ಲಿರುವ ಅಮೂಲ್ಯ ಜಲಸಂಪತ್ತಿನ ಸಂರಕ್ಷಣೆ ಮತ್ತು ನಿರ್ವಹಣೆಗೆ ನೆರವಾಗುವ ಅಗತ್ಯವಿದೆ. ಹೀಗೆ ಕಂಡುಕೊಂಡ ಅಧ್ಯಯನದ ಹೊಸ ಸಾಧ್ಯತೆಗಳನ್ನು ಈ ಕೆಳಗಿನಂತೆ ನೋಡಬಹುದು.

೧. ಅಭಿವೃದ್ಧಿ ಅಧ್ಯಯನದ ತಾತ್ವಿಕ ಸಿದ್ಧಾಂತಗಳನ್ನೇ ಅತ್ಯಂತಿಕ ಸತ್ಯ ಎಂದುಕೊಂಡು ಸಹಭಾಗಿತ್ವ ನೀರಾವರಿಯನ್ನು ಅಧ್ಯಯನ ಮಾಡುವಲ್ಲಿ ಬಹಳ ದೊಡ್ಡ ಮಿತಿಯಿದೆ. ಹೆಚ್ಚೆಂದರೆ ಸಹಭಾಗಿತ್ವ ನೀರಾವರಿಯನ್ನು ಅಂಕಿ-ಅಂಶಗಳ ಕನ್ನಡಿಯಲ್ಲಿ ಪ್ರತಿಬಿಂಬಿಸಬಹುದು. ಆಗ ಈ ವಿಷಯವನ್ನು ಪ್ರವೇಶಿಸುವ ಹಲವು ಸಾಧ್ಯತೆಗಳ ಬಾಗಿಲುಗಳು ಮುಚ್ಚಿಕೊಳ್ಳುತ್ತವೆ. ಈ ಮಿತಿ ಪ್ರಸ್ತುತ ಸಂಶೋಧನಾ ಮಹಾಪ್ರಬಂಧಕ್ಕೂ ಇದೆ. ಹಾಗಾಗಿ ಅಭಿವೃದ್ಧಿ ಅಧ್ಯಯನ ವಿಧಾನದ ಸಂಶೋಧನಾ ವಿನ್ಯಾಸಗಳನ್ನೇ ಆಮೂಲಾಗ್ರವಾಗಿ ಹೊಸ ಬಗೆಯ ನಿರ್ವಚನಕ್ಕೆ ಒಳಪಡಿಸಿಕೊಂಡು ಸಂಶೋಧನೆಗೆ ತೊಡಗಬೇಕಿದೆ. ಈ ಅಗತ್ಯವನ್ನು ಅಧ್ಯಯನದ ಹೊಸ ಸಾಧ್ಯತೆಯಾಗಿ ಮುಂದಿನ ಅಧ್ಯಯನಗಳು ಪರಿಭಾವಿಸಬೇಕಿದೆ. ಬಹುಶಿಸ್ತೀಯ ನೆಲೆಯಲ್ಲಿ ಸಹಭಾಗಿತ್ವ ನೀರಾವರಿಯನ್ನು ನೋಡಲು ಸಾಧ್ಯವಾಗಬೇಕು. ನೀರಾವರಿಯಲ್ಲಿ ಪಾಲ್ಗೊಳ್ಳುವ ಕೃಷಿಕ ಮಹಿಳೆ ಇದರಿಂದ ಬಿಡುಗಡೆಯನ್ನೊ, ಹೊಸ ಶೋಷಣಾ ವಿಧಾನಗಳನ್ನು, ಹೊಸ ಬಂಧನಗಳನ್ನು ಪಡೆದಿದ್ದಾಳೆಯೇ ಎಂಬುದನ್ನು ಶೋಧಿಸುವಂತಾಗಬೇಕು. ಸಹಭಾಗಿತ್ವ ನೀರಾವರಿಯೇ ಹೊಸ ಬಗೆಯ ಶ್ರೇಣೀಕರಣವನ್ನು ಹುಟ್ಟುಹಾಕಿ ಉಳ್ಳವ-ಇಲ್ಲದವರ ನಡುವೆ ಎಂತಹ ಕಂದಕಗಳನ್ನು ಸೃಷ್ಟಿಸಿದೆ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಸರ್ಕಾರಿ ಅಧಿಕಾರಿಯ ಕಣ್ಣಲ್ಲಿ ಕಾಣುವ ಸಹಭಾಗಿತ್ವ ಕಲ್ಪನೆ ಹೇಗಿದೆ ಎಂಬುದನ್ನು ಒರೆಗೆ ಹಚ್ಚಬೇಕಿದೆ. ನೀರಾವರಿಯನ್ನೇ ಆಧರಿಸಿ ಸಮುದಾಯದಲ್ಲಿ ಹುಟ್ಟಿಕೊಂಡ, ಆಚರಿಸಲ್ಪಡುವ ಹೊಸ ಬಗೆಯ ಆಚರಣೆ, ಸಂಪ್ರದಾಯ ಮೊದಲಾದ ಜನಪದ ಅಭಿವ್ಯಕ್ತಿಗಳನ್ನು ಗ್ರಹಿಸಬೇಕಿದೆ. ಹೀಗೆ ಅಭಿವೃದ್ಧಿ ಅಧ್ಯಯನ ಏಕಶಿಸ್ತೀಯ ನೆಲೆಯಲ್ಲಿ ನಡೆಯುವ ಬದಲು ಬಹುಶಿಸ್ತೀಯ ನೆಲೆಯಲ್ಲಿ ನಡೆಯುವ ಅಗತ್ಯವಿದೆ. ಸಹಭಾಗಿತ್ವ ನೀರಾವರಿ ನಿರ್ವಹಣೆ ಕಾರ್ಯಕ್ರಮದ ವಿವಿಧ ಮುಖಗಳನ್ನು ತಾಂತ್ರಿಕವಾಗಿ ನೋಡದೇ ಮಾನವೀಯ ಸಂಗತಿಗಳನ್ನು ಮುಂದಿನ ಅಧ್ಯಯನಗಳು ಪರಿಗಣಿಸಿದರೆ ಉತ್ತಮ.

೨. ಸಹಭಾಗಿತ್ವ ಮಾದರಿಯಲ್ಲಿ ಫಲಾನುಭವಿಗಳ ನಡುವೆ ಸಹಕಾರ ತತ್ವ ಅನುಷ್ಠಾನಗೊಳ್ಳಲು ಉಂಟಾಗಿರುವ ತೊಡಕುಗಳನ್ನು ಪರಿಶೀಲಿಸಲು ಹೊಸ ಅಧ್ಯಯನಗಳು ನಡೆಯಬೇಕಿದೆ. ಸಹಕಾರ ಎಂಬುದು ಕೇವಲ ಬಳಕೆದಾರರಲ್ಲಿ ಮಾತ್ರವಲ್ಲದೆ ನಿಯೋಗಿ ಸಂಸ್ಥೆ, ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳ ನಡುವೆಯೂ ಇರಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಸಹಕಾರ ಮತ್ತು ಸೌಹಾರ್ದಕ್ಕೆ ತೊಡಕಾಗುವ ಸಂಗತಿಗಳನ್ನು ಪರಿಶೋಧಿಸಲು ಹೊಸ ಅಧ್ಯಯನಗಳು ಬೇಕಾಗಿವೆ. ಉಳ್ಳವರು ಮತ್ತು ಇಲ್ಲದವರ ನಡುವಿನ ಅಸಹಕಾರ, ಜಡತೆ, ಅಸಮಾನತೆ, ಶ್ರೇಣೀಕರಣ ಇತ್ಯಾದಿಗಳು ಮಾನವನ

ವರ್ತನೆಗಳನ್ನು ಹೇಗೆ ನಿಯಂತ್ರಿಸುತ್ತವೆ ಎನ್ನುವುದನ್ನು ಕುರಿತು ಮನಃಶಾಸ್ತ್ರೀಯ ಅಧ್ಯಯನಗಳು ಈ ಕ್ಷೇತ್ರದಲ್ಲಿ ಅಗತ್ಯವೆನಿಸುತ್ತದೆ.

೩. ನೀರು ಬಳಕೆದಾರರ ಸಹಕಾರ ಸಂಘಗಳಿಗೆ ಕಾರ್ಯದರ್ಶಿಗಳನ್ನು ನೇಮಕ ಮಾಡಿದರೆ ಸರ್ಕಾರ ಮತ್ತು ಸಂಘಗಳ ನಡುವೆ ಸಂಪರ್ಕ ಸೇತುವೆ ನಿರ್ಮಿಸಬಹುದು. ಇದರ ಸೂಕ್ಷ್ಮ ವಿವರಗಳ ಬಗ್ಗೆ ರೈತರೊಂದಿಗೆ ಸಂಬಂಧಿಸಿದ ಇಲಾಖೆಗಳೊಂದಿಗೆ ಮುಖಾಮುಖಿ ಮಾಡಿ ಎಲ್ಲರ ಅಭಿಪ್ರಾಯಗಳನ್ನು ಚರ್ಚಿಸಿ ಒಂದು ಪರ್ಯಾಯ ಹೊಸ ವ್ಯವಸ್ಥೆಯನ್ನು ನಿರ್ಮಿಸುವ ಬಗ್ಗೆ ಅಧ್ಯಯನಗಳು ನಡೆಯಬೇಕಿದೆ. ಕಾರ್ಯದರ್ಶಿಗಳು ಕಾಡಾ ಮತ್ತು ಜಲಸಂಪನ್ಮೂಲ ಇಲಾಖೆಯೊಂದಿಗೆ ನೇರ ಸಂಬಂಧ ಹೊಂದಿದ್ದರೆ ನೀ.ಬ.ಸ. ಸಂಘಗಳ ಕಾರ್ಯನಿರ್ವಹಣೆ ಉತ್ತಮಗೊಳ್ಳುತ್ತವೆಯೇ? ಎನ್ನುವ ಕುರಿತು ಕ್ರಿಯಾ ಸಂಶೋಧನೆಗಳು ನಡೆಯಬೇಕು.

೪. ನೀ.ಬ.ಸ. ಸಂಘಗಳನ್ನು ಆರ್ಥಿಕವಾಗಿ ಬಲಿಷ್ಠಗೊಳಿಸಲು ಅಗತ್ಯವಾದ ಹೊಸ ಮಾರ್ಗಗಳನ್ನು ಕಂಡುಕೊಳ್ಳುವತ್ತ ಮುಂದಿನ ಸಂಶೋಧನೆಗಳು ಸಾಗಬೇಕಿದೆ. ಹಣಕಾಸಿನ ಸ್ವಾವಲಂಬನೆಗೆ ಅಗತ್ಯವಾದ ಮೂಲಗಳನ್ನು ಅನ್ವೇಷಿಸಲು ಸರ್ಕಾರದ ಮೂಲಕ ಸಂಘಗಳನ್ನು ಸಶಕ್ತಗೊಳಿಸುವ ವಿಧಾನಗಳ ಬಗ್ಗೆ ಮುಂದಿನ ಅಧ್ಯಯನಗಳು ಬೆಳಕು ಚೆಲ್ಲಬೇಕು.

೫. ಅಚ್ಚುಕಟ್ಟು ಪ್ರದೇಶದಲ್ಲಿ ಅಧಿಸೂಚಿತ ಸಾಗುವಳಿ ಭೂಮಿಯ ಒಡೆತನಕ್ಕೆ ಸಂಬಂಧಿಸಿದ ದಾಖಲೆಗಳನ್ನು ಸಮರ್ಪಕವಾಗಿಟ್ಟು ಅವುಗಳನ್ನು ಕಾಲಕಾಲಕ್ಕೆ ಪರಿಷ್ಕರಿಸಿ ನೀ.ಬ.ಸ. ಸಂಘಗಳಿಗೆ ಒದಗಿಸಬೇಕು. ಆ ಮೂಲಕ ಅನಧಿಕೃತ ಸಾಗುವಳಿ ಜಮೀನನ್ನು ಗುರುತಿಸಿ ಅಕ್ರಮ ನೀರು ಬಳಕೆಯನ್ನು ತಡೆಗಟ್ಟಲು ಇರುವ ಅಡ್ಡಿ-ಆತಂಕಗಳನ್ನು ಭವಿಷ್ಯದ ಅಧ್ಯಯನಗಳು ಪತ್ತೆ ಹಚ್ಚಬೇಕು. ಅಕ್ರಮ ನೀರು ಎತ್ತುವಳಿ ಚಟುವಟಿಕೆಗಳಿಗೆ ಬೆಂಬಲ ನೀಡುವವರು ಯಾರು? ಈ ಚಟುವಟಿಕೆಗಳನ್ನು ನಿಗ್ರಹಿಸುವಲ್ಲಿ ಕಂಡುಬರುವ ಕಾನೂನುಗಳ ತೊಡಕುಗಳೇನು? ಇದರಲ್ಲಿ ಸರ್ಕಾರದ ವಿವಿಧ ಇಲಾಖೆಗಳ ಪಾತ್ರವೇನು? ಅಧಿಕಾರಶಾಹಿ ಮತ್ತು ಜನಪ್ರತಿನಿಧಿಗಳ ನಿಲುವುಗಳೇನು? ಎಂಬುದನ್ನು ಕಂಡುಕೊಂಡು ಸೂಕ್ತ ಪರಿಹಾರ ಮಾರ್ಗಗಳನ್ನು ನೀಡುವ ಅಧ್ಯಯನಗಳ ಅವಶ್ಯಕತೆ ಇದೆ.

೬. ನೀರು ಬಳಕೆದಾರರು ಕೇವಲ ಕಾಲುವೆಯ ನೀರನ್ನು ಮಾತ್ರ ಅವಲಂಬಿಸದೆ ಇತರೆ ಮೂಲಗಳಾದ ಮಳೆನೀರು, ಅಂತರ್ಜಲ, ಕೆರೆ, ಬಾವಿ, ಬಸಿನೀರು ಇತ್ಯಾದಿಗಳನ್ನು ಸಂಯೋಜಿತವಾಗಿ ಉಪಯೋಗಿಸುವ ಕುರಿತು ಅವರ ಸಾಧಕ-ಬಾಧಕಗಳನ್ನು ಮುಂದಿನ ಅಧ್ಯಯನಕಾರರು ಶೋಧನೆ ಮಾಡಬೇಕಿದೆ. ಈ ಬಗ್ಗೆ ಕೃಷಿ ವಿಶ್ವವಿದ್ಯಾಲಯಗಳು, ರೈತ ಸಂಘಟನೆಗಳು, ಸರ್ಕಾರ, ಸಂಬಂಧಿಸಿದ ಇಲಾಖೆಗಳು ಯಾವ ರೀತಿಯ ಕಾರ್ಯತಂತ್ರಗಳನ್ನು ರೂಪಿಸಬೇಕು ಎನ್ನುವ ಬಗ್ಗೆ ಹೊಸ ಅಧ್ಯಯನಗಳು ಮುನ್ನೋಟಗಳನ್ನು ಒದಗಿಸಬೇಕು.

೭. ಕಾಲುವೆ ನೀರಿನ ಹಂಚಿಕೆಯನ್ನು ಖಾಸಗಿ ಸಂಸ್ಥೆಗಳಿಗೆ ವಹಿಸಿಕೊಡುವ ಮೂಲಕ ಆಧುನಿಕ ಜಲಮಾಪನಗಳನ್ನು ಅಳವಡಿಸಿ ನೀರಿನ ಬಳಕೆಯ ಆಧಾರದ ಮೇಲೆ ನೀರುದರ ಸಂಗ್ರಹ ಮಾಡುವುದರಿಂದ ನೀರಿನ ಮಿತವ್ಯಯ ಹಾಗೂ ಹಣಕಾಸಿನ ಸಂಚಯನದಲ್ಲಿ ಕಂಡುಬರುವ ಪ್ರಗತಿಯನ್ನು ಹೊಸ ಅಧ್ಯಯನಕಾರರು ಕಂಡುಕೊಳ್ಳಬೇಕಿದೆ. ಒಂದು ಸೀಮಿತ ಪ್ರದೇಶದಲ್ಲಿ ಪ್ರಾಯೋಗಿಕ ಕ್ರಿಯಾ ಯೋಜನೆಗಳನ್ನು ಕೈಗೊಂಡು ಬಂದ ಫಲಿತಗಳ ಆಧಾರದ ಮೇಲೆ ಸಾರ್ವತ್ರಿಕ ಕಾರ್ಯತಂತ್ರಗಳನ್ನು ರೂಪಿಸುವ ಕುರಿತು ಅಧ್ಯಯನಗಳು ಮುಂದುವರಿಯಬೇಕಿದೆ.

ಇಲ್ಲಿನ ಅಧ್ಯಯನದ ಹೊಸ ಸಾಧ್ಯತೆಗಳು ಬದಲಾಗಬೇಕಾದ ಅಧ್ಯಯನದ ದೃಷ್ಟಿಕೋನವನ್ನು ಸಂಶೋಧಕ-ರೈತ-ಸಹಕಾರಿ ಸಂಘ ಈ ಮೂರರ ನಡುವೆ ಇರುವ ಅಂತರ ಇಲ್ಲವಾಗಬೇಕೆಂದು, ಇರುವ ಸರ್ಕಾರಿ ವ್ಯವಸ್ಥೆಯೇ ಸಂಪೂರ್ಣ ಬದಲಾಗಬೇಕೆಂದು, ಸದ್ಯದ ಸಹಭಾಗಿತ್ವ ನೀರಾವರಿ ನಿರ್ವಹಣೆಯ ಮಾದರಿಯನ್ನು ನವೀನ ದೃಷ್ಟಿಕೋನದಲ್ಲಿ ನೋಡುವ ಅಗತ್ಯವಿದೆ. ತಳಸಮುದಾಯಗಳ ಮೂಲಕ ಅಭಿವೃದ್ಧಿಯನ್ನು ಅರ್ಥ ಮಾಡಿಕೊಳ್ಳಬೇಕಾದ ಚಿಂತನಾ ಮಾದರಿಗಳನ್ನು ಇದರೊಂದಿಗೆ ಸೇರ್ಪಡೆಗೊಳಿಸಬೇಕು. ಪಾಶ್ಚಿಮಾತ್ಯ ಮಾದರಿಗಳನ್ನು ಯಥಾವತ್ತಾಗಿ ಅನುಷ್ಠಾನ ಮಾಡುವ ಬದಲು ಪ್ರಾದೇಶಿಕ ವಿಶಿಷ್ಟ ಮಾದರಿಗಳನ್ನು ಕಾರ್ಯಗತಗೊಳಿಸಿದರೆ ಸಹಭಾಗಿತ್ವ ಪರಿಕಲ್ಪನೆಯು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

⊓⊓

## ಅನುಬಂಧ

## ಆಕರಸೂಚಿ


ಅಬ್ದುಲ್ ಅಜೀಜ್ ಮತ್ತು ವಾಸುಕಿ ಕೆ.ಜಿ. (ಸಂ.), ೧೯೯೭, *ಕರ್ನಾಟಕದ ಆರ್ಥಿಕತೆ*, ಕನ್ನಡ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅರವಿಂದ ಮಾಲಗತ್ತಿ, ೧೯೯೯, *ದಲಿತಯುಗ ಮತ್ತು ಕನ್ನಡ ಸಾಹಿತ್ಯ*, ಚೇತನ ಬುಕ್‌ಹೌಸ್, ಮೈಸೂರು.

ಅರವಿಂದ ಚೊಕ್ಕಾಡಿ, ೨೦೦೪, *ಅನ್ವಯ*, ಮೌಲ್ಯ ಪ್ರಕಾಶನ, ನಲ್ಲೂರು, ಕಾರ್ಕಳ ತಾಲ್ಲೂಕು.

ಇಸಾರ್ಡ್, ೧೯೯೨, *ನೀರು ನಿರ್ವಹಣೆಯಲ್ಲಿ ರೈತರ ಪಾಲ್ಗೊಳ್ಳುವಿಕೆ*, (ತುಂಗಭದ್ರಾ ಎಡದಂಡೆ ಕಾಲುವೆಯ ೩೬/೫ ಬಿ ಉಪಹಂಚಿಕೆಯ ಅಚ್ಚುಕಟ್ಟು ಪ್ರದೇಶ. ದಡೆಸೂಗೂರು ಗ್ರಾಮದಲ್ಲಿ), ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಅಧ್ಯಯನ ಸಂಸ್ಥೆ, ಧಾರವಾಡ.

ಇಸಾರ್ಡ್ ಮತ್ತು ಮಲಪ್ರಭಾ ಮತ್ತು ಘಟಪ್ರಭಾ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ ಬೆಳಗಾವಿ, ೨೦೦೧, *ಮಣ್ಣು, ನೀರು, ಬೆಳೆಗಳ ನಿರ್ವಹಣೆ ಮತ್ತು ಸಹಕಾರಿ ಸಂಘಗಳ ಉದ್ದೇಶ, ರಚನೆ, ಕಾರ್ಯನಿರ್ವಹಣೆ, ತರಬೇತಿ ಕೈಪಿಡಿ*, ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಅಧ್ಯಯನ ಸಂಸ್ಥೆ, ಧಾರವಾಡ.

ಕಸ್ತೂರಿ ನೀಲತ್ತಹಳ್ಳಿ (ಸಂ.), ೨೦೦೦, *ಕರ್ನಾಟಕದಲ್ಲಿ ಕೆರೆ ನೀರಾವರಿ*, (ಅನು.) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕುಂದರನಹಳ್ಳಿ ರಮೇಶ್, ೨೦೦೪, *ಜಿ.ಎಸ್. ಪರಮಶಿವಯ್ಯನವರ ಸಮಗ್ರ ನೀರಾವರಿ ಅಭಿವೃದ್ಧಿ ಯೋಜನೆ* ಅಪ್ನಾಸ್ ಸಂಸ್ಥೆ, ತುಮಕೂರು.

ಕೃಷ್ಣ ಜೆ., ೨೦೦೨, *ಮಾನವ ಅಭಿವೃದ್ಧಿಯ ಪ್ರಾದೇಶಿಕ ಆಯಾಮಗಳ ಅಧ್ಯಯನ*, ಪಿಎಚ್.ಡಿ, ಮಹಾಪ್ರಬಂಧ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರಯ್ಯ ಸಿ.ಟಿ.ಎಂ., ೨೦೦೧, *ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗೋವಿಂದಪ್ಪ ಟಿ., ೧೯೯೩, *ಕರ್ನಾಟಕ ನೀರಾವರಿ ಅರ್ಥಶಾಸ್ತ್ರ*, ಸಮಾಜವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು.

ಚಂದ್ರಪೂಜಾರಿ ಎಂ., ೨೦೦೧, *ದೇಶೀಯತೆಯ ನೆರಳಲ್ಲಿ ವಿಕೇಂದ್ರೀಕರಣ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಪೂಜಾರಿ ಎಂ., ೨೦೦೨, *ಸಮುದಾಯ ಮತ್ತು ಸಹಭಾಗಿತ್ವ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಪೂಜಾರಿ ಎಂ., ೨೦೦೪, *ಜನಯೋಜನೆ : ಹೈದ್ರಾಬಾದ್ ಕರ್ನಾಟಕದ ಅನುಭವಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಪೂಜಾರಿ ಎಂ., ೨೦೦೫, *ಸಮಾಜ ಸಂಶೋಧನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ್ ಎಸ್., ೧೯೯೨, *ಅಂಬೇಡ್ಕರ್ ಮತ್ತು ಗಾಂಧಿ*, ಅಕ್ಷರ ಪ್ರಕಾಶನ, ಹೆಗ್ಗೋಡು.

ಚಂದ್ರಶೇಖರ್ ಎಸ್., ೨೦೦೦, *ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ*, (ಅನು.), ನಾಗಣ್ಣ ಸಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ್ ಟಿ.ಆರ್., ೧೯೯೩, *ಅಭಿವೃದ್ಧಿ ಮಿಮಾಂಸೆ* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ್ ಟಿ.ಆರ್., ೧೯೯೯, *ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು*, ಕ್ರೈಸ್ಟ್ ಕಾಲೇಜು, ಬೆಂಗಳೂರು.

ಚಂದ್ರಶೇಖರ್ ಟಿ.ಆರ್., (ಸಂ.), ೨೦೦೦, *ವಿಕೇಂದ್ರೀಕರಣ : ತತ್ವ-ಆಚರಣೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ್ ಟಿ.ಆರ್., ೨೦೦೩, *ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು*, ಸಿವಿಜಿ ಪ್ರಕಾಶನ, ಬೆಂಗಳೂರು.

ಚಂದ್ರಶೇಖರ್ ಟಿ.ಆರ್., ೨೦೦೪, *ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ : ರಾಜಕೀಯ ವೈಫಲ್ಯದ ಒಂದು ಸಂಕಥನ* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ್ ಟಿ.ಆರ್., (ಸಂ.), ೨೦೦೫, *ದಲಿತ ಅಧ್ಯಯನ* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ್ ಹೆಚ್., ೨೦೦೩, *ಕರ್ನಾಟಕದಲ್ಲಿ ಜಲಸಂಪತ್ತು ಮತ್ತು ನೀರಾವರಿ*, ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

ಚಿದಾನಂದ ಮೂರ್ತಿ ಎಂ., ೨೦೦೦, *ವೀರಶೈವ ಧರ್ಮ : ಭಾರತೀಯ ಸಂಸ್ಕೃತಿ* ಮಿಂಚು ಪ್ರಕಾಶನ, ಬೆಂಗಳೂರು.

ಜಗಜೀವನರಾಮ, ೧೯೯೯, *ಜಾತಿ ವ್ಯವಸ್ಥೆ ಸಮಸ್ಯೆ ಮತ್ತು ಸವಾಲುಗಳು*, (ಅನು.), ರಾಹು, ಅನುಭವ ಪ್ರಕಾಶನ, ಗುಲ್ಬರ್ಗಾ.

ಜೀವನ್‌ಕುಮಾರ್ ಮತ್ತು ಸುಶೀಲಾ ಸುಬ್ರಹ್ಮಣ್ಯ (ಸಂ), ೨೦೦೨, *ಕರ್ನಾಟಕ ಮುನ್ನೋಟ : ೨೦೨೫ ಸುಸ್ಥಿರ ಅಭಿವೃದ್ಧಿಗೆ ಮಾರ್ಗೋಪಾಯಗಳು ಮತ್ತು ಕ್ರಿಯಾಯೋಜನೆಗಳು* (ಅನು.) ಜಯಂತಿ ಕೆ.ವೈ., ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಜೋಗನ್ ಶಂಕರ್, ೧೯೯೫, *ಗ್ರಾಮಸಮಾಜ*, ಜೀವ ಪ್ರಕಾಶನ, ಮೈಸೂರು.

ದಾಸನೂರು ಕೂಸಣ್ಣ, ೨೦೦೫, *ರೈತರ ಆತ್ಮಹತ್ಯೆ ಮತ್ತು ದಲಿತರ ನವ ಬ್ರಾಹ್ಮಣಿಕೆ?*, ಮಾತಂಗ ಪ್ರಕಾಶನ, ಮೈಸೂರು.

ದೊರೈಸ್ವಾಮಿ ಆರ್., ೨೦೦೪, *ರಾಷ್ಟ್ರೀಯ ಜಲನೀತಿ ೨೦೦೨*, ಪ್ರಗತಿ ಮತ್ತು ಜಲಸ್ಪಂದನ ಸಂಸ್ಥೆಗಳು, ಬೆಂಗಳೂರು.

ದೊರೈಸ್ವಾಮಿ ಆರ್. ಮತ್ತು ಭವಾನಿಶಂಕರ್ ಬಿ.ಎಸ್., (ಸಂ.), ೨೦೦೧, *ನೀರಾವರಿ ನೀತಿ ಸುಧಾರಣೆಗಳು*, (ಕರ್ನಾಟಕ ನೀರಾವರಿ ಅಧಿನಿಯಮ ೧೯೬೫ಕ್ಕೆ ತಿದ್ದುಪಡಿ ವಿಧೇಯಕ ಬಗ್ಗೆ ರೈತರು ಮತ್ತು ತಜ್ಞರ ಅಭಿಪ್ರಾಯ), ಸಹಯೋಗ, ನೈಸರ್ಗಿಕ ಸಂಪನ್ಮೂಲಗಳ ಸಹಭಾಗಿತ್ವ ನಿರ್ವಹಣೆ ಸಂಸ್ಥೆ, ಬೆಂಗಳೂರು.

ನಾಗೇಶ್ ಎಚ್.ವಿ., ೧೯೮೮, *ಗ್ರಾಮಾಂತರ*, ಸುಜಾತಾ ಪ್ರಕಾಶನ, ಧಾರವಾಡ.

ನಾಗೇಶ್ ಎಚ್.ವಿ., ೨೦೦೪, *ದೊಡ್ಡ ಬೆಟ್ಟದಿಂದ ಇಷ್ಟಷ್ಟು ನೋಟಗಳು*, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

ನಾಗೇಶ್ ಹಾ.ವೆ., ೧೯೮೬, *ಭಾರತೀಯ ಗ್ರಾಮ : ಕೆಲವು ಅಧ್ಯಯನಗಳು*, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಪ್ರೋಲಿಸ್ ಪಾಟೀಲ ಆರ್.ಎಲ್., ೧೯೯೪, *ನೀರಾವರಿ ಮತ್ತು ರೈತರ ಅಭಿವೃದ್ಧಿ*, ಜ್ಞಾನಪ್ರಕಾಶನಪುರ, ಹೂವಿನಹಡಗಲಿ ತಾಲ್ಲೂಕು.

ಜೀಬಿನಹಳ್ಳಿ ಕರೀಗೌಡ, ೨೦೦೨, *ಹೇಮಾವತಿ - ವೈ.ಕೆ. ರಾಮಯ್ಯ ಅಭಿನಂದನೆ ಸಂ.೩*, ವೈ.ಕೆ. ರಾಮಯ್ಯ ಟ್ರಸ್ಟ್, ಕುಣಿಗಲ್.

ಜೋರಲಿಂಗಯ್ಯ ಓ.ಬಿ. ಮತ್ತು ಹುಚ್ಚಪ್ಪ ಮಾಸ್ತರ ಎನ್., ೨೦೦೨, *ಕಾಗೋಡು ಚಳುವಳಿ*, ಸುವರ್ಣ ಸಂಪುಟ, ಮಲೆನಾಡು ಜಾನಪದ ಲೋಕ, ಸಾಗರ.

ಭಗವತ್ ಶರಣ ಉಪಾಧ್ಯಾಯ, ೨೦೦೪, *ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ* (ಅನು.), ಪ್ರಧಾನ್ ಗುರುದತ್ತ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಮನೋಹರ ಚಂದ್ರಪ್ರಸಾದ್ ಡಿ., ೨೦೦೨, *ಪ್ರತಿಸಂಸ್ಕೃತಿ : ಅಂತೋನಿ ಗ್ರಾಂಷ್ಚಿಯ ಚಿಂತನೆಗಳು*, ರಚನೆ ಪ್ರಕಾಶನ, ಬೆಂಗಳೂರು.

ಮರುಳಸಿದ್ಧಯ್ಯ ಎಚ್.ಎಂ., ೧೯೯೩ *ಗ್ರಾಮೋನ್ನತಿ* ಸ್ವಸ್ತಿ ಪ್ರಕಾಶನ, ಬೆಂಗಳೂರು.

ಮಲ್ಲಿಕಾರ್ಜುನ ಜಿ.ಎನ್., ೧೯೯೮, *ಬೋಧಿ ವೃಕ್ಷದ ಕೆಳಗೆ*, ಆನಂದಕಂದ, ಮಲ್ಲಾಡಿಹಳ್ಳಿ.

ಮಲ್ಲಿಕಾರ್ಜುನ ಜಿ.ಎನ್., ೨೦೦೪, *ಬೆಳಗಿನ ಬೆರಗು*, ಲೋಹಿಯಾ ಪ್ರಕಾಶನ, ಬಳ್ಳಾರಿ.

ಮಾಧವ ಗಾಡಗೀಳ ಮತ್ತು ರಾಮಚಂದ್ರಗುಹಾ, ೨೦೦೬, *ಪರಿಸರ ನ್ಯಾಯದ ತಕ್ಕಡಿಯಲ್ಲಿ*, (ಅನು.) ಶಾರದಾಗೋಪಾಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಮೊಗಳ್ಳಿ ಗಣೇಶ್, ೧೯೯೯, *ದಲಿತರು ಮತ್ತು ಜಾಗತೀಕರಣ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೋಹನ ದೇಶಪಾಂಡೆ ಹಾಗೂ ಕುಮಾರ ಎ.ಎಸ್., ೧೯೯೪, *ಸಹಭಾಗಿತ್ವ*, ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಮತ್ತು ಘಟಪ್ರಭಾ ಯೋಜನೆಗಳು, ಬೆಳಗಾವಿ.

ಮೋಹನ್‌ಕೃಷ್ಣ ರೈ ಕೆ., ೨೦೦೪, *ಪ್ರಭುತ್ವ ಮತ್ತು ಜನತೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಾರಾಮ ಹೆಗಡೆ (ಸಂ.), ೨೦೦೨, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಮಚಂದ್ರಗುಹಾ, ೧೯೯೯, *ಜಾಗತಿಕ ಪರಿಸರ ಚರಿತ್ರೆ : ಪರಿಸರ ಸಿದ್ಧಾಂತಗಳ ಅಂತರ್ ಸಾಂಸ್ಕೃತಿಕ ಅಧ್ಯಯನ* (ಅನು.) ಮಾಧವ ಐತಾಳ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ರೋಮಿಲಥಾಪರ್, ಹರ್ಬನ್ಸ್ ಮುಖಿಯ ಮತ್ತು ಬಿಪಿನ್‌ಚಂದ್ರ, ೧೯೯೮, *ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ* (ಅನು.), ಗೋಪಾಲಕೃಷ್ಣರಾವ್ ಕೆ.ಎಲ್., ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಲಕ್ಷ್ಮೀಪತಿ ಸಿ.ಜಿ., ೨೦೦೩, *ಕರ್ನಾಟಕದ ಸಾಮಾಜಿಕ ಬದಲಾವಣೆ ಸಮಾಜಶಾಸ್ತ್ರ ಹಾಗೂ ಸಾಹಿತ್ಯ ನೋಡಿರುವ ಬಗೆ,* ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲಕ್ಷ್ಮೀನಾರಾಯಣ ಎಚ್.ಡಿ., ೧೯೯೭, *ಸಾಮಾಜಿಕ ಸ್ತರ ವಿನ್ಯಾಸ ಮತ್ತು ಚಲನೆ,* ಗೌರಿ ಪ್ರಕಾಶನ, ಬೆಂಗಳೂರು.

ವಂದನಾಶಿವ, ೨೦೦೫, *ಬಿತ್ತದ ಚಿಲುಮೆ* (ಅನು.), ಮಾಧವ ಐತಾಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿಶ್ವೇಶ್ವರಯ್ಯ ಸರ್ ಎಂ., ೨೦೦೫, *ನನ್ನ ವೃತ್ತಿ ಜೀವನದ ನೆನಪುಗಳು* (Memories of My Working Life) (ಅನು.) ಗಜಾನನ ಶರ್ಮ, ಅಂಕಿತ ಪುಸ್ತಕ, ಬೆಂಗಳೂರು.

ವೆಂಕಟರೆಡ್ಡಿ ಎಂ., ೧೯೯೭, *ಕರ್ನಾಟಕದಲ್ಲಿ ನೀರಾವರಿ ಅಭಿವೃದ್ಧಿ : ಸಮಸ್ಯೆಗಳು ಮತ್ತು ಸಂದಿಗ್ಧಗಳು* (ಅನು.) ವಿಜಯಕುಮಾರ್ ಬಿ., ಅಬ್ದುಲ್ ಅಜೀಜ್ ಮತ್ತು ವಾಸುಕಿ ಕೆ.ಜಿ., (ಸಂ.), ಕರ್ನಾಟಕದ ಆರ್ಥಿಕತೆ, ಕನ್ನಡ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶರ್ಮ ಆರ್.ಎಸ್., ೨೦೦೨, *ಪ್ರಾಚೀನ ಭಾರತ* (ಅನು.) ಶಂಕರ ನಾರಾಯಣರಾವ್ ಎನ್.ಡಿ., ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಶ್ಯಾಮಾಚರಣ ದುಬೆ, ೧೯೯೪, *ಭಾರತೀಯ ಸಮಾಜ* (ಅನು.) ಅನಂತರಾಮಯ್ಯ ಆರ್.ಎಲ್., ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ.

ಶೇಷಾದ್ರಿ ಬಿ., ೨೦೦೭, 'ಮಹಿಳೆಯ ದುಸ್ಥಿತಿ ಮತ್ತು ಸಬಲೀಕರಣ ಕೆಲವು ಟಿಪ್ಪಣಿಗಳು', *ಮಹಿಳಾ ಆರ್ಥಿಕತೆ,* ಶ್ರೀಮತಿ ಎಚ್.ಎಸ್., ಶಿವಾನಂದ ಎಸ್., ವಿರಕ್ತಮಠ ಮತ್ತು ಕೃಷ್ಣ ಜೆ., (ಸಂ), ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸುಬ್ಬಣ್ಣ ಕೆ.ವಿ., ಮತ್ತು ಇತರರು (ಅನು), ೧೯೯೫, *ಅಶೀಶ್‌ನಂದಿ ವಿಚಾರ : ಡಾ.ಅಶೀಶ್‌ನಂದಿ ಅವರ ಆಯ್ದ ಬರಹಗಳು,* ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

ಹಿರೇಮಠ ಎಸ್.ಎಸ್., ೨೦೦೫, *ಸಮಾಜ ಸಂಸ್ಕೃತಿ ಸಂಘರ್ಷ,* ಸಂಪುಟ-೧, ಸಿವಿಜಿ, ಪಬ್ಲಿಕೇಷನ್ಸ್, ಬೆಂಗಳೂರು.

ನಿಯತಕಾಲಿಕೆಗಳು

ಅತ್ತಿಗಣಾಳ್ ವೆ.ಶಂಕರರಾವ್, ೨೦೦೪, 'ಇಂದಿನ ನೀರಾವರಿ ವ್ಯವಸ್ಥೆಗೊಂದು ಪರ್ಯಾಯ ಇದೆಯೇ?' ಹೊಸತು, ವಿಶೇಷ ಸಂಚಿಕೆ, ಪು. ೧೫೩-೧೫೬.

ಅಬ್ದುಲ್ ಅಜೀಜ್, ೨೦೦೩, 'ಆರ್ಥಿಕ ವಿಕಾಸ-ಪರ್ಯಾಯ ಚಿಂತನೆ', ಹೊಸತು, ವಿಶೇಷ ಸಂಚಿಕೆ.

ಅರುಂಧತಿರಾಯ್, ೨೦೦೬, 'ಪರಿಣಿತರಿಗೆ ತೀರ್ಮಾನಗಳನ್ನು ಬಿಡಬೇಕೆ?' (ಅನು) ಸಿದ್ಧಗಂಗಮ್ಮ ಕೆ.ಆರ್. ಮತ್ತು ಪರಿಮಳ ನಾಯಕ, ಅನಿಕೇತನ, ಸಂ. ೧೭, ಸಂಚಿಕೆ ೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಚಂದ್ರಶೇಖರ ಟಿ.ಆರ್., ೧೯೯೯, 'ಅಭಿವೃದ್ಧಿ ಪ್ರಕ್ರಿಯೆಯ ಲಿಂಗಸಂಬಂಧಿ ಆಯಾಮಗಳು' ಮಹಿಳಾ ಅಧ್ಯಯನ, ಸಂ. ೧, ಸಂಚಿಕೆ. ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ ರಾ.ನಂ., ೨೦೦೩, 'ಕರ್ನಾಟಕದ ಅಭಿವೃದ್ಧಿ ಹೇಗೆ?' ಹೊಸತು, ವಿಶೇಷ ಸಂಚಿಕೆ.

ತಿಮ್ಮಯ್ಯ ಜಿ., ೧೯೯೮, 'ಎಂ.ಎನ್. ರಾಯ್ ಮತ್ತು ಭಾರತದ ಯೋಜನಾನುಭವ' ರುಜುವಾತು, ಸಂಚಿಕೆ-೩೦, ೫೨-೬೬.

ನರಸಿಂಹರೆಡ್ಡಿ ಡಿ., ೨೦೦೩, 'ಜಾಗತೀಕರಣ ಉದ್ಯೋಗ ಹಾಗೂ ಶ್ರಮಜೀವಿಗಳು' ಹೊಸತು, ವಿಶೇಷ ಸಂಚಿಕೆ.

ನರಸಿಂಹರೆಡ್ಡಿ ಡಿ., ೨೦೦೩, 'ಅಣೆಕಟ್ಟೆಗಳು, ನ್ಯಾಯಪರತೆ ಹಾಗೂ ಲಾಭ ಹಂಚಿಕೆ ಸಮಸ್ಯೆಗಳು' ಹೊಸತು, ವಿಶೇಷ ಸಂಚಿಕೆ.

ಭವಾನಿಶಂಕರ್ ಬಿ.ಎಸ್., ೨೦೦೨, 'ಕೆರೆಗಳ ಜಲ ಕಾರ್ಯನಿರ್ವಹಣೆ ಮತ್ತು ಜನಸಾಮಾನ್ಯರ ಪಾಲ್ಗೊಳ್ಳುವಿಕೆ' ಹೊಸತು, ವಿಶೇಷ ಸಂಚಿಕೆ, ಪುಟ. ೨೨೯-೨೩೧.

ರಾಜಕುಮಾರ್ ಎಚ್. ಮತ್ತು ಮುನಿಕೃಷ್ಣಪ್ಪ ಪಿ.ಎಂ., ೨೦೦೪, 'ಜಮೀನು ಮತ್ತು ನೀರಾವರಿ ನಿರ್ವಹಣೆ', ಯೋಜನಾ, ಸಂ.೨೦, ಸಂಚಿಕೆ-೪.

ಶಿವಶಂಕರ್ ಕೆ., ೨೦೦೩, ಜಲಸಂಪನ್ಮೂಲ, ಜಲಮಾಲಿನ್ಯ ಮತ್ತು ಜಲಸಂರಕ್ಷಣೆ, ಹೊಸತು, ವಿಶೇಷ ಸಂಚಿಕೆ, ಪು. ೧೩೯-೧೪೩.

ಶೇಷಾದ್ರಿ ಬಿ., ೨೦೦೨, 'ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆ : ಕರ್ನಾಟಕದ ಅನುಭವಗಳು, ಅಭಿವೃದ್ಧಿ ಅಧ್ಯಯನ ಸಂ-೧, ಸಂಚಿಕೆ-೨.

ವರದಿಗಳು

ಕರ್ನಾಟಕ ಸರಕಾರ, `ಶಿವಮೊಗ್ಗ ಜಿಲ್ಲೆಯ ವಿವಿಧ ಸಾಲಿನ ಅಂಕಿ-ಅಂಶಗಳ ನೋಟ', ಜಿಲ್ಲಾ ಪಂಚಾಯತ್, ಶಿವಮೊಗ್ಗ.

ಕರ್ನಾಟಕ ಸರ್ಕಾರ, ೨೦೦೧, `ಪರಿಸರ ಸಮಿತಿಯ ಅಂತಿಮ ವರದಿ', ನೀರಾವರಿ ಇಲಾಖೆ, ಬೆಂಗಳೂರು.

ಪ್ರಾದೇಶಿಕ ಸಹಕಾರ ನಿರ್ವಹಣಾ ಸಂಸ್ಥೆ, ೨೦೦೬, `ಸಹಭಾಗಿತ್ವದಲ್ಲಿ ನೀರು ನಿರ್ವಹಣೆಗೆ ಸಂಬಂಧ ಪಟ್ಟಂತೆ, ಅಧ್ಯಕ್ಷರು, ಉಪಾಧ್ಯಕ್ಷರು, ನಿರ್ದೇಶಕರು ಮತ್ತು ಕಾರ್ಯದರ್ಶಿಗಳಿಗೆ ತರಬೇತಿ ಕಾರ್ಯಕ್ರಮ ಕೈಪಿಡಿ', ಪ್ರಾದೇಶಿಕ ಸಹಕಾರ ನಿರ್ವಹಣಾ ಸಂಸ್ಥೆ, ಬೆಂಗಳೂರು.

ಜಲ ಮತ್ತು ನೆಲ ನಿರ್ವಹಣೆ ಸಂಸ್ಥೆ, ೨೦೦೩, `ನೀರು ಬಳಕೆದಾರರ ಸಹಕಾರ ಸಂಘಗಳ ಪದಾಧಿಕಾರಿಗಳ ತರಬೇತಿ ಕೈಪಿಡಿ', ವಾಲ್ಮಿ, ಧಾರವಾಡ.

ಭದ್ರಾ ಕಾಡಾ ಶಿವಮೊಗ್ಗ, `ಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವಿವಿಧ ಸಾಲಿನ ವಾರ್ಷಿಕ ವರದಿಗಳು', ಭದ್ರಾ ಕಾಡಾ ಶಿವಮೊಗ್ಗ.

ಭಾರತದ ಗ್ಯಾಸೆಟಿಯರ್, ೧೯೮೭, `ಭಾರತದ ದೇಶಕೋಶ', ಸಂ. ೩, ಭಾಗ ೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಭಾರತ ಗ್ಯಾಸೆಟಿಯರ್, ೧೯೮೭, `ಭಾರತದ ದೇಶ-ಕೋಶ', ಸಂ.೩, ಭಾಗ ೩, ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ, ಬೆಂಗಳೂರು.

**Books**

Agrawal Bina, 1981. *Agricultural Modernization and Third World Women : Pointers from the Literature and an empirical Analysis*, ILO working paper.

Agrawal Bina, 1994. A Field of one's own : *Gender and Land rights in South Asia*, Cambridge University Press, U.K.

Anil C. Shah, 2006, *Fading Shine of the Golden Decade, The establishment Strikes Back* in Parthasarathy R. and Sundarshan Iyengar (eds), New Development Paradigms and Challenges for Western and Central India, Vol-2, Concept Publishing Company, New Delhi.

Anurag Mohanty, 2000, *Farmer and Local participation in water management : Some reflections on National and International experience* in Gynana

Chandrakar and Mamata Swain (eds). Farmer and Local participation in Irrigation Management, Common Wealth publishers, New Delhi.

Bailey F.G., 1960, *Tribe, Cast and Nation : A study of political activity and political change in Higher land orissa*, Manchester University Press, Manchester.

Beteille A., 1971, *Caste, Class and Power changing patterns of stratification in a Tanjore village*, University of California press, London.

Balan, Jean Marie and Plalteau J.P., 1996, *Halting degradation of Natural resources : Is there a role for Rural communities*, Oxford, FAO and clarendon.

Bansil P.C., 2004, *Water Management in India*, concept publishing company, New Delhi.

Berch Berberoglu (ed), 1992, *Class, State and Development in India*, Sage publications, New Delhi.

Bjorn Heltne, 2002, *Current Trends and Future Options in Development Studies*, in Vandana Desai and Robert B. Potter (eds), The Companion to Development Studies, Arnold, London.

Brewer J.D., etal, 1999, *Irrigation Management Transfer in India : Policies, processes and performance*, Oxford and IBH, New Delhi.

Chambers R., Saxena N.C., and Shah T., 1989, To The hands of the poor water and trees, Oxford and IBH Publishing company, New Delhi.

Chandrasekharan B., 2002, *Organisational change for participatory Irrigation Management : India (1). in Wijayaratna (ed). Organizational change for participatory Irrigation management*, Asain productivity organization, Tokyo.

Chopra K., Gopal K. Kadekodi and Murthy M.N., 1990, Participatory Development : People and Common property Resources, Sage publications, New Delhi.

Chourasia, Pratik Ranjan, 2002, *Organizational change for participatory Irrigation Management : India (2)*, In Wijayaratna (ed), Organizational change for participatory Irrigation Management, Asain productivity organization, Tokyo.

Craig G. and Mayo M. (eds), 1995, *Community Empowerment : A Reader in Participatory and Development*, Zed Books, London.

Das D.K., 2005, *Decentralised Governence of Irrigation Infrastructure for sustainable agriculture*, Seminar paper, NIRD, Vol-4, Hyderabad.

Das D.K., Mangaraj B.K., and Acharya R.C., 2004, *Performance monitoring of Irrigation Management Reform (panipanchayats) in Orissa : A Multi perspective approach*, 45th Technical annual, Institution of Engineers (India), Orissa state centre.

Desai Vasant, 1991, *Fundamentals of Rural Development : A systems approach*, Himalaya Publishing House, Bombay.

Desai Vandana and Robert B. Potter (eds), 2002, *The companion to development studies*, Arnold publications, London and Oxford University Press, NewYork.

Deshpande R.S. and Bhende M.J., 2006, *Participatory Approach in a resource centred programme : A view of Socio-Economic Issues*, in Parthasarathy R and Sudarshan Iyengar (eds), New Development Paradigms and Challenges for Western and Central India, Vol-2, Concept Publishing Company, New Delhi.

Dhawan B.D., 1998, *Studies in Indian Irrigation*, Commonwealth Publishers, New Delhi.

Dube S.C., 1955, *Indian Village*, Routledge and Kegan paul, London.

Dube S.C., 1958, *India's Changing Villages : Human Factors in Community Development*, Routledge and Kegan paul, London.

Dube S.C., 1994, *Tradition and Development*, Vikas Publishing House, New Delhi.

Ganesh Pangare, 2002, *Sealing up participatory Irrigation Management in India : Lessons Learnt from Andhrapradesh Model and Future Strategies*, in Hooja R., Pangre G. and Raju K.V. (eds), Users in Water Management, Rawat Publications, New Delhi.

Gurjar R.K., 1994, *Socio-Economic Dimesion of Irrigation*, Printwell, Jaipur.

Gulati A., Meinzan Dick R.S., and Raju K.V., 2005, *Institutional Reforms in Indian Irrigation*, Sage Publications, New Delhi.

GOI, Planning Commission, 2007, *Karnataka Development Report 2007*, Academic Foundation Publications, New Delhi.

Government of Karnataka, 2005, *Details of Water Users Co-operative Societies Bhadra Reservair Project and Tunga Anicut project*, Executive Engineer, No.4, B.R.L.B.C. Division, Bhadravathi.

Hirschman, 1958, *The Strategy of Economic Development*, Yale University Press, Newyork.

Hooja R., 2002, *Participatory Irrigation Management in the Indian Context*, in Hooja R., Pangare G. and Raju K.V., (eds), Users in Water Management, Rawat Publications, New Delhi.

Hooja R., Ganesh Pangare and Raju K.V., 2002, *Users in Water Management : The Andhra Model and its replicability in India*, Rawat Publications, New Delhi.

ISARD, 1993, *Farmers Participation in Water Management in the 18th Distributory of Malaprabha Right Bank Canal at Arekurahatti*, Institute for Studies on Agriculture and Rural Development, Dharwad.

Ishwaran K., 1968, *Shivapura : A South Indian Village*, Routeledge and Kegan Paul, London.

Jean Dreze and Amartysen, 2002, *India : Development and Participation*, Oxford University Press, Delhi.

Kulkarni Seema, et al, 2007, *Women. Water and Livelihood : A Review of policy towards evolving a Gender - just vision for water*, Women and Water Network Society for promoting participative, Eco-system Management (SOPPECOM), Pune.

Mahapatra I.C., 2000, *Socio-Economic and Enviornmental Implications of Water Management*, in Gynana Chandrakar and Mamata Swain (eds), Farmer and local participation in irrigation management, Commonwealth Publishers, New Delhi.

Manor J., 1997, Karnataka : Cast, Class, Dominance and Politics in a cohesive society, in Sudipta Kaviraj (ed.), Politics in India, Oxford University Press, Delhi.

Muraleedharn K., 2005, *Participatory Rural Development Some Observations on the Reality and Rhetoric of participation from the real world experiments*, NIRD seminar paper, vol-4, Hyderabad.

Maria Saleth R. and Ariel Dinar, 2004, *The Institutional Economics of Water : A cross country Analysis of Institutions and performance*, Edward Elger a co-publication with the World Bank, USA.

Mayer A., 1997, *Cast in an Indian Village : Change and continuity 1954-1992*, in Fuller C.J. (ed), Cast Today, Oxford University Press, Delhi.

Michael P. Todaro, 1985, *Economic Development in Third World*, Orient Longman, London.

Myrdal Gunnar, 1968, *An Approach to the Asian Drama*, Vintage Books, New York.

Myrdal Gunnar, 1977, *The Challenge of World Poverty : A World Anti-poverty programme in out line*, Panthcan Books, New York.

Nanda P. and Srivatsava R.C., 2000, *Participative Water Management : An Intervention Approach* in Gynana Chandrakar and Mamata Swain (eds), Farmer and Local participation in Irrigation Management, Common Wealth Publishers, New Delhi.

Nelson and Wright, 1995, *Participation and Power*, in Nelson and Wright (eds), Power and Participatory, Development : Theory and practice, International technology publications, London.

Nirmal Sengupta, 1991, *Managing Common Property : Irrigation in India and the Philippines*, Sage Publications, New Delhi.

Oblitas K. and Peter J.R., 1999, *Transferring Irrigation Management of Farmers in Andhrapradesh, India*, World Bank Technical paper 449, World Bank, Washington, D.C.

Ostrom E., 1990, *Governing the Commons : The Evolution of Institutions for Collective Action*, Cambridge University Press, Cambridge.

Parthasarathy R. and Sudarshan Iyengar (eds) 2006, *New Development paradigms and challenges for Western and Central India*, Concept Publishing Company, New Delhi.

Parvathamma C., 1971, *Politics and Religion : A Study of Historical interaction between Socio-Political Relationships in a Mysore Village*, Sterling, New Delhi

Patil R.K., and Lele S.N., 1996, *Irrigation Co-operatives in Maharashtra : Experiences and Lessons*, in Katar Singh and Ballabh V. (eds), Co-operative Management of Natural Resources, Sage Publications, New Delhi.

Pieterse J.N., 2001, *Development Theory : Deconstructions and Reconstructions*, Vistaar Publications, New Delhi.

Raymand Peter J., 2002, *Irrigation performance in Andhra Pradesh*, Hooja R., Pangre G. and Raju K.V., (eds), Users in Water Management, Rawat Publications, New Delhi.

Raju K.V. and J. Brewer, 1996, *Types of Irrigation Management Transfer Models in India*, Paper presented at IASCP, Berkeley.

Raju K.V., Gulati A. and Meinzen Dick, 2003, *Innovations in Irrigation Financing. Tapping Domestic Financial Markets in India*, International Food Policy Research Institute, NewYork, Washington, D.C.

Saleth R.M., 1996, *Water Institutions in India : Economics, Law and Policy*, Commonwealth Publishers, New Delhi.

Sathpal Puliani (ed.), 2003, *The Karnataka Irrigation Act 1965 : Karnataka Act No.16 of 1965*, Karnataka Law Journal Publications, Bangalore.

Sankara Reddi G.H. and Yellamanda Reddy T., 1995, *Efficient use of Irrigation Water*, Kalyani Publishers, Hyderabad.

Sen Amartya, 1984, *Resources, Values and Development*, Oxford University Press, New Delhi.

Sen Amartya, 1992, *Inequality Re-examined*, Oxford, Clarendon Press, U.K.

Sen Amartya, 1999, *Employment, Technology and Development*, Oxford University Press, New Delhi.

Sen D. and Das P.K., 1986, *Water Utilisation at Farm Level : A Study in Tungabhadra Command Area*, NIRD, Hyderabad.

Shah Tushaar, 2000, *Water Against Poverty : Livelihood Oriented Water Resource Management*, in Mollinga P. (ed), Water for Food and Rural

Development- Approaches and Initiatives in South Asia, Sage Publications, New Delhi.

Sib Ranjan Mishra, 2002, *Managing Canal Irrigation in India : Problems and their Resolutions*, Concept Publishing Company, New Delhi.

Singh K.K., (ed), 1991, *Farmers in the Management of Irrigation Systems*, Sterling Publishers, New Delhi.

Singh Kater and Ballabh V. (eds), 1996, *Co-operative Management of Natural Resources*, Sage Publications, New Delhi.

Singh K.K., Turbal Hassan S. and Sitapathi Rao C., 1997, *Irrigation Systems in decay : what farmers can do*, Booklinks Corporation, Hyderabad.

Shiva Vandana and Gitanjali Bedi (eds), 2002, *Sustainable Agriculture and food Security : The Impact of Globalisation*, Sage Publications, New Delhi.

Shumperber, 1934, *The Theory of Economic Development*, Hardword University Press, Massachusette.

Sivamohan M.V.K. and Scott C.A., 1994, *India : Irrigation Management partnerships*, Booklinks Corporation, Hyderabad.

Srinivas M.N., 1987, *The Dominent Caste and Other Essays*, Oxford University Press, Delhi.

Srinivas M.N., 2000, *The Collected Essays*, Oxford University Press, Delhi.

Syed Nawab H. Naqvi, 2002, *Development Economics Nature and Significance*, Sage Publications, New Delhi.

Vaidyanathan A., 1999, *Water Resource Management : Institutions and Irrigation Development in India*, Oxford University Press, New Delhi.

Vijay Shyamala C. and Sithapathi Rao C., 2002, *Role of Women in participatory Irrigation Management : A Study in Andhrapradesh*, in Hooja R., Pangare G. and Raju K.V. (eds), Users in Water Management : The Andhra Model and its Replicability in India, Rawat Publictions, New Delhi.

**Journals**


Agarwal Bina, 1986, Women, Poverty and Agricultural Growth in India, *Journal of Peasant Studies*, Vol-13.

Agarwal Bina, 2001, Participatory Exclusions, Community Forestry and Gender : An Analysis for South Asia and conceptual Frame work, *World Development*, Vol-29, No.10.

Ahamad S., 1999, Changing Gender Roles in Irrigation Management : Sadguru's Lift Irrigation Co-operatives, *Economic and Political Weekly*, Vol-34, No.51.

Arvind Kumar (ed.), 1998, Community participation in the management of Natural Resoures. *Encyclopaedia of Rural Sociology*, Anmol publications New Delhi.

Buggi Chandrashekara, Govinda Gowda S., and Subbareddy P.N., 1996, The Development of Irrigation command-A Sociological Dimension, *Bhagirath* Vol-43, (1-4).

Bardhan P.K., 2000, Irrigation and Co-operation : An empirical Analysis of 48 Irrigation communities in South India, *Economic Development and Cultural Change*, Vol-48(4), Pp. 847-865.

Ballabh V., 2003, Politics of Water Management and Sustainable Water Use, *Indian Journal of Agricultural Economics*, Vol-58, No.3.

Bose Ruksan, 2003, The end? *Down to Earth*, Pp-38-41.

Dadibhavi R.V., 2000, Management of common property Resources : A Review and some policy Issues, *Journal of Rural Development*, Vol-19, No.2.

Dhawan B.C., 1998, India's Irrigation sector : Myths and Realitics, ISAE Presidential Address, *Indian Journal of Agricultural Economics*, Vol-53, No.1.

Dinakar V.S., 1996, Command Area Development Programme and Efficient Utilisation of Irrigation Water, *Journal of Water Management*, Vol-4, Pp. 58-64.

Folke Steen, 1998, Conflicts over Water and Land in South Agricultural - A political economy perspective, *Economic and Political Weekly*, Vol-33, No-7.

Folke Steen, 2000, Conflicts over Water for Irrigation in the Cauvery Delta, South India - Some Institutional Implications, *Journal of Social and Economic Development*, Vol-3, No-1.

Hanumantha Rao C.H. and Gulati A., 1994, Indian Agriculture : Emerging Perspectives and Policy Issues, *Economic and Political Weekly*, Vol-29, No.53.

Hiremath K.C., and Ramanatham Chetty, 1998, Irrigation Development in Karnataka and utilization, *Bhagirath* 32, 147-154.

Jasveen Jairth, 1999, Participatory Irrigation Management : Experiments in Andhra Pradesh, *Economic and Political Weekly*, Vol-35, No.40.

Kumaran K.P., 2006, Capacity Building of Community based organisations for participatory Development : Need Approach and Strategy, *Journal of Social and Economic Development*, Vol-8, No-1.

Manor J., 2004, User Committees : A Potentially Damaging New wave of Decentralisation?, *European Journal of Development Research*, Pp. 192-213.

Manor J., 2007, Change in Karnataka over the Last Generation : Villages and Wider Context, *Economical and Political Weekly*, Vol-XLII, No-8, Pp. 653-660.

Marothia D.K., 2003, Enhancing Sustainble Management of Water Resource in Agriculture Sector : The Role of Institutions, *Indian Journal of Agricultural Economics*, Vol-58, No.3.

Marothia D.K., 2005, Irrigational Reforms in Canal Irrigation System : Lessons from Chhattisgarh, *Economic and Political Weekly*.

Meinzen-Dick R. and Zwarteveen M., 1998, Gendered Participation in water management : Issues and Illustrations from water users associations in South Asia, *Agriculture and Human Values*, Vol-15, Pp.337-345.

Mitra A.K., 1996, Irrigation Sector Reforms - Issues and Approaches, *Economic and Political Weekly*, Vol-27, No. 26.

Mitra A.K., 1998, Development and Management of Irrigation in Maharastra : With Special Reference to Major and Medium surface Irrigation systems, *Economic and Political Weekly*, Vol-33, No.26.

Mosse D., 1994, Autharity. Gender and Knowledge : Theoretical Reflections on the practice of participatory Rural Appraisal. *Development and Change*, Vol-25, Pp. 497-526.

Nandy A., 1989, Shamans, Savages and Wilderness : On the audibility of dissent and the future of civilizations, *Alternatives*, Vol-14, Pp. 263-277.

Navalawala B.N., 1999, Improving Management of Irrigation Resources, *Yojana*, Vol-43, No.1.

Niranjan Panth, 1999, Impact of Irrigation Management Transfer in Maharastra : An Assessement, *Economic and Political Weekly*, Vol-34, No. 13.

Paul Streeten, 1998, Shifting Fashions in Development Dialogue, Political Economy *Journal of India*, Vol-7, No.2.

Patil S.T., 2001, Key Issues in Implementation of participatory Irrigation Management, *Jalasampanmula*, Fortnightly (Kannada), Vol-2, Water Resources Development Organisation, Bangalore.

Planning Commission, 2006, Agricultural Policy, 11th plan Approach paper, *Yojana*, Vol-50, Independence day Special.

Pranb, Bardhan, 2002, Decentralisation of governance and development, J*ournal of Economic Perspectives*, vol-16, No-4.

Putnam R., 1993, The prosperous community, Social capital and public life, *American prospect*, Vol-13, Pp.34-42.

Raju K.V., and Venkatachalam L., 2004, Irrigation in Karnataka : Status, Issues and Strategy, Draft Prepared for Karnataka Development Report, *Institute for Social and Economic Change*, Bangalore.

Raju K.V. and Amarnath H.K., 2001, Irrigation Subsidies in Karnataka : A Growing constraint for Reforms, Working paper No.93, *Institute for Social and Economic Change*, Bangalore.

Ratna Reddy V., 2004, Managing Water Resources in India : A System Review, *Journal of Social and Economic Development*, Vol-6, No-2.

Ratna Reddy V. and Prudhvikar Reddy P., 2006, How Participatory Is Participatory Irrigation Management? Water users Associations in Andhra Pradesh, *Economic and Political Weekly*, Vol-40, No-53.

Ravishankar A., 1997, Irrigation Development in Karnataka – An Overview, *Bhagirath*, Vol-45, No-4.

Reddy V Ratna, 2004, Managing Water Resources in India : A Synoptic Review, *Journal of Social and Economic Development*, Vol-6, No.2.

Sainath P., 2006, Privatisation : Come hell or high Water, *The Hindu*, March 22, Pp-10.

Surinder Sud, 2006, Irrigation and Agriculture, *Yojana*, Vol-50, Independence day Special.

Singh R.P., 1993, Women's Participation in Indian Agriculture, *Journal of Rural Development*, Vol-12, No-1.

Swaminathan M.S., 2006, Agricultural Renewal and Prosperity, *Yojana*, Vol-50, Independence day Special.

Tisdell J., 1996, The Price of Irrigation Water, *Economic and Political Weekly*, 26(3): 95-103.

Vaidyanathan A., 1991, Report on Pricing of Irrigation Water, *Indian Journal of Agricultural Economics*, 49(1): 107-123.

## Reports

Buggi Chandrasekhar and Hulagur Basavaraj, 2002, *Evaluation of N.G.O. Intervention in Local Irrigation Management : Dhadesugur case study in local organisation in Canal Irrigation-changing relations between water users and the state in Karnataka, India*, IDPAD Project End Report, ISARD, Dharwad.

Buggi Chandrasekhar, Nasreen Salma and Deshpande S.H., 2002, *Farmers initiated Local Organization for Irrigation Management : A Successful Experiment in UKP, Karnataka*, IDPAD Project End Report, Institute for Studies on Agriculture and Rural Development, Dharwad.

Buggi Chandrasekhar, Prasanna H.C. and Veeresh A., 2002, *Government Sponsored Water Users. Co-operative society in Hemavathi Irrigation Project*, IDPAD Project End Report, ISARD, Dharwad.

Census of India, 2001, *District Population Booklet, Shimoga Karnataka*, Series-30, Directorate of Census Operations, Karnataka.

Doraiswamy R. and Peter P. Mollinga, 2002, *Forms of Organisation in Water Management : The case of Tungabhadra Irrigation System*, IDPAD project End Report, ISARD, Dharwad.

Government of Karnataka, 1980, *The Karnataka Command Areas Development Act 1980*, Department of Law and Parlimentary Affairs, Karnataka.

Government of Karnataka, 2002, *High Power Committee for Redressal of Regional Imbalances*, Final Report, 2002.

Government of Karnataka, 1993, *Public Investmants in Irrigation in Karnataka : Issues in Financial Management*, Special Studies Division of the Planning Department, Bangalore.

Government of Karnataka, 2004, *Annual Report 2004-05*, Water Resources Department, Bangalore.

Karnataka Gazette, 1980, *Draft of the Karnataka Command Areas Development Rules 1980*, Karnataka Gazette dated 4th december 1980, No.874.

Madhava Reddy K.V., 2000, Theories of participation and its Applications to Technology Evaluation, A Seminar Report, University of Agricultural Sciences, Bangalore.

Nanjundappa D.M., 1999, *Decentralised Planning and Financing Rural Development in Karnataka, India*, State Planning Board, GOK, Bangalore.

Patil S.T., 2005, *Status paper on implementation of participatory Irrigation Management in Karnataka*, Water and Land Management Institute (WALMI), Dharwad.

Sakthivadivel R., Brewer J., Bhatia R., Narayanamurthy S. and Rao P.S., 1996, *Evaluation of Schemes under NWMP-I : Bhadra Scheme in Karnataka and Sathanur Scheme in Tamilnadu*, Main Report, Vol-I, International Irrigation Management Institute (IIMI) Colombo, Srilanka.

UNDP, 2002, *Human Development Report 2002 : Deepening Democracy in a Fragmented World*, Oxford University Press, New York.

### Unpublished Theses


Govardhan Rao, 1998, *An Economic Analysis of Cropping Systems in left bank canal command area of Thungabhadra project-Karnataka*, Ph.D. Thesis, University of Agricultural Sciences, Dharwad.

Hulagur Basavaraj, 2002, *A Study on Irrigation Management efficiency among head - reach and tail end Farmers in Hemavathy Irrigation project in Karnataka*, Ph.D. Thesis, University of Agricultural Sciences, Bangalore.

Hugar L.B., 1997, *Performance of Canal Irrigation System in Thungabhadra Project-An Economic Analysis*, Ph.D. Thesis, University of Agricultural Sciences, Dharwad.

Purnima K.S., 2001, *A Study on the performance of Water Users Associations (WUAs) in Khammam District of Andhrapradesh*, Ph.D. Thesis, University of Agricultural Sciences, Dharwad.

Rajendra S. Poddar, 1999, *Economic Analysis of Farmers participatory Approach for Irrigation system Management in Karnataka - A case study of Chikkapadasalagi Barrage*, Ph.D. Thesis, University of Agricultural Sciences, Dharwad.

Ravi B.M., 2001, *Pricing of Surface Water in Bhadra Command Area - A Resource Economics Study*, Ph.D. Thesis, University of Agricultural Sciences, Bangalore.


❑ ❑

